# ಸಂಪಾದಕನ ಅರಿಕೆ

ದೇವಾಂಶರೂ ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ಮನೋಹರ ವಿಠಲರ ಈ ಮಹಾ ಕಾವ್ಯವು ಅತಿ ಮನೋಹರವಾಗಿದೆ. ಹರಿದಾಸರು ಕೇವಲ ಭಗವದ್ಭಕ್ತರು ಜ್ಞಾನಿಗಳು. ಭಕ್ತಿಪಂಥದವರು ಭಕ್ತಿಯುತವಾದ ಪದಸುಳಾದಿಗಳನ್ನೇ ರಚಿಸಿರುವರು ಅಲಂಕಾರಾದಿ ಕಾವ್ಯವನ್ನರಿತವರಲ್ಲ ಹರಿದಾಸ ಸಾಹಿತ್ಯದಲ್ಲಿ ಕಾವ್ಯಗಳೇ ಇಲ್ಲವೆಂಬುದು ಕೆಲ ಸಾಮಾನ್ಯರ ಅಭಿಪ್ರಾಯ. ಶ್ರೀ ಪುರಂದರ ಶ್ರೀ ವಿಜಯದಾಸರ ದಾಸ ಸಾಹಿತ್ಯ ಸಾಗರವು ಕಾವ್ಯಮಯವಾಗಿ ಅನಂತ ಕಾವ್ಯರತ್ನಗಳಿಂದ ಸೂಸುತ್ತದೆ ಸಮುದ್ರದಲ್ಲಿ ಈಜಾಡಿ ರತ್ನ ಪಡೆಗಳ ಸ್ಥಾನವನ್ನರಿತು ಮುಳಿಗಿ ಅಪಾರವಾದ ನಾನಾತರದ ಅಮೌಲ್ಯ ರತ್ನಗಳನ್ನು ತೆಗೆದು ಪರಿಶುದ್ಧವಾಗಿ ಶೋಧಿಸಿ ರಾಜರ ಮುಕುಟಾಭರಣಕ್ಕೆ ಯೋಗ್ಯವಾದುವೆಂದು ರಾಜರಿಗೆ ಅರ್ಪಿಸಿ ಬಹುಮಾನ ಪಡೆಯುವಂತೆ, ದಾಸ ಸಾಹಿತ್ಯ ಶಫರಿಗಳಾಗಿ ಈಜಾಡಿ ಸಂಶೋಧನದಿಂದ ಕಾವ್ಯ ರತ್ನಗಳನ್ನು ಅರಿತು ತೆಗೆದು ಬೆಳಗುವ ಜಾಣರು ಬಹು ವಿರಳವಾದುದರಿಂದಲೇ ಹರಿದಾಸ ಸಾಹಿತ್ಯದಲ್ಲಿ ಕಾವ್ಯಗಳಿಲ್ಲವೆಂಬ ಭಾವನೆ ಜ್ಞಾನಿಗಳಾದ ಶ್ರೀ ಪ್ರಸನ್ನ ವೆಂಕಟ ದಾಸರು ಸಾಹಿತ್ಯದಲ್ಲಿಯ ನವರತ್ನ ಮೂಟೆಗಳನ್ನೇ ನಿರಾಯಾಸ ಬೈಲಿಗೆ ತೆಗೆದು ಕಾವ್ಯಮಯ, ಛಂದೋಮಯ ನವರಸಾಲಂಕಾರಯುಕ್ತ ಅನೇಕ ಪದ-ರಾಯಿ ಸುಳಾದಿ ದಶಮಸ್ಕಂಧ ಭಾಗವತಾದಿ ಗ್ರಂಥಗಳನ್ನು ರಚಿಸಿ ಲೋಕೋಪಕಾರಗೈದಿದ್ದಾರೆ ದೇಶ ದೇಶದಲ್ಲಿ ಇವರ ಕಾವ್ಯಗಳು ಪ್ರಸಿದ್ಧವಾಗಿವೆ

ನಂತರ ಅಪರೋಕ್ಷ ಜ್ಞಾನಿಗಳಾದ ಶ್ರೀ ಮನೋಹರ ವಿಠಲದಾಸರು ಮನೋಹರವಾದ ನವರಸಾಲಂಕಾರಯುಕ್ತ ಮಹಾ ಕಾವ್ಯಗಳನ್ನು ರಚಿಸಿ ಹರಿದಾಸ ಸಾಹಿತ್ಯ ಸುಂದರಿಯ ಮುಕುಟವನ್ನು ದಿವ್ಯ ರತ್ನಗಳ ಜೋಡಣೆಯಿಂದ ಅಲಂಕರಿಸಿದ್ದಾರೆ. ಶ್ರೀ ಪ್ರಾಣೇಶ ವಿಠಲದಾಸರು ಶ್ರೀ ಹರಿವಾಯು ಸ್ತುತಿ ಮುಂತಾದ ಅನೇಕ ಕಥೆಗಳನ್ನು ಕಾವ್ಯರೂಪವಾಗಿ ರಚಿಸಿದ ಅಪರೋಕ್ಷ ಜ್ಞಾನಿಗಳು.

ಶ್ರೀ ಮನೋಹರ ವಿಠಲರು ರಚಿಸಿದ ನಾನಾಲಂಕಾರದಿಂದ ಯುಕ್ತವಾದ ಕಾವ್ಯಗಳನೇಕ ಉಪಲಬ್ಧವಾಗಿವೆ ಮೊದಲಿಗೆ ಅಚ್ಚಾದ ಶ್ರೀ ಕೃಷ್ಣ ಜಯಂತಿ ಕಥಾ ಕಾವ್ಯವು ಮಹಾ ಪ್ರೌಢಿಮೆಯಾಗಿ ಉಚ್ಚ ಜ್ಞಾನಿಗಳಾದ ಕವಿವರ್ಯರ ಮನ ಮೆಚ್ಚಾಗಿ ಮನವನ್ನು ಕರಗಿಸುವಂಥದಿದೆ ಶ್ರೀ ಮನ್ಮಥ ವಿಲಾಸವು ರಸಭರಿತವಾಗಿ ಕಾಮಕೇಳಿಗಳ ಅಲಂಕಾರಗಳು ಸಹ ಕಾಮನಯ್ಯನ ಸ್ತುತಿಪರವಾಗಿವೆ ಇದು ಅಪರೋಕ್ಷ ಜ್ಞಾನಿಗಳಲ್ಲದ ಇತರ ಕವಿಗಳಿಂದ ಸರ್ವಥಾ ಸಾಧ್ಯವಲ್ಲ ಈ ಎರಡೂ ಕಾವ್ಯಗಳು ದಾಸರ ಇತರ ಕಾವ್ಯಗಳು ನಮ್ಮ ನಾಡಿನಲ್ಲಿ ಪ್ರಸಿದ್ಧವಾಗಿವೆ.

ಪ್ರಸ್ತುತ ಈ ಮಹಾಕಾವ್ಯವಾದ ಅನಂತನ ಕಥೆಯು ಭವಿಷ್ಯೋತ್ತರ ಪುರಾಣೋಕ್ತವಾದುದು. ಪ್ರತಿವರುಷ ಭಾದ್ರಪದಶು||೧೪ರಂದು ಮಾಡುವವ್ರತ, ಬಹು ರಸಭರಿತ, ನವರಸಾಲಂಕಾರಯುಕ್ತವಾಗಿದೆ ಜ್ಞಾನಿಗಳ ಮನಮೆಚ್ಚು, ಕವಿಗಳ ಶ್ರುತಿಗೆ ಕಾವ್ಯಾಭರಣ, ರಾಜಜ್ಞರಿಗೆ ವೀರ, ಅರಸಿಕರಿಗೆ ಎದೆಗಿಚ್ಚಾಗಿದೆ ದೈವಿ ವರ ಬಲದ ಸಂಪದದಿಂದ ರಚಿಸಿದ ಮಹಾಕಾವ್ಯವಿದು.

## ಕವಿವರ್ಯರ ಪರಿಚಯ

ಶ್ರೀ ಮನೋಹರ ವಿಠಲರು ತಾವೇ ತಮ್ಮ ಪರಿಚಯ ಪೀಠಿಕಾ ಸಂಧಿಯಲ್ಲಿ ಮಾಡಿಕೊಟ್ಟಿರುವರು ಪದ್ಯ ೨೫.

ಲೋಕ ಪ್ರಸಿದ್ಧ ಮಾನವಿ ದೇಶಕುಲಕರಣಿ ।
ನಾಕಾಧಿಪತಿಗೆ ಮುಳಿದವನ ಗೋತ್ರೋದ್ಭವಂ ।
ಶ್ರೀಕಾಂತ ಭಜಕ ತಿರ್ಮಲರಾಯನಾತ್ಮಜಂ ನಾರಾಯಣಾಖ್ಯಕರುಣಾ||
ಕೋಕನದ ದಳನೇತ್ರನಂತನ ಮಹತ್ಮೆಯವ ।
ನೀ ಕನಡಭಾಷಾ ಪ್ರಬಂಧದಿಂದಚ್ಯುತನ ।
ನೇಕ ಚಿತ್ತದಿ ಭಜಿಸುವಾನಂದ ತೀರ್ಥಗುರುಗಳ ದಯದಿ
ವಿರಚಿಸಿದನು || ೨೫ ||

ರಾಯಚೂರ ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿರುವ ದೇಶಪಾಂಡೆ ಜಮೀನದಾರರು, ಕುಲಕರ್ಣಿಯವರು ಗೌತಮ ಗೋತ್ರದಲ್ಲಿ ಉತ್ಪನ್ನರಾದ

ಶ್ರೀಹರಿಯ ಏಕಾಂತ ಭಕ್ತರಾದ ಶ್ರೀ ತಿರ್ಮಲರಾಯರ ಮಗನಾದ **ನಾರಾಯಣನೆಂಬುವ** ಎನ್ನಿಂದ ಈ ಕಾವ್ಯವು ಗುರುಗಳ ದಯದಿ ವಿರಚಿತವಾದುದೆಂದು ಹೇಳಿದ್ದಾರೆ ಬುದ್ದಿನ್ನಿ ನಾರಪ್ಪನವರೆಂದು ಇಂದಿಗೂ ಪ್ರಸಿದ್ಧರಾಗಿದ್ದಾರೆ. ಅವರ ಹೆಸರಿನ ಒಂದು ಕೆರೆಯೂ ಈಗಲೂ ಇದೆ ಅವರ ಆಸ್ತಿ ಹೊಲ ಗ್ರಾಮವು ಇದೆ ಇವರ ವಂಶಜರು ಇದ್ದಾರೆ ಹೊಸಹಳ್ಳಿ ದೇಶಪಾಂಡೆ ಶ್ರೀನಿವಾಸರಾವ ಪೇಷ್ಕಾರರು ಅವರ ಮಕ್ಕಳು ಶ್ರೀ ಭೀಮಸೇನರಾವ ವಕೀಲ, ಶ್ರೀಹನುಮಂತರಾಯರು, ಡಾ ಕಿಶನರಾಯರು ಅಧಿಕಾರಸ್ಥರಾಗಿದ್ದಾರೆ ಅವರ ವಂಶಾವಳಿ, ಅವರಕಾಲ ಇತ್ಯಾದಿ ಯಾವದು ಇವರಲ್ಲಿ ಸಿಕ್ಕಲಿಲ್ಲ ದೈವಿಚಿತ್ರ.

## ಕವಿವರ್ಯರ ಕಾಲ

ಕಾಲವಾದರು ತಾವೆ ಪೀಠಿಕಾ ಸಂಧಿ. ಪದ್ಯ ೨೪ ರಲ್ಲಿ ಹೇಳಿದ್ದೇನಂದರೆ-

ಧರೆಯೊಳತಿ ಮಾನದಿಂ ಮಾನವಿಯ ದೇಶಕುಲ ।
ಕರಣಿಪೂರ್ವಾರ್ಧಶತ ಪಂಚಸಂವತ್ಸರಂ (೫೫)
ಪರಮ ಸುಖದಿಂ ಬಾಳ್ದು ಮೃತ್ಯಲೋಕವನುಳಿದು ಸುರರ ದರುಶನಕೆ
ದಿವಿಗೆ ॥

**ವರಚಿತ ಭಾನು ಸಂವತ್ಸರದ** ಕಾರ್ತಿಕ
ಕರಿಯ ಪಕ್ಷದ ಚತುರ್ದಶಿ ಭಾನುವಾರದಲಿ
ವರಕಾವ್ಯ ಪೇಳಿದಂ **ಶ್ರೀ ಪದ್ಮನಾಭಯತಿ**
ಪುಣ್ಯದಿನ ಚೋದ್ಯವೆನಲು ॥ ೨೪ ॥

ಕವಿವರ್ಯರ ಜನಕರಾದ ತಿರ್ಮಲರಾಯರು ೫೫ ವರ್ಷ ಭೂಮಿಯಲ್ಲಿ ಬಾಳಿ ದಿವಿಗೆ ಸುರರ ದರುಶನಕ್ಕೆ ಪೋಗುವ ಕಾಲ ಚಿತ್ರಭಾನು ಸಂ॥ ಕಾರ್ತಿಕ ಕೃಷ್ಣ ಚತುರ್ದಶಿ ಭಾನುವಾರವು ಶ್ರೀ ಪದ್ಮನಾಭ ತೀರ್ಥರ ಪುಣ್ಯ ಕಾಲ, ತಂದೆಗಳು ಗುರುಗಳಿಗೆ ಅರ್ಪಿಸಲು ಅವರ ನೆನಹಿಗಾಗಿ ಆ ದಿನದಲ್ಲಿ ಪೇಳಿವೆಂದು ಕಾಲವು ಪೇಳಿರುವರು.

೧. ಯಾವ ಚಿತ್ರಭಾನು ಸಂವತ್ಸರ ಇಂದಿಗೆ ಎಷ್ಟು ವರ್ಷಗಳಾದವೆಂಬ ವಿವೇಚನೆ ಮಾಡುವದು ಅತ್ಯಾವಶ್ಯ. ಈ ಚಿತ್ರಭಾನು ಸಂ॥ ೧೬ಲಳ

ಶಕೆ (೧೭೬೨) ಇ. ಯಾದುದು ಈ ಸಂವತ್ಸರ ಪುಷ್ಯ ವದಿ (೮) ದಿನ. ಶ್ರೀ ಗೋಪಾಲದಾಸರು ವೈಕುಂಠ ಯಾತ್ರ ಗೈದರಂದು ಅನೇಕ ಸನದುಗಳಿಂದ ಶ್ರೀ ವಿಜಯದಾಸರ ಚರಿತ್ರೆಯಲ್ಲಿ ವಿಶದಿಕರಿಸಿದೆ ಇದೆ ಚಿತ್ರಭಾನು.

೨. ಮತ್ತು ಶ್ರೀ ಜಗನ್ನಾಥ ದಾಸಾರ್ಯರು ಶಕೆ ೧೬೪೯ ಕೀಲಕ ಸಂವತ್ಸರದಲ್ಲಿ ಅವತರಿಸಿ ಶಾ ಶಕೆ ೧೭೩೧ ಶುಕ್ಲ ಸಂವತ್ಸರದಿ ವೈ ಯಾತ್ರೆ ಗೈದರೆಂಬುದು ಅನೇಕ ಪ್ರಮಾಣಗಳಿವೆ ಶ್ರೀ ಜಗನ್ನಾಥದಾಸರು ಅವತರಿಸಿದ ನಂತರ ೩೪-೩೫ ವರ್ಷಗಳ ಮೇಲೆ ಇವರಿಗೆ ಗೋಪಾಲದಾಸರಿಂದ ಅನುಗ್ರಹ ದಿಂದ ೪೦ ವರುಷ ಆಯುರ್ದಾನವಾಗಿದೆ ಈ ಎಲ್ಲ ಇತಿಹಾಸದಿಂದಲೂ ಶ್ರೀ ಜಗನ್ನಾಥದಾಸರು ಹರಿಕಥಾಮೃತಸಾರ ರಚಿಸಿದ ಪೂರ್ವದಲ್ಲೇ ಈ ಕಾವ್ಯ ಚಿತ್ರಭಾನು೧೬೮೪ ರಲ್ಲೇ ರಚಿಸಿದರು. ಇಂದಿಗೆ ೧೯೫ ವರ್ಷಗಳಾದವೆಂದು ತಿಳಿದು ಬರುತ್ತದೆ

೩ ಮತ್ತು ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರೂ ಅಪರೋಕ್ಷ ಜ್ಞಾನಿಗಳು ಶಾ ಶಕೆ ಚಿತ್ರಭಾನು ಸಂ|| ೧೭೪೪ ಆಶ್ವೀಜ ಶು (೭) ವೈಕುಂಠ ಯಾತ್ರೆಗೆ ತೆರಳಿದರೆಂದು ಅನೇಕ ಆಧಾರಗಳಿವೆ ೧೭೪೪ ಚಿತ್ರಭಾನು ಸಂ|| ಹಿಂದಿನ ೬೦ ವರ್ಷದ ಚಿತ್ರಭಾನು ಸಂ|| ೧೬೮೪ ಶಾ. ಶಕೆ ಆಗುತ್ತದೆ ಹೀಗೆ ಈ ಕವಿಗಳ ಕಾಲವು ೧೯೫ ವರುಷ ಮೇಲ್ಪಟ್ಟದ್ದಾಗಿ ಕಾವ್ಯವು ೧೬೮೪ ಚಿತ್ರ ಭಾನು ಸಂ|| ೧೯೫ ವರ್ಷದ ಹಿಂದೆ ರಚಿಸಿದ್ದೆಂದು ಕಾಲನಿರ್ಣಯವು ಆದಂತಾಯಿತು ಅಣ್ವಾದಿ ಕಾಲವು ಅನಿತ್ಯವಾದದ್ದು ಹೆಚ್ಚಿಗೆ ವಿವೇಚನೆ ಏಕೋ ತಿಳಿಯದಾಗಿದೆ ಕ್ಷಣಕ್ಷಣ ಕಾಲವೂ-ಕಾಲಾನು ಗುಣದೇಹಕಾಂತಿಯೂ ಹೀನವಾಗುತ್ತದೆ ಕಾಲ ಮಹಾತ್ಮ್ಯೆ ಕೊಡದೇ ಕವಿರ್ಯರ ಮಹಿಮೆ, ಮಹಾ ಕಾವ್ಯ ಮಹಿಮೆ ತಿಳಿಯುವದು ಪರಮ ಮುಖ್ಯವಾಗಿದೆ

**ಈ ಮನೋಹರ ವಿಠಲರು ಆರಶಿಷ್ಯರೆಂಬುದು** ತಿಳಿಯಬಹುದಾಗಿದೆ. ಆದರೆ ದಾಸಾರ್ಯರು ತಮ್ಮ ಕುಲಗೋತ್ರ ಕಾಲ ಪೇಳಿದಂತೆ ಆರ ಶಿಷ್ಯರು ಆರಿಂದಲು ಉಪದೇಶ ಕೊಂಡರೆಂಬುದು ಪೇಳಿಲ್ಲ ಇವರು ಶ್ರೀ ಜಗನ್ನಾಥದಾಸಾರ್ಯರ ಶಿಷ್ಯರೆಂದು, ಕೆಲ ಜನರ ಅಭಿಪ್ರಾಯವಿದೆ ಇದಾದರೂ ವಿವೇಚನಾರ್ಹವಾಗಿದೆ. ಈ ಕಾವ್ಯದಲ್ಲಿ ಶ್ರೀ ವಿಜಯದಾಸರು ಶ್ರೀ ಗೋಪಾಲ

ದಾಸರ ಸ್ತೋತ್ರ ಗೈದಿದ್ದಾರೆ ಶ್ರೀ ಜಗನ್ನಾಥದಾಸರ ಸ್ತೋತ್ರ ಮಾಡಿಲ್ಲ ಕಾರಣವೇನು ? ಶ್ರೀ ಜಗನ್ನಾಥದಾಸರು ತಮಗೆ ಶ್ರೀ ಗೋಪಾಲ ದಾಸರು ಅನುಗ್ರಹಿಸಿದ ನಂತರ ಕೆಲವು ಕಾಲದ ಮೇಲೆ ರಚಿಸಿದ್ದಾರೆ ಶ್ರೀ ಮನೋಹರ ವಿಠಲರು ಶ್ರೀ ಜಗನ್ನಾಥದಾಸರಕಿಂತಲೂ ವಯಸ್ಸಿನಲ್ಲಿ ಹಿರಿಯರು, ಹರಿಕಥಾ ಮೃತಸಾರ ರಚಿಸಿದಕಿಂತಲೂ ಕೆಲವು ವರ್ಷ ಪೂರ್ವದಲ್ಲೇ ಈ ಮಹಾ ಕಾವ್ಯ ಮಾಡಿದ್ದಾರೆ ಶ್ರೀ ಜಗನ್ನಾಥದಾಸರು ಹರಿಕಥಾಮೃತ ರಚಿಸಿದ ಮೇಲೆ ಆ ಗ್ರಂಥ ರಾಜವಾದ ಮಹಾ ಕಾವ್ಯಗಳಿಗೆಲ್ಲ ವರವೆನಿಸುವ ಶ್ರೀ ಹರಿಕಥಾ ಮೃತಸಾರ ಸ್ವಾದವನ್ನು ಸವಿದು ಗ್ರಂಥ ಮಹಾ ಮಹತ್ಮೆಯನ್ನರಿತು, ಫಲ ಸ್ತುತಿ ಸಂಧಿಯನ್ನು ರಚಿಸಿರುವರು ಆದಿ ಪದ್ಯದಲ್ಲಿ " ಸಿರಿವರ ಜಗನ್ನಾಥ ವಿಠಲನ ಚರಣ ಭಜಕ ನರಸಿಂಹದಾಸನ । ವರಮುಖಾಂಬುಜದಿಂದ ಪರಿಮಳ ದಂತೆ ಪಸರಿಸಿದ ॥ ಹರಿಕಥಾಮೃತ ಸಾರವೆಂದು ಮತ್ತು ಮುಂದೆ ಪದ್ಯ (೯) ರಲ್ಲಿ " ಏನು ಧನ್ಯರೊ **ನಮಗುರು ಪವ । ಮಾನದೊಳಿಸೆವ ಚದುರ** ಮ । **ಹಾನುಭಾವರು** ಎನಿಪ **ವೆಂಕಟ ನರ ಮೃಗೇಂದ್ರಾಖ್ಯ** । ಜ್ಞಾನಸಿಧಿ ಮುಖದಿಂದಲುದಿಸಿದ । ಶ್ರೀನಿವಾಸನ ಚರಿತೆ ಸುಧೆಯನು । ಪಾನಗೈಯ್ಯಲು ಮನದಣಿಯರೆಂದು ಸಜ್ಜನರು ॥ ೯ ॥ ಶ್ರೀ ಜಗನ್ನಾಥದಾಸರು ತಮಗಿಂದು ಸ್ವರೂಪೋತ್ತಮರು ಪವಮಾನ ಮತದಿ ಎನೆವ ಚದರರು ಜ್ಞಾನನಿಧಿಗಳಾದ ಕಾರಣ "ಸ್ತೋತ್ತುಮೋ ಗುರವಃ ಪ್ರೋಕ್ತಾಃ" ಎನ್ನುವಂತೆ ಎಮ್ಮ ಗುರು ವೆಂದು ಪೇಳಿದ್ದಾರ ಇಷ್ಟೇ ಹೊರತಾಗಿ ಮತ್ತಾವ ಆಧಾರವಿಲ್ಲ ಇವರ ಎಲ್ಲ ಕವನಗಳು ಶ್ರೀ ಹರಿಕಥಾಮೃತಸಾರ ರಚಿಸಿದ ಪೂರ್ವದಲ್ಲೇ ರಚಿಸಿದ್ದಾ ರೆಂದು ತಿಳಿಯುತ್ತದೆ ಶ್ರೀ ಜಗನ್ನಾಥ ದಾಸರಿಗೆ ಈ ಜ್ಞಾನಿಗಳ ಕಾವ್ಯಗಳು ಮಾನ್ಯವಾದುದರಿಂದ ತಮ್ಮ ಸಾಕ್ಷಾತ್ ಶಿಷ್ಯರಾದ ಪ್ರಾಣೇಶ ವಿಠಲರಿಂದ ಬರೆ ಸಿಟ್ಟ ಪುರಾತನ ವಹಿ ನಮ್ಮಲ್ಲಿದೆ. ಈ ಮನೋಹರ ವಿಠಲರು ಶ್ರೀ ವೆಂಕಟ ನರಸಿಂಹಾರ್ಯರು ಐ ಜಿ ಇವರ ಶಿಷ್ಯರೋ ಅಥವಾ ಹರಿಯವರ ಪ್ರಸಾದಾಂಕಿತದಿಂದ ರಚಿಸಿದ ಮಹಾ ಕಾವ್ಯವು ಸಂಧಿ ೧೦ ಪದ್ಯ ೪೬ " ಈ ಮಹಿಮೆಯೊಳು ಸ್ಥಿರವಾಗಿ ರಾಜಿಸುವಂತೆ **ಪ್ರೇಮದಿಂ ಕವಿಮತಿಗೆ ಗೋಚರಿಸಿ ವರವಿತ್ತು ಶ್ರೀ ಮನೋಹರ ವಿಠಲನೇ ಕೃತಿಯ**ನೊರದ ನೆಂದರಿದು ಕೇಳ್ವದು ಸುಜನರು " ಎಂದು ಪೇಳಿದ್ದಾರೆ ಶ್ರೀ ಪ್ರಸನ್ವೆಂಕಟ

ವಿಠಲರಿಗೆ, ವೆಂಕಟನು ವರವಿತ್ತಂತೆ ಈ ಅಪರೋಕ್ಷ ಜ್ಞಾನಿಗಳಿಗೆ ಶ್ರೀ ಮನೋ ಹರ ವಿಠಲನೆ ವರವಿತ್ತನು. ಇವರು ಹರಿ ಪ್ರಸಾದಾಂಕಿತರೆಂದು ತಿಳಿಯು ತ್ತದೆ.

## ಕಾವ್ಯ ಮಹಿಮೆ

ಇವರು ದೇವಾಂಶರು ಅಪರೋಕ್ಷ ಜ್ಞಾನಿಗಳು ಎಂದು ಇವರ ಅನೇಕ ಕೃತಿಗಳಿಂದ ತೋರುತ್ತದೆ. ಇವರ ಪ್ರಾಸಾದಿಕ ವಾಣಿ, ಸಜ್ಜನರ ಮನೋಂಧ ಕಾರ ಹರಿಸಿ ಜ್ಞಾನ ಬೆಳಕಿನಿಂದ ನಿರ್ಮಲ ಭಕ್ತಿ ಪುಟ್ಟಿಸುತ್ತದೆ ಶ್ರೀ ಹರಿಯ ವರವಿದ್ದ ಕಾರಣ ಇವರಿಗೆ ಎಲ್ಲವು ಸುಲಭದಿಂದ ಲಬ್ಧವಾಗಿವೆ, ಸಂಸ್ಕೃತ ಕನ್ನಡ, ಹಳೆಕನ್ನಡ, ಛಂದೋಬದ್ಧ ಪ್ರಾಸ ಅನುಪ್ರಾಸ, ಆದಿ ಮಧ್ಯಂತ ಪ್ರಾಸುಗಳು, ಪದ ಲಾಲಿತ್ಯ, ಶಬ್ದ ಲಾಲಿತ್ಯ, ಕವಿತಾ ಚಮತ್ಕೃತಿ, ಭಾವದಂತೆ ನವರಸಾಲಂಕಾರ ಭಾವ, ಪ್ರತಿಪದ್ಯದಲ್ಲಿ ತುಂಬಿತುಳುಕುತ್ತಿದೆ. ಅಲ್ಲದೇ ಪ್ರತಿ ಯೊಂದು ಅಲಂಕಾರಗಳು ಶ್ರೀ ಹರಿಯ ಜ್ಞಾನಾನಂದಾದಿ ಅಲಂಕಾರಗಳನ್ನು ಬೆರತು ಹೆಚ್ಚಿಗೆ ಪರಿಶೋಭಿಸುತ್ತವೆ ನನ್ನ ಮುಂದಮತಿಗೆ ಸುಮಾರು ೬೫-೭೦ ಅಲಂಕಾರಗಳು ಗೋಚರವಾಗುತ್ತವೆ ಮಹಾ ಕಾವ್ಯಗಳಲ್ಲಿ ಹಿರಿಯ ಕಾವ್ಯ ವಿದೆಂದು ಸಂಧಿ ೧೦ ಪದ್ಯ ೪೯ರಿಂದ ೫೭ ಪದ್ಯದ ವರೆಗೆ ತಾವೇ ಹೇಳಿರು ತ್ತಾರೆ. ಈ ಜ್ಞಾನಿವರ್ಯರ ಮಹಾಕಾವ್ಯವು ಹಿಂದಿನ ಎಲ್ಲ ಕವಿಗಳ ಕಾವ್ಯ ಗಳನ್ನು ಮೀರಿಸುವದಾಗಿದೆಂದರೂ ಕಡಿಮೆ. ಜ್ಞಾನಿಗಳ ಪ್ರಾಸಾದಿಕ ವಾಣಿಯೆ ಬೇರೆ ದಾಸಾರ್ಯರು ಜ್ಞಾನಿಗಳು, ಮಹಾ ಪಂಡಿತರು ಅಲ್ಲದೇ ಈ ಮಹಾ ಕಾವ್ಯವು ವಾರ್ಧಿಕಷಟ್ಪದಿಯಲ್ಲಿ ತಾವು ರಚಿಸಿದರೂ ಆಯಾ ಭಾವರಸಗಳನು ಸರಿಸಿ ೧೦ ಸಂಧಿಗಳನ್ನು ಬೇರೆ ಬೇರೆ ರಾಗಗಳಲ್ಲಿ ಗಾನ ಮಾಡಿ ಹರಿ ಗಾನ ಕುಶಲತ್ವವನ್ನು ತೋರಿಸಿರುವರು

| ಸಂಧಿ | | ಯಾವ ರಾಗದಲ್ಲಿ | | ಪದ್ಯ |
|---|---|---|---|---|
| ೧ | — | ಕಲ್ಯಾಣಿ ರಾಗ | — | ೨೭ |
| ೨ | — | ಸಾವೇರಿ ಅಥವಾ ತೋಡಿ | — | ೮೦ |
| ೩ | — | ರಾಗ ಮಾರವಿ | — | ೯೨ |
| ೪ | — | ಶ್ರೀ ರಾಗ | — | ೮೯ |

| | | | | |
|---|---|---|---|---|
| ೫ | — | ರಾಗ ಸಾರಂಗ | — | ೧೧೭ |
| ೬ | — | ತೋಡಿ | — | ೧೦೪ |
| ೭ | — | ರಾಗ ರೇಗುಪ್ತಿ | — | ೯೪ |
| ೮ | — | ರಾಗ ಭೈರವಿ | — | ೮೪ |
| ೯ | — | ರಾಗ ಮಾರವಿ | — | ೪೪ |
| ೧೦ | — | ಶ್ರೀ ರಾಗ | — | ೬೬ |

ಒಟ್ಟಿಗೆ (೮೦೭ ಪದ್ಯಕ್ಕೆ ೧೦ ಪದ) ೭೯೭
ಕಡಿಮೆ ದೊರಕಿವೆ.

ಹಲವರು ಷಟ್ಪದಿಗಳಿಗೆ ರಾಗಗಳೇ ಇಲ್ಲವೆಂದು ಅಭಿಪ್ರಾಯ ಹಿಂದಿನ ಕವಿಗಳಾದ ಕುಮಾರವ್ಯಾಸರು ಭಾರತ ಷಟ್ಪದಿ ಕಾವ್ಯವನ್ನು ಬೇರೆ ಬೇರೆ ಸಂಧಿ ವಿವಿಧ ರಾಗಗಳಲ್ಲಿ ಪಾಡಿದ್ದಾರೆ. ಒಂದು ಹಳೆ ಪ್ರತಿಯಲ್ಲಿ ನೋಡಿದ್ದೇನೆ. ಅಲ್ಲದೇ ಹರಿ ಕಥಾಮೃತಸಾರ ಸಂಧಿಗಳು ಸಹ ಬೇರೆ ಬೇರೆ ರಾಗಗಳಲ್ಲಿ ಹಾಡಲು ಬರುವದೆಂಬ ಸೂಚನೆ ತೋರಿಸಿರುವರು ನಮ್ಮಲ್ಲಿ ಒಬ್ಬ ವೃದ್ಧ ಅಯ್ಯನವರು ಕಲಾವಿದರು ಒಂದೇ ಭಾಮಿನಿ ವಾರ್ಧಿಕ ಪದ್ಯವನ್ನು ಬೇರೆ ಬೇರೆ ರಸಭಾವಗಳಿಗನುಗುಣವಾಗಿ ೧೮ ರಾಗಗಳಲ್ಲಿ ೧೮ ವಿಧವಾಗಿ ಹಾಡು ತಿದ್ದರು. ದುರ್ದೈವದಿಂದ ಒಬ್ಬರಿಗೂ ಆ ಕಲೆ ಹೇಳದೆ ಕಣ್ಮರೆಯಾದರು. ಇದೇ ನಮ್ಮ ದೇಶದ ದುರ್ದೈವ.

## ಈ ಮಹಾ ಕಾವ್ಯ ಸಂಶೋಧನ

ಇಂಥ ಮಂಗಲಮಯವಾದ ಮಹಾ ಕಾವ್ಯವು ಈಗ ಸುಮಾರು ೩೦ ವರ್ಷದ ಕೆಳಗೆ ಶ್ರೀ ವಾಜೇಂದ್ರರಾವ ಮಾಸ್ತರ ಹನಮಸಾಗರ ಮು. ಮಾಸ್ತಿ ಯಿಂದ ದೊರೆಯಿತು, ಕೆಲಕಾಲ ನೋಡಿದೆ ಹಸ್ತ ಲೇಖನ ಪ್ರತಿ ಸರಿಯಾಗಿರ ಲಿಲ್ಲ. ಅವರು ಯಾವ ಪ್ರತಿಯ ಮೇಲಿಂದ ಬರೆದಿದ್ದರೊ ದೊರಕಲಿಲ್ಲ, ಪ್ರತಿಯು ದೊರಕಿತು. ಆದರೂ ಮನಸು ತೃಪ್ತಿಕರವಾಗಲಿಲ್ಲ ಈಗ ಸುಮಾರು ೬ ವರ್ಷದ ಕೆಳಗೆ ಶ್ರೀ ಮಳಖೇಡರಾಯರ ರಥ ಮಾಡಿಸಲು ಹೋದಾಗ್ಗೆ ಕಲಬುರ್ಗಿಯಲ್ಲಿ ಶ್ರೀ ವೆ ಕೃಷ್ಣಾಚಾರ್ಯರು ಕುಷ್ಟಗಿ ಪೇಷ್ಕಾರ ಇವರಲ್ಲಿ ಒಂದು ಪ್ರತಿ ಪೂರ್ಣವಿದ್ದದ್ದು ದೊರಕಿತು ಆದೂ ಮನಸಿಗೆ ಸಮಾ

ಧಾನವಾಗಲಿಲ್ಲ ಆದೇ ವರುಷವೇ ದಾಸರ ಅನುಗ್ರಹದಿಂದ ಭಕ್ತರ ಸಂದರ್ಶನ ಸಲ್ಲಾಪಗಳ ಕಾಲ ಒಂದೆಡೆ. ಶ್ರೀ ಕಾಮವಾರ ಕರಣಿಕ ಶ್ರೀ ಸ್ವಾಮಿರಾಯರು ನಮ್ಮಲ್ಲಿ ಒಂದು ಕೈಬರಹದ ಪ್ರತಿ ಇವೆಂದು ಕಳಿಸಿದರು ಇದು ಏನೋ ತೃಪ್ತಿಕರವಾದರೂ ಅಲ್ಲಲ್ಲೆ ಕೆಲ ಹಸ್ತದೋಷ, ಅಕ್ಷರಗಳು ಬಿದ್ದಿವೆ. ೩ ಪ್ರತಿ ಇರಸಿಕೊಂಡು ಸರಿಯಾಗಿ ಸಂಶೋಧಿಸಿ ಶ್ರಮಪಟ್ಟು ಬರೆದು ಈ ವರ್ಷ ಪ್ರಕಟಿಸಿದೆ ಪ್ರತಿಯೊಂದು ಸ್ಥಳದಲ್ಲಿ ಆಯಾ ಪದ್ಯಗಳ ಮೇಲೆ ಕಥಾಸಾರ ಸೂಚಿಸಿದೆ ಕಠಿಣ ಶಬ್ದಗಳ ಅರ್ಥವು ತಿಳಿದಷ್ಟು ಕೊಟ್ಟಿದೆ ಇದೆ ದಾಸರ ಸೇವೆ ಎನ್ನನು ಪೂನಿತನ ಮಾಡಲಿ.

ಸಂಧಿ ೧೦ ಪದ್ಯ ೬೩ರಲ್ಲಿ " ಈ ಕಾವ್ಯ ಕಲ್ಪದ್ರುಮಕೆ ಮೆರವ ವಿಟಪಂಗಳೇ ನವಸಂಧಿ ಏಳುನೂರೆಂಭತ್ತು ಷಟ್ಪದಿಗಳೇ ವರಮಧುರ ತನಿವಣ್ಗಳಾಗಲವು । ಮರುದೀರ ಗುರು ಮಧ್ವ ಮೌನಿಗರ್ಪಿತವಾದ ಬಳಿಕಿನ್ನು । ಹರುಷದಿಂ ಸಜ್ಜನರು ತತ್ಫಲವ ರಸ ಸುರಿವು ಕೊಂಡಾಡರೇ ಸವಿಯನು ॥ ೬೩ ॥ ಎಂದು ಹೇಳಿದ್ದಾರೆ

೧ನೇ ಪೀಠಿಕಾ ಸಂಧಿಯಲ್ಲಿ ೨೭ ಪದ್ಯ ವಾರ್ಧಿಕ ಭ್ರಮರನ ೯ ಸಂಧಿಯಲ್ಲಿ ೭೮೦ ಹೀಗೆ ಒಟ್ಟಿಗೆ ೮೦೭ ಪದ್ಯಗಳಾಗಿರಬೇಕಾದುದು ಈ ಮೂರು ಹಸ್ತ ಪ್ರತಿಗಳಲ್ಲಿ ಸರಿಯಾಗಿ ಬರೆದಿಲ್ಲವೆಂತ ಕಾಣುತ್ತದೆ ಸಧ್ಯದಲ್ಲಿ ಒಗ್ಗೂಡಿಸಿದ ೭೯೮ ಪದ್ಯಗಳೇ ಉಪಲಬ್ಧವಾಗಿವೆ ಉಳಿದ ೧೦ ಪದ್ಯಗಳು ದೊರಕಿಲ್ಲ. ೩ ಪ್ರತಿಗಳಲ್ಲಿ ಕೆಲ ಪದ್ಯಗಳು ಹಿಂಚುಮುಂಚಾಗಿವೆ ಕೆಲವುಗಳಲ್ಲಿ ೩-೪ ಪದ್ಯಗಳೇ ಇಲ್ಲ ಕಾಮವಾರದ ಶುದ್ಧ ಪ್ರತಿಯಾದರೂ ಅದರಲ್ಲೇ ೨-೩ ಕಡೆಗೆ ೩-೪ ಪತ್ರಗಳೇ ಹೋಗಿವೆ ಶ್ರೀಹರಿ ಚಿತ್ತ. ಪ್ರಕಟಿಸಲು ಅನುಕೂಲ ಮಾಡಿ ಪ್ರತಿಗಳನ್ನು ಕೊಟ್ಟಮೇಲೆ ವಿವರಿಸಿದ ಮೂವರು ಭಕ್ತರುಗಳ ಮಹದುಪಕಾರ ಸ್ಮರಿಸಿ ಅವರಿಗೆ ಚಿರಋಣಿಯಾಗಿದ್ದೇನೆ

ಈ ಮಹಾ ಕಾವ್ಯದ ಫಲಶ್ರುತಿಯನ್ನು ದಾಸರೆ ಕೊನೆಯ ಸಂಧಿ ೪-೫ ಪದ್ಯದಲ್ಲಿ ಹೇಳಿರುವರು ಇಂದು ಮಹಾ ಕಾವ್ಯ ಪ್ರಶಸ್ಥಿಗೆ ಕಾವ್ಯಾಲಂಕಾರ ಕಾವ್ಯಕರ್ತೃಗಳೇ ಅರಿಯುವರ ಬಲದಿಂದ ರಚಿಸಿ ಹೇಳಿದ್ದಾರೆ ಭಾವುಕರಿಗೆ ಕಾವ್ಯಾಂಗನೆ ರತಿಗೊಳಿಸಿ ಮನ ಸೋಲುವಂತೆ ಮೋಹಿಸುವಳು ಕವಿಗಳನ್ನು

ಹುಚ್ಚುಗೊಳಿಪರು ಜ್ಞಾನಿಗಳ ಮನ ಮೆಚ್ಚುಗೊಳಿಸಿಪೆ ಇದರಕಿಂತಲೂ ಹಿರಿಮೆ ಯಾವುದು ? ಇವರು ಅಪರೋಕ್ಷ ಜ್ಞಾನಿಗಳು, ದೇವಾಂಶ ಸಂಭೂತ ರೆನ್ನುವದಕ್ಕೆ ಆವರ ಕವನವೇ ಸಾಕ್ಷಿ.

" ಧರ್ಮರಾಜನ ದೂತನು ಕೃಷ್ಣ ಸಂದರುಶನಕ್ಕೆ ಪೋದಾಗ ವೈಕುಂಠಾದಿ ತ್ರಿಧಾಮ ಜಗದ್ವ್ಯಾಪ್ತನಾದ ಹರಿಯೇ ಎನ್ನ ಹೃದ್ಗತನಾದ ಬಿಂಬನೇ ಸಾಕ್ಷಾತ್ ಕೃಷ್ಣನೆಂದು ಬಣ್ಣಿಸಿರುವರು. ಇದು ಸಾಮಾನ್ಯವಾಗಿ ವ್ಯಾಪ್ತೋಪಾಸಕ ದೇವತೆಗಳ ಸಲ್ಲಕ್ಷಣಜ್ಞಾನ. ಇನ್ನು ಕಾವ್ಯ ರಚಿಸಿದ ರೀತಿ ಅರ್ಪಿಸಿದ ಬಗೆ ಬಹು ಚಮತ್ಕೃತಿ ಅಲಂಕಾರದೊಡನೆ ಬಂಣಿಸಿದ ದೇವತೆಗಳ ಜ್ಞಾನವಿದು. ೧ನೇ ಸಂಧಿ ಪದ್ಯ ೨೬ರಲ್ಲಿ " ಈ ಹರಣ ದೇಹವೇ ವೀಣಾಮಾಡಿ ದ್ವಾರೆ, ರದನವೇ ಶ್ರುತಿಗೆ ಮೆಟ್ಟು, ಜಿಂಹವೇ ತಂತು-ಪಂಕ್ತಿಗಳು ಸ್ಥಿರಬುದ್ಧಿ ಎಂಬುದೇ ವೀಣಾಶ್ರುತಿ. (ಕಿವಿ) ಬಲಿದೊತ್ತಿ ಸುಜ್ಞಾನ ಸ್ವರವನ್ನು ಕೂಡಿಸಿ ಪರಮ ಕೋವಿದ ಮನೋಹರ ವಿಠಲನನಂತನ್ನ ಕರುಣ ಪಾಣಿಗಳಿಂದ ಬಾಧಿಸುತ್ತೀ ಕೃತಿಯ । ಬರದೆನಲ್ಲದೆ ವೆಗ್ಗಳಿಕೆ ಎನ್ನೊಶವಲ್ಲ ಸಜ್ಜನರು ಕೇಳಿರಲ್ಲ ॥ ೨೬ ॥ ಮತ್ತು ೧೦ನೇ ಸಂಧಿ ಪದ್ಯ ೬೪ರಲ್ಲಿ 'ನವಸಂಧಿ ಎಂಬ ಧೃಡ ಸೂತ್ರದಿಂದೀ ಕೃತಿಯ । ವಿವಿಧ ವರ್ಣದೊಳೆಸೆವ ಶ್ಲೋಕಗಳೆಂಬಾ ಮಣಿಯ । ನಿವಹಂಪೋಣಿಸುತ ಜ್ಞಾನ ಭಕ್ತಿಗಳೆಂಬ ಕರವೆರಡನಂ ಪೊಂದಿಸಿ ॥ ನವರತ್ನಮಾಲಿಗಳ ಕುಶಲತ್ವದಿಂದ ರಚಿಸಿ । ಭುವನಪತಿ ಶ್ರೀ ಮನೋಹರ ವಿಠಲನಾರಾಜಿ । ಸುವ ನಂಘ್ರಿಗಿಡಲು ಶರಣನ ಸೇವೆ ಕೈಕೊಂಡು ಪೊರೆ ದಂಪ್ರಸನ್ನತೆಯೊಳು ॥ ೬೫ ॥ ಎಂದು ದಿಟವಾಗಿ ಪೇಳಿದ್ವಾರ ಮೊದಲಿಗೆ ಹರಣವೇ ವೀಣಾ ಮಾಡಿ ಗಾನ ಮಾಡಿದರು. ಕಾವ್ಯ ರಚಿಸಿದ ನಂತರ ಕಾವ್ಯ ನವರತ್ನಮಾಲಾ ಕಟ್ಟಿದ ಕೃತಿ ನವಸಂಧಿಯೆ ಗಟ್ಟಿಯಾದ ಸೂತ್ರ (ದಾರ) ವಿವಿಧಾಲಂಕಾರದಿಂದೆಶೆವ ಶ್ಲೋಕಗಳೇ ಮಣಿಗಳು ಈ ಮಣಿಗಳ ಸಮೂಹವನ್ನು ಜ್ಞಾನ–ಭಕ್ತಿಗಳೆಂಬ ಎರಡೂ ಕರದಿಂದ ಪೋಣಿಸಿ ಜ್ಞಾನ ಪೂರ್ವಕವಾಗಿ, ಶ್ರೀಹರಿಯ ಪಾದಕಮಲಕ್ಕೆ ಸಮರ್ಪಿಸಲು ಈ ಶರಣನ ಸೇವೆ ಕೈಕೊಂಡು ಪ್ರಸನ್ನತೆಯಿಂದ ಮನ್ನಿಸಿದನು ಎಂದು ಪೇಳಿದ ಜ್ಞಾನಿವರೇ ಣ್ಯಾರಿಗೆ ಸದಾ ಹರಿಯ ಪ್ರಸನ್ನತೆ ಇರಬೇಕಾದರೆ ಇವರು ದೇವಾಂಶರೇ ಎಂದು ಹೆಚ್ಚಿನ ನಂಬಿಕೆಯು ಈ ಲೇಖನ ಪ್ರಕಟನೆಯು. ಸಹ ದಾಸರ ಪ್ರಸನ್ನತೆ

ಯಿಂದಲೇ ಆದುದು. ದಾಸರೇ ಪ್ರಸನ್ನರಾಗಿ ಪಾಲಿಸಲೆಂದು ಪ್ರಾರ್ಥಿಸುವೆ.

ಈ ಮಹಾ ಕಾವ್ಯಕ್ಕೆ ಸುಂದರವಾಗಿ ಕಾವ್ಯ ವಿಮರ್ಶೆ ಮತ್ತು ಮುನ್ನುಡಿ ಬರೆದುಕೊಟ್ಟ ಶ್ರೀ ಮತ್ಪೂಜ್ಯ ವೇ. ಪಂಡಿತವರ್ಯ, ಗೀರ್ವಾಣ ಪ್ರಾಕೃತ ಭಾಷಾ ಕುಶಲರಾದ ಶ್ರೀ ಕೇಶವಾಚಾರ್ಯ ಗುರಾಚಾರ್ಯ ಸಾತ್ವೀಕ ಜಾಲಿ ಹಾಳ. ಮತ್ತು ಶ್ರೀ ವೇ. ಬುರ್ಲಿ ಅನಂತಾಚಾರ್ಯರು ಬಿ. ಎ. ಬಾಗಲ ಕೋಟ, ಟೀಚರ ವಿದ್ಯಾದಾನ ಸಮಿತಿ ಹೈಸ್ಕೂಲ ಗದಗ. ಇವರ ಪರವೋಪ ಕಾರವನ್ನು ಸ್ಮರಿಸುತ್ತದೆ

ಜನತಾ ಸರಕಾರದ ಕರ್ನಾಟಕ ಎಲ್ಲಭಾಗ ವಿದ್ಯಾಖಾತೆ ಮಂತ್ರಿಗಳು ಅಧಿಕಾರಿಗಳಲ್ಲಿ ಕಾಲೇಜಿನ ಕನ್ನಡ ಪ್ರಾಧ್ಯಾಪಕರಲ್ಲಿಯೂ ಕೈಮುಗಿದು ಪ್ರಾರ್ಥನೆ ಮುಂದಿನ ಪೀಳಿಗೆಯಲ್ಲಿ ಇಂಥ ವಾಙ್ಮಯ ಸ್ಥಿರ ಗೊಳಿಸಲು ಎಮ್. ಎ. ಬಿ ಟಿ. ಮೆಟ್ರಿಕ್ ಈ ಕ್ಲಾಸಗಳಿಗೆ ಪಠ್ಯಪುಸ್ತಕವಾಗಿ ಇಡಬೇಕಾ ದುದೆಂದು ವಿನಂತಿ

ಸಂಪಾದಕ- **ಹನಮಂತರಾವ ಗೋರಬಾಳ.**



|| ಶ್ರೀಗುರು ರಾಜೋ ವಿಜಯತೇ ||

# ಕಾವ್ಯ ವಿಮರ್ಶೆ

काव्य लिखामि नहि चारुतर लिखामि ।
यत्नाल्लिखामि यदि चारुतर लिखामि ॥

ಎಂಬ ಕವಿಯ ವಚನದಂತೆ ಕಾವ್ಯಗಳನ್ನು ರಚಿಸುವ ಕವಿಗಳು ಅನೇಕರಿರಬಹುದು. ಆದರೆ ಸಲಕ್ಷಣವಾದ ಪ್ರಾಸಾದಿಕ ವಾಣಿಯಿಂದ ಜನಂ ಹೃದಯದಲ್ಲಿ ಚಮತ್ಕಾರವನ್ನು ಹುಟ್ಟಿಸಿ ರಸಾವಿರ್ಭಾವವನ್ನು ಉಂಟು ಮಾಡುವ ಸಹೃದಯ ಹೃದಯಂಗಮ ರಸಾತ್ಮಕ ಕಾವ್ಯಗಳೂ ಅಂಥ ಕಾವ್ಯಗಳನ್ನು ವಿರಚಿಸುವ ಸರಸ ಕವಿವರೇಣ್ಯರೂ ದೊರೆಯುವದು ಬಹಳ ದುರ್ಲಭ ಲೇಖನ ಕಲೆಯೇ ಮೊದಲು ಸಾಧಿಸುವದು ಕಷ್ಟ, ಅದರಲ್ಲೂ ಪದ್ಯಗಳನ್ನು ಆ ವೃತ್ತಾಲಂಕಾರ ರೀತಿ ಪ್ರಾಸಗಳ ನಿರ್ಬಂಧದಲ್ಲಿ ಮಧುರ ಸರಸ ಮನೋಹರ ಪದಗಳಿಂದ ಹೆಣೆಯುವದಂತೂ ಅತೀವ ಶ್ರಮಸಾಧ್ಯ. “शक्तिर्निपुणता लोक काव्यशास्त्राद्यवेक्षणं । काव्यज्ञशिक्षयाभ्यासः इति हेतुस्तदुद्भवे ” ಎಂಬ ಮಮ್ಮಟೋಕ್ತಿಯಂತೆ ಅಲೌಕಿಕವಾದ ಪ್ರತಿಭಾ ನೈಪುಣ್ಯಗಳು ಲೋಕಶಾಸ್ತ್ರಗಳ ಪರೀಕ್ಷೆ, ಕವಿಸಮಯ ವ್ಯಾಸಂಗ ಇವುಗಳು ಸುಲಭವಾಗಿ ಎಲ್ಲರಿಗೂ ದೊರೆಯುವದಿಲ್ಲ. ಹೀಗಿರುವ ಕಾವ್ಯೋದಯ ಕಾರಣ ಸಾಮಗ್ರಿಗಳಿಂದ ಸಹಿತರಾದ ಕವಿಶ್ರೇಷ್ಠರ ಕವನಗಳೇ ಜಗತ್ತಿಗೆ ಅನುಭಾವುಕವಾಗುತ್ತವೆ ಇದಕ್ಕೆ ಅಧಿಕವಾಗಿ ದೈವೀ ಪ್ರತಿಭೆ ಪ್ರಸಾದಗಳನ್ನು ವರಗಳಿಂದ ಪಡೆದ ಕವಿಗಳ ವಾಣಿಯಂತೂ (ಗುರಿಗೆ) ಬಾಣಗಳಂತೆ ಜನರ ಹೃದಯಗಳನ್ನು ಭೇದಿಸಿ ಅವರಿಗೆ ರಸಾಪ್ಲಾವನ ಮಾಡುವದೆಂದು ಬೇರೆ ಹೇಳಬೇಕಾಗಿಲ್ಲ. ಲೋಕದಲ್ಲಿ ಜನರ ಮನಃ ಪ್ರಚೋದಕ ಮಾಡುವ ಎಲ್ಲ ಶಬ್ದಗಳಲ್ಲೂ ಕಾವ್ಯಸರಣಿಯು ಹರಿಯುತ್ತಲಿದೆ ಪ್ರಭು ಸಮ್ಮಿತ ಶಬ್ದಗಳಿಂದ ಋಗ್ವೇದಗಳಲ್ಲಿಯೂ ಸಹ ಮನೋಹರವಾಗಿ ಬಣ್ಣಿಸಿ ದೇವತೆಗಳಲ್ಲಿ ಪ್ರೀತಿ ಹುಟ್ಟಿಸಿ ಅವರ ಪ್ರೀತಿದಾಯಕ ವ್ಯಾಪಾರಗಳಲ್ಲಿ ನಮ್ಮ ಮನಸ್ಸನ್ನು ಪ್ರೇರಿಸುವ (ಶಬ್ದಗಳು) ಕಾವ್ಯಲಹರಿಯು ವಿರಾಜಿ

ಸುವದು ಸುಹೃತ್ ಸಮ್ಮಿತವಾದ ಪುರಾಣಗಳಲ್ಲಿಯಂತೂ ಬಹುಭಾಗ ಕಾವ್ಯ ಸರಣಿಯೇ ವ್ಯಾಪಿಸಿಕೊಂಡಿರುವದು ಕಂಡುಬರುತ್ತದೆ ಇನ್ನೊಂದು ದೃಷ್ಟಿ ಯಿಂದ ಪರೀಕ್ಷಿಸಿದರೆ ಸಕಲ ಲೌಕಿಕ ಪಾರಲೌಕಿಕ ಶಬ್ದಗಳು ಕಾವ್ಯಮಯ ವಾಗಿವೆ ಶಬ್ದ ಪ್ರಪಂಚವೆಲ್ಲ ಕಾವ್ಯಮಯ ಎಂದು ಸೂಕ್ಷ್ಮದರ್ಶಿಗಳಿಗೆ ತಿಳಿಯದೇ ಇರದು ಯಾಕಂದರೆ- ಪ್ರವೃತ್ತಿ ನಿವೃತ್ತಿಗಳನ್ನು ಉಂಟುಮಾಡದೇ ಇರುವ ಅವ್ಯಾವಹಾರಿಕವಾದ ಶಬ್ದಗಳೇ ಇರುವದಿಲ್ಲ ಆದುದರಿಂದ ಇಂಥ ವಿಶ್ವವ್ಯಾಪಕವಾದ ಕಾವ್ಯಮಯ ದೇವತೆಯನ್ನು ಪ್ರತಿಯೊಂದು ಪ್ರಾಣಿಯೂ ಆರಾಧಿಸಬೇಕು ಶಬ್ದ ಅರ್ಥಗಳ ಸ್ವಭಾವ ಮರ್ಯಾದೆಗಳನ್ನು ತಿಳಿದು ಕೊಂಡು (ಅವುಗಳನ್ನು) ಸರಿಯಾಗಿ ವ್ಯವಹಾರ ಮಾಡುವದೇ ಕಾವ್ಯಾರಾಧನೆ ಯೆನಿಸುವದು ಇಂಥ ಕಾವ್ಯಾರಾಧನೆಗೆ " एकः शब्दः सुप्रयुक्तः सम्यक्-ज्ञातः स्वर्गे लोकेकामधुक् भवति" ಎಂಬ ಶ್ರುತಿಯು ಮೂಲಾಧಾರವಾಗಿರುತ್ತದೆ

## ಕಾವ್ಯದ ಸಾಫಲ್ಯ

ಹೀಗೆ ಪ್ರಚೋದಕವಾದ ರಮಣೀಯಾತ್ಮಕವಾದ ಕಾವ್ಯಗಳಿಂದಲೇ ಜಗತ್ತಿಗೆ ಉನ್ನತಿ ಹಿತಸಾಧನ ಪ್ರಾಪ್ತಿಗಳು ಸಿಗಬಹುದೇ ವಿನಃ ಬೇರೆ ಸಾಧನ ಗಳಿಂದ ದೊರೆಯಲಾರವು ಭಾವನಾ ಪ್ರವರ್ತಕ ಕಾವ್ಯಗಳಿಗೆ ನವರಸಗಳು ಪ್ರಧಾನಾಂಗವಾಗಿವೆ ಶೃಂಗಾರ ವೀರ ಕರುಣ ಮುಂತಾದ ನವರಸಗಳನ್ನು ಅವಲಂಬಿಸಿ ಮಧುರ ಮನೋಹರ ಪದಗಳಿಂದ ನಾಯಕರ ಚರಿತ್ರೆಯನ್ನು ಚಿತ್ರಿಸುತ್ತ ಅವರ ಆದರ್ಶಗಳ ಕಡೆಗೆ ಜನಜಂಗುಳಿಯ ಸ್ವಭಾವ ಪ್ರಣಯ ಮಯ ಅಂತಃಕರಣವನ್ನು ಅರಳಿಸಿ ಹೊರಳಿಸಿ ತರಳಿಸಿ ಉತ್ತಮ ಗುಣದಲ್ಲಿ ವಸ್ತುವಿನಲ್ಲಿ ಪ್ರೇಮವೆಂಬ ಭಕ್ತಿಯನ್ನು ಹುಟ್ಟಿಸುವದು ಕಾವ್ಯಗಳ ಸ್ವಭಾವ ವಾಗಿದೆ. ಇಂಥ ಉತ್ತಮ ವಸ್ತು, ಶ್ರೇಷ್ಠಾದರ್ಶಗಳ ಕಡೆಗೆ ಪ್ರಚೋದಿಸು ವದೂ ಇನ್ನಿತರ ಅಸಾಧು ವಸ್ತುಗಳಿಂದ ನಿವೃತ್ತಿಯನ್ನು ಹುಟ್ಟಿಸುವದೂ ಸಾಧು ಕಾವ್ಯಗಳ ಲಕ್ಷಣವಾಗಿದೆ. ಇವುಗಳಿಗೆ ಸಾಹಿತ್ಯವೆಂಬ ನಾಮಧೇಯವು ಅನ್ವರ್ಥವಾಗುತ್ತದೆ " चतुर्वर्गफलप्राप्ति साधुकाव्यनिषेवणात् " ಎಂಬೋಕ್ತಿ ಯಂತೆ ಧರ್ಮಾರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಪಡೆಯು ವದೇ ಸಾಹಿತ್ಯದ ಪರಮ ಪ್ರಯೋಜನವು ನವರಸೋಪೇತ ಸಾಧುಕಾವ್ಯಗಳು

ಈ ಪುರುಷಾರ್ಥವನ್ನು ಹೊಂದಲು ಮನುಷ್ಯನಿಗೆ ಪರಮೋಪಕಾರಕಗಳೆಂದು ತಿಳಿದ ಮಹಾನುಭವರಾದ ತತ್ವವೇತ್ತರೂ ಸಹ ಕಾವ್ಯಗಳನ್ನು ನಿರ್ಮಿಸಿ-ಜನರನ್ನು ಆಯಾ ಪುರುಷಾರ್ಥಗಳ ಕಡೆಗೆ ಬೋಧಿಸಿರುತ್ತಾರೆ ಮಹಾನುಭಾವರಾದ ಶ್ರೀ ಮಧ್ವಾಚಾರ್ಯರು, ಪಂಡಿತಾಚಾರ್ಯರು ಮುಂತಾದವರು ಇದೇ ಸದುದ್ದೇಶದಿಂದಲೇ ಕಾವ್ಯ ಮುಂತಾದವುಗಳನ್ನು ವಿರಚಿಸಿರುತ್ತಾರೆ.

## ದಾಸಸಾಹಿತ್ಯದ ವೈಶಿಷ್ಟ್ಯ

ಪ್ರಕೃತ ಧರ್ಮಾರ್ಥ ಕಾಮ ಮೋಕ್ಷಗಳನ್ನು ತಿಳಿಸಹೊರಟ ಅತಏವ ಈ ನಾಲ್ಕು ಪುರುಷಾರ್ಥಗಳಲ್ಲಿ ಶ್ರೇಷ್ಠತಮವಾದ ಮೋಕ್ಷವನ್ನು ಅಧಿಕವೆಂದು ಸಾರಿ ಅದರ ಉಪಾಯವನ್ನು ಜನರ ಹೃದಯದಲ್ಲಿ ಬಿಂಬಿಸುವಂತೆ ಉಪದೇಶಿಸ ಹೊರಟ ದಾಸ ವರ್ಗದ ಸಾಹಿತ್ಯವು ನಿರುಕ್ತ ಸಾಹಿತ್ಯವೆಂದು ಗಟ್ಟಿಯಾಗಿ ಹೇಳಬಹುದು ಶ್ರೀ ಹರಿದಾಸ ಸಾಹಿತ್ಯ ಸುರನದಿಯು ಭವತಾಪದಿಂದ ಬಳಲಿ ಬೆಂಡಾಗಿ ಗತಿಗೆಟ್ಟ ಸಾತ್ವಿಕರ ಹೃದಯದಲ್ಲಿ ಕಲಿಮಲವನ್ನು ನಾಶಗೊಳಿಸಿ ಪವಿತ್ರತೆಯನ್ನು ಹುಟ್ಟಿಸಿ, ಚಿತ್ತಕ್ಕೆ ಶುದ್ಧಿಯನ್ನು ತಂದು ಪರಮ ಪುರುಷಾರ್ಥ ಸಾಧನಗಳಾದ ಜ್ಞಾನ, ಭಕ್ತಿ, ವೈರಾಗ್ಯಗಳ ಪ್ರವಾಹವನ್ನು ಹರಿಸಿ ನಿರಂತರ ಭಗವಂತನ ಸುಂದರ ಚಿದಾನಂದ ವಿಗ್ರಹವು ನಿಲ್ಲುವಂತೆ ಮಾಡಲು ಶ್ರೀ ನಾರದಾದಿ ಮಹರ್ಷಿಗಳ ಭಗೀರಥ ಪ್ರಯತ್ನದಿಂದ ಪರಮಾತ್ಮನಿಂದಲೇ ಭೂತಳಕ್ಕೆ ಅವತರಿಸಿರುತ್ತದೆ ಅಂತೆಯೇ ಶ್ರವಣ ಮಾತ್ರದಿಂದ ಇವರ ಅಮೋಘವಾಣಿಯು ಚಿತ್ತಾಕರ್ಷಣ ಮಾಡಿ ವಿಷಯಗಳಿಗೆ ಸೋತುಹೋದ ಮನಸ್ಸಿಗೆ ನವಚೈತನ್ಯವನ್ನು ಹುಟ್ಟಿಸಿ ಆಧ್ಯಾತ್ಮ ತತ್ವದ ಕಡೆಗೆ ಭಗವಂತನ ದಿವ್ಯಮಂಗಳ ವಿಗ್ರಹದ ಕಡೆಗೆ ಹೋಗುವಂತೆ ಮಾಡುವದು ಎಲ್ಲರ ಅನುಭವದ ಮಾತಾಗಿರುತ್ತದೆ ಕಾಲಕ್ಕೆತಕ್ಕಂತೆ ರಸಾನುಷಂಗ, ಭಾಷಾ ವೈಶಿಷ್ಟ್ಯ ನವರಸ ನವ ಸರಣಿಗಳು ತತ್ವಸಮನ್ವಯ ಯೋಜನೆಯ ಬರವಣಿಗೆಗಳು ಇವುಗಳು ಶ್ರೀ ದಾಸಸಾಹಿತ್ಯದ ಸರ್ವಾಂಗೀಣ ಸೌಂದರ್ಯಕ್ಕೂ ಸಾರ್ವಜನೀನತೆಗೂ ಕಾರಣವಾಗಿರುತ್ತವೆ. ಸರಳವಾದ ಚಮತ್ಕಾರಗಳಿಂದೊಡಗೂಡಿದ ಹೊಸ ಹೊಸ ವಿಚಾರ ಲಹರಿಗಳಿಂದ ಪರಿಪ್ಲುತವಾದ ಭಾವಗಳನ್ನು ಹೊಸ ಸರಣಿಯಲ್ಲಿ ಬೆಳಕಿಗೆ ತಂದು ಅವುಗಳಲ್ಲಿ ಭಗವತ್ತತ್ವ ತತ್ಸಂಬಂಧಿ ಕಥೆ ಹಾಗೂ

ಆಧ್ಯಾತ್ಮಿಕ ರಹಸ್ಯಗಳನ್ನು ಬಿಂಬಿಸುವದು ದಾಸ ಸಾಹಿತ್ಯದ ಪರಮ ವೈಶಿಷ್ಟ್ಯ ವಾಗಿದೆ ಹೀಗೆ ವಿಶಿಷ್ಟ ರೀತಿಗಳಲ್ಲಿ ಬೆಳಕಿನಲ್ಲಿ ಮಿನುಗುವ ತತ್ವಗಳನ್ನು ಹೃದಯ ಮಂದಿರದಿಂದ ಹೊರಗೆಡಹುದ ಹಾಗೆ ಮಾಡುವ ಸಂಗೀತ ಸ್ವರ ಸಾಹಿತ್ಯ ಸಮ್ಮೇಳನದೊಂದಿಗಿರುವ ಹಾಡುಗಳು ಮಂತ್ರದಂತಿರುವ ಪೂಜಾ ಕಾಲಗಳಲ್ಲಿಯೂಸಹ ಉಪಯೋಗಿಸಲರ್ಹವಾದ ಸುಳಾದಿಗಳು ದಾಸಸಾಹಿತ್ಯದ ಪರಮ ಘನತೆಯ ಶ್ರೇಷ್ಠ ಸೋಪಾನಗಳೂ ಪಾರಮಾರ್ಥಿಕ ಪರಮೋಪ ಕಾರಕಗಳೂ ಆಗಿರುತ್ತವೆ ಅಂತೆಯೇ ಈ ಸತ್ಪಥದಲ್ಲಿಯೇ ನಡೆದ ಸಾಧು ಸತ್ಪುರುಷರ ಚರಿತ್ರೆಗಳು ನಾಡಿನ ಮನೆ ಮನೆಗಳಲ್ಲಿ ಪಠನ ಪಾಠನ ಪಾರಾ ಯಣ ಪ್ರವಚನ ಪರಂಪರೆಗಳಲ್ಲಿ ನಿಗೂಢವಾಗಿರುತ್ತವೆ

ಇಂಥ ಹರಿದಾಸ ಸಾಹಿತ್ಯ ರತ್ನಾಕರದಲ್ಲಿ ಎಷ್ಟು ಅಮೋಘಾನರ್ಘ್ಯ ರತ್ನಗಳಿರುವವೆಂಬುದನ್ನು ಯಾರುತಾನೇ ಖಚಿತವಾಗಿ ಹೇಳಬಲ್ಲರು? ಊರು ಊರಿಗೂ ಮನೆ ಮನೆಗೂ ಹಲವಾರು ದಾಸವರೇಣ್ಯರ ಅವತಾರವಾಗಿ ಅವರ ಗುಪ್ತವಾಣೀ ಸಿಂಧುವು ಯಾವ ರಂಗದಲ್ಲಿ ಹೇಗೆ ನೆಲೆಸಿರುವುದೆಂಬದನ್ನು ಅರಿಯುವದು ಬಹಳ ಕಠಿಣ ಸಂಗತಿಯಾಗಿದೆ ಇಂಥ ಅಗಾಧ ದಾಸಸಾಹಿತ ಪಯೋನಿಧಿಯಲ್ಲಿ ಮಂ ದ ರ ಪರ್ವತದಂತೆ ಮು ಣು ಗಿ ಆಮೂಲಾಗ ಆಲೋಚಿಸಿ ಅಪೂರ್ವ ಮಹಾನರ್ಘ್ಯ ರತ್ನಗಳ ಆವಿಷ್ಕಾರಕ್ಕೆ ಕಾರಣಪುರುಷ ರಾದ ಶ್ರೀ ಗೊರಬಾಳ ಹನುಮಂತರಾಯರ ಸಂತತ ಪರಿಶ್ರಮದ ಫಲರೂಪ ವಾಗಿ ಹೊರಟ ( ವಿಜಯರಾಯರ ಸುಳಾದಿಗಳು ದಾಸವರೇಣ್ಯರ ಪದ– ಪದ್ಯಗಳು ) ಅಸಂಖ್ಯ ರತ್ನಗಳಲ್ಲಿ ಪ್ರಕೃತ ಶ್ರೀ ಅನಂತ ಕಥೆಯೆಂಬುದೊಂದು ಕಾವ್ಯಸುಧೆಯು ಸರಸ ರಸಿಕರ ಹೃದಯ ಭೂಮಿಗೆ ಹರಿಯಲಿದೆ

ಪ್ರಕೃತ ಕಾವ್ಯವನ್ನು ನಿರ್ಮಿಸಿರುವ ಮಹಾನುಭಾವರು ಶ್ರೀ ಮನೋ ಹರ ವಿಠಲರು. ಅವರ ವಿಚಾರವಾಗಿ ತಿಳಿಯಬೇಕಾಗಿರುವ ವಿಷಯಗಳನ್ನು ಸಂಪಾದಕರ ಬರಹದಿಂದ ವಿಶೇಷವಾಗಿ ತಿಳಿದುಕೊಳ್ಳಬಹುದಾದ್ದರಿಂದ ಆ ಬಗ್ಗೆ ಹೆಚ್ಚಿಗೆ ಏನೂ ಬರೆಯುವ ಅಗತ್ಯವಿಲ್ಲ

## ಭಕ್ತಿರಸ ಶೃಂಗಾರಾದಿಗಳು

" ಪತಿಭಕ್ತಿಯಿಂದಂಗನೆ ...... .. ....... ....... ... ... ........... ...

.... ... ...ಶ್ರೀ ರಮಾಪತಿಯ ಗುಣಸ್ತುತಿಗಳಿಲ್ಲದ ಕಾವ್ಯರಚನೆಯು ವ್ಯರ್ಥ. ಮಿತ್ರನಿಲ್ಲದಾಕಾಶದಂತೆ " " ಎಂದು ಕೊನೆಯಲ್ಲಿ ಹೇಳಿರುವ ಇವರ ವಚನ ವನ್ನು ನೋಡಿದರೆ ಇವರ ಕಾವ್ಯದಲ್ಲಿ ರಮಾಪತಿಯ ಗುಣಸ್ತುತಿಯು ಜೀವಾಳ ವೆಂದೂ ಪ್ರತಿಯೊಂದು ಕಾವ್ಯಕ್ಕೂ ರಮಾಲೋಲನ ಲೀಲೆಗಳೇ ವಿಷಯ ವಾಗಿರಬೇಕೆಂದು ತಿಳಿದು ಬರುವದು ಎಷ್ಟೇ ಶೃಂಗಾರವಿರಲಿ ಯಾವವೇ ರಸಾಂತರಗಳಿರಲಿ, ಎಲ್ಲದರಲ್ಲೂ ಶ್ರೀ ಕೃಷ್ಣಭಕ್ತಿಯು ಉಕ್ಕೇರಿ ಬರುತ್ತಿರ ಬೇಕು ಇದೇ ಇವರ ಕಾವ್ಯದ ಪರಮೋದ್ದೇಶ್ಯ ನವರಸಗಳಲ್ಲಿ ಭಕ್ತಿಯು ಅಡಕವಾಗಿರುವದು. ಎಲ್ಲ ರಸಗಳಲ್ಲಿ ಪ್ರೇಮವು ಅಡಕವಾಗಿರು ವದು. ಪ್ರೇಮವಿಲ್ಲದೇ ಯಾವ ರಸವೂ ಇಲ್ಲ ಅಂತತಃ ಪ್ರೇಮವೇ ಭಕ್ತಿ ಯೆನಿಸುವದು ಹೀಗೆ ಭಕ್ತಿಯು ಸರ್ವ ರಸಸಾಧಾರಣವಾದುದರಿಂದ ರಸೋ ತ್ತುಂಗವೆನಿಸಿ ಕಾವ್ಯಗಳಿಗೆ ಪರಮ ಜೀವಾಳವೆಂದು ಈ ಕವಿಗಳು ಅರ್ಥಾತ್ ಶ್ರೀ ದಾಸವರೇಣ್ಯರ ಅಭಿಪ್ರಾಯವಿರಬೇಕು ಭಕ್ತಿರಸಪ್ರಧಾನವಾದಿಯಾದ ಶ್ರೀ ರೂಪಗೋಸ್ವಾಮಿಯವರೂ " ಉಜ್ವಲ ನೀಲಮಣಿ " ಎಂಬಲ್ಲಿ ಅದರ ವಿಭಾವಾನುಭವ ಮುಂತಾದವುಗಳನ್ನು ಸ್ಪಷ್ಟವಾಗಿ ವಿಶದಪಡಿಸಿರುತ್ತಾರೆ ಭಕ್ತಿರಸ ಪ್ರಧಾನವಾಗಿಯೇ ಶ್ರೀ ದಾಸವರ್ಯರ ಕವನಗಳಿರುವವು ಪರಮ ವಿರಕ್ತರೆಂದೆನಿಸಿದ ದಾಸವರೇಣ್ಯರಿಗೆ ಶುಷ್ಕ ಶೃಂಗಾರಾದಿಗಳಿಂದ ಆಗುವಪ್ರಯೋ ಜನಗಳೇನು ? ಹೇಗಾದರೂ ಏನಾದರೂ ಮಾಡಿ ಜನರ ಚಿತ್ತ ಚೌರ್ಯ ಮಾಡುವದೇ ಮಹಾಕಾರ್ಯವೆನಿಸಿದ್ದರೆ ಅದಕ್ಕೆ ಇಷ್ಟೊಂದು ಪ್ರಯಾಸಪಡುವ ಕಾರಣವಿರಲಿಲ್ಲ ಶ್ರೀ ಕೃಷ್ಣ ಶ್ರೀರಾಮ ಮುಂತಾದ ಸಚ್ಚರಿತ್ರರ ಗುಣರತ್ನಾ ಕರರ ನಾಯಕತ್ವದಲ್ಲಿ ಕಾವ್ಯಗಳನ್ನು ರಚಿಸಲು ಕಾರಣವಿರಲಿಲ್ಲ ಬೇರೆ ಮತ್ತೊಂದು ವಸ್ತುವನ್ನು ನಾಯಕ ಮಾಡಿಕೊಂಡು ಶ್ರೀ ಹರ್ಷಚಕ್ರವರ್ತಿ ಗಳಂತೆ ಬಾಣನಂತೆ ಕಾವ್ಯಗಳನ್ನು ಬರಯಬಹುದಾಗಿತ್ತು. ಹೇಯವಿಷಯ ಗಳಲ್ಲಿ ಮನಸ್ಸನ್ನು ತೆಗೆಯಿಸಿ ದಿವ್ಯ ವಸ್ತುವಾದ ಭಗವಂತನಲ್ಲಿ ರತಿಯನ್ನು ಹುಟ್ಟಿಸಿ ಅವನಲ್ಲಿ ಅಂತಃಕರಣ ಸರಣಿಯನ್ನು ಸೇರುವಂತೆ ಮಾಡಲು ಬೇಕಾದ ಭಕ್ತಿಯನ್ನು ಮುಖ್ಯ ರಸವನ್ನು ಮಾಡಿಕೊಂಡು ಉಳಿದ ರಸಗಳನ್ನು ಅಂಗ ಗಳನ್ನಾಗಿರಿಸಿ ಬರೆಯುವದು ದಾಸರಾಯರ ವಿಶಿಷ್ಟ ಶೈಲಿಯಾಗಿರುವದರಿಂದ ಇವರ ಕಾವ್ಯಗಳಿಗೆ ಭಕ್ತಿರಸಕಾವ್ಯಗಳೆಂದೇ ಕರೆಯಬೇಕು ಶೃಂಗಾರ-ವೀರ,

ಕರುಣ ಮುಂತಾದ ರಸಗಳು ಭಕ್ತಿ ಹುಟ್ಟಲಿಕ್ಕೆ ಅಂಗಗಳೆಂದು ಈ ಕಾವ್ಯ ವಿಮರ್ಶಕರಿಗೆ ತಿಳಿಯದಿರಲಿಕ್ಕಿಲ್ಲ. ಅಂತೆಯೇ ಕೊನೆಯಲ್ಲಿ—

" ನವಸಂಧಿಯೆಂಬ ದೃಢಸೂತ್ರದಿಂದೀಕೃತಿಯ . . .. . ... ........ .... . . ....... ಪೋರೆದಂ ಪ್ರಸನ್ನತೆಯೋಳ್" = ॥ ೬೩ ॥ ಎಂದು ಹೇಳಿರುತ್ತಾರೆ. ಅದರಂತೆಯೇ ನಕ್ಷತ್ರಮಾಲಿಕಾ ಸಂಧಿಯಲ್ಲಿ-- ಹರಣ ವೀಣೆಯ ಮಾಡಿ ರದನ ಮೆಟ್ಟಂ ಗೈದು.. .. . ... ... ... ಸುಜನರ್ ಕೇಳಿರೆಲ್ಲ ॥೨೬॥ ಎಂದು ಹೇಳಿರುತ್ತಾರೆ ಚಿತ್ತರಂಗದಲ್ಲಿ ಭಗವಂತನ ಸುಂದರ ವಿಗ್ರಹದ ಸುಳಿದಾಟದಿಂದ ಸ್ವಾಂತರ್ದೃಷ್ಟಿಯು ವಿಕಸಿತವಾಗಿ ಪರಮಾನಂದದ ಪರಮಾವಧಿಯನ್ನು ಹೊಂದಿ ರೋಮಾಂಚೋದಯ–ಬಾಷ್ಪನಿಃ ಸರಣ–ಗದ್ಗದಕಂಠ ಉಲ್ಲಸಿತಮುಖ ಮುಂತಾದ ಭಕ್ತಿರಸದ ಕಾರ್ಯಗಳಾಗುವದರಿಂದ ಆ ರಸವು ಭಕ್ತಜನರಿಂದ ಆಸ್ವಾದಿಸಲ್ಪಡುತ್ತದೆ. ಭಕ್ತಿಯು ಆನಂದೋದಯಕ್ಕೆ ಕಾರಣ ಆನಂದಾನುಭವಿಕವಾದ ಭಕ್ತಿಯು ರಸಗಳಲ್ಲಿ ಶ್ರೇಷ್ಠವೆನಿಸುವದು ಇದೇ ಒಂದು ಮುಖ್ಯ ಉದ್ದೇಶವನ್ನಾಗಿರಿಸಿ ಪ್ರಾಚೀನ ಕವಿಗಳು ಭಕ್ತಿ ಪ್ರಧಾನ ಕಾವ್ಯಗಳನ್ನು ಬರೆಯುತ್ತಿದ್ದರು. ಇಂದಿನ ಸಾಹಿತ್ಯದಲ್ಲೂ ರೂಪಾಂತರದಿಂದ ಭಕ್ತಿಯು ಕಾವ್ಯಗಳಲ್ಲಿ ಅಡಕವಾದದ್ದು ಕಂಡುಬರುತ್ತದೆ ಹೀಗೆ ಈ ಕಾವ್ಯದಲ್ಲಿ ಭಕ್ತಿಗೆ ಅಂಗವಾದ ಶೃಂಗಾರ-ವೀರ ಮುಂತಾದ ರಸಗಳು ಸ್ಫುಟವಾಗಿ ಕಂಡು ಬರುವವು ಯಕ್ಷನ ವಿರಹ ವ್ಯಥೆಯಲ್ಲಿ ಕಾಣುವ ಶೃಂಗಾರವಾಗಲೀ ಊರ್ವಶಿಯ ಮೋಹಿಸಿ ಕಾಣುವ ಶೃಂಗಾರವಾಗಲೀ ದುಷ್ಯಂತನಿಗೆ ಶಕುಂತಲೆಯನ್ನು ನೋಡಿದಾಗ ಮೂಡಿದ ಶೃಂಗಾರವಾಗಲೀ ಇಲ್ಲಿ ಇರುವದಿಲ್ಲ. ಆ ತರಹದ ಸನ್ನಿವೇಶಗಳು ಇಲ್ಲಿ ಸಿಗುವದಿಲ್ಲ ಅಲ್ಲಿಯ ಶೃಂಗಾರ ಜಡವಾದ ದೇಹ ಮತ್ತು ವಿಷಯ ಮನಸ್ಸುಗಳಿಗೆ ಸಂಬಂಧವಾದದ್ದು. ಆದರೆ ಇಲ್ಲಿ ಭಕ್ತಿ ಪ್ರಧಾನವಾದ ದಾಸರಾಯರ ಕಾವ್ಯದಲ್ಲಿ ಪಾರಲೌಕಿಕವಾದ ಮುನಿಜನಮಾನ್ಯವಾದ ಅಪ್ರಾಕೃತವಾದ ಸಾತ್ವಿಕ ಶೃಂಗಾರವು ಕಂಡುಬರುವದು. ಅಂತಹ ಶೃಂಗಾರವನ್ನೇ ದಾಸರಾಯರು ಬಣ್ಣಿಸುವರು. ಗ್ರಾಮ್ಯ ಶೃಂಗಾರದಿಂದ ಜುಗುಪ್ಸಿತರಾದ ಅವರು ಅಪ್ರಾಕೃತಾನಂದಾನುಭವಕ್ಕೆ ಕಾರಣವಾದ ಸಾತ್ವಿಕ ಶೃಂಗಾರಗಳಲ್ಲಿ ತಮ್ಮ ಕವಿತಾ ಶಕ್ತಿಯನ್ನು ವಿನಿಯೋಗಿಸುವರು.

ಇದೇ ದಾಸರಾಯರ ಶೃಂಗಾರ ಕಾವ್ಯಗಳ ವೈಶಿಷ್ಟ್ಯ ಇಂಥ ಶೃಂಗಾರ ಮುಂತಾದ ನವರಸಭರಿತವಾದ ಈ ಕಾವ್ಯದಲ್ಲಿ ನಾಯಕನು ಶ್ರೀ ಹರಿಯು ಅವನೇ ಅನಂತನು ಅವನೇ ಸತ್ಯ, ಕಾಲ, ಬ್ರಹ್ಮ ಇತ್ಯಾದಿ ಶಬ್ದಗಳಿಂದ ಕರೆಯಿಸಿಕೊಳ್ಳುವವನು ಅವನೇ ಶ್ರೀ ಕೃಷ್ಣನು ಅವನ ಸರ್ವೋಚ್ಚತ್ವವನ್ನೂ ಮಹಾಮಹಿಮೆಯನ್ನೂ ಬಂಣಿಸುವದು ಕಾವ್ಯದ ಮುಖ್ಯ ಗುರಿ. ಇದಕ್ಕೆ ತಕ್ಕಂತೆ ಮುಂಚೆ– "ನಕ್ಷತ್ರ ಮಾಲಿಕೆ" ಎಂದು ದೇವತಾ ಸ್ತೋತ್ರ ರೂಪವಾದ ಮಂಗಲ ಸಂಧಿಯನ್ನು ರಚಿಸಿರುತ್ತಾರೆ ದಶಸಂಧಿಗಳಿಂದ ಯುಕ್ತವಾದ ಈ ಕಾವ್ಯದ ಎರಡನೆಯ ಸಂಧಿಯಿಂದ ಕಥಾರಂಭಕ್ಕಾಗಿ ಹತ್ತನೆಯ ಸಂಧಿಯಲ್ಲಿ ಮುಗಿಯುವದರಿಂದ ೧ ನೆಯ ಸಂಧಿಯು ಕೇವಲ ಮಾಂಗಲಿಕವಾಗಿ ಉಳಿದ ಕಾವ್ಯಸಂಧಿಗಳಿಗೆ ಪೀಠಿಕೆಯಂತೆ ಇರುತ್ತದೆ ಈ ಮಂಗಲ ವಿದ್ಯಾಪರಿಚಯ.

ಶ್ರೀ ರಮಣಿ ಸುಸ್ತನಗಳೆಂಬ ಕೋಕನಗಳಿಂ
ಸಾರ ಭಕ್ತಾವಳಿಯ ಹೃತ್ಕಮಲ ನಲಿದಾಡೆ
ಮೀರಿದಾನಂದದಿಂ ಸುಜನ ಭ್ರಮರಂಪಾಡೆ ದುರ್ಬುದ್ಧಿ
ಕುಮುದ ಬಾಡೆ ||
ಘೋರ ದುರಿತಗಳೆಂಬ ಋಕ್ಷಗಳ ನಡಗಿಸುವ
ಮಾರಪಿತ ಶ್ರೀ ಮನೋಹರವಿಠಲನಂಘ್ರಿ ನಖ
ನೂರೆಲೆಯು ಗೆಳೆಯನೆನ್ನ ಕುಮತಿ ತಮ ಪರಿಹರಿಸಿ
ಸುಮತಿ ದ್ಯುತಿಯಿಂದಲಿ || ೧ ||

ಈ ಪದ್ಯದಿಂದ ಮಂಗಲವನ್ನು ಮಾಡಿರುತ್ತಾರೆ. ಪರಮಾಸ್ತಿಕರ ಆದರ್ಶ ಮಾರ್ಗವನ್ನು ಸಂಪ್ರದಾಯದಿಂದ ಅನುವರ್ತಿಸುವ ದಾಸರಾಯರು ಮಂಗಲಾಚರಣೆಯ ಬಗ್ಗೆ ಬೇರೆ ಏನನ್ನೂ ಹೇಳಬೇಕಿಲ್ಲ

ಈ ಮಂಗಲ ಶ್ಲೋಕದಲ್ಲಿ ನಮಸ್ಕಾರೋಪಯೋಗಿಯಾದ ಗುಣಗಳನ್ನು ತಿಳಿಸಿ ನಮಸ್ಕಾರದ ಸಮರ್ಥನೆಯನ್ನು ಮಾಡಿರುತ್ತಾರೆ ಶ್ರೀ ಪತಿಯೆಂದು ಹರಿಯನ್ನು ಅಲಂಕಾರದಿಂದ ಸ್ತುತಿಸಿ ನುತಿಸಿದನಂತರ ಅವನ ಅಂಗವಾಗಿ ಅಂದರೆ— ಸತಿಯೆಂದು ತಿಳಿಸಿ ಪರಂಪರೆಯಿಂದ ನಮಸ್ಕಾರವನ್ನು ನಿರೂಪಿಸಿ ಸಕಲ ವಾಙ್ಮನೋನಿಯಾಮಕನಾದ ಶ್ರೀ ರಮಾದೇವಿಯವರಿಗೆ ಮಾಡುವ

ದನ್ನು ಪರಮಾತ್ಮನ ವಿಶೇಷಣವಾಗಿ ವಂದನವನ್ನೂ ತಿಳಿಸಿ ಶಾಸ್ತ್ರ ಸಂಪ್ರದಾಯವನ್ನು ಮಂಡಿಸಿರುವದು ಪರಿಗಣನೀಯವಾದ ಸಂಗತಿಯಾಗಿದೆ. ಪದ್ಯಾರಂಭದಲ್ಲಿ ಶ್ರೀಕಾರವನ್ನಿಡುವದರಿಂದ ಈ ಕಾವ್ಯವು ಪರಮ ಶ್ರೀಕರವೆಂಬುದಾಗಿ ತಿಳಿಯುವದು. ಶ್ರೀ ಶಬ್ದವು ಮೊದಲಿಗಿರುವದು. ಆ ಪ್ರಬಂಧದ ಶ್ರೀಕರತ್ವ ಸೂಚಕವೆಂಬುದಾಗಿರುವ ವಿಷಯವನ್ನು ಶ್ರೀ ಗುರುರಾಜರು ಬರೆದ ಸುಧೆಯ ಟಿಪ್ಪಣೆಯಲ್ಲಿ ಕಾಣಬಹುದು. ಮಲ್ಲಿನಾಥನು ತನ್ನ ಮಾಘ ವ್ಯಾಖ್ಯಾನದಲ್ಲಿ ಇದನ್ನು ಸಾಧಾರಣವಾಗಿ ಸಮರ್ಥಿಸಿರುತ್ತಾನೆ. ಶ್ರೀಪರಮ ಪೂಜ್ಯ ಶ್ರೀಮದ್ವಾದಿರಾಜ ಯತಿಪುಂಗವರೂ ಸಹ, ಶ್ರೀಕಾರದಿಂದೊಡಗೂಡಿದ ಮಂಗಲ ಪದ್ಯದಿಂದ ತಮ್ಮ ರುಕ್ಮಿಣೇಶ ವಿಜಯವನ್ನು ವಿರಚಿಸಿರುತ್ತಾರೆ. ಇದೆಲ್ಲವೂ ಅವರ ಅತಿಶಯವಾದ ಲೋಕಕಾವ್ಯಾ ವೇಕ್ಷಣವನ್ನು ಸೂಚಿಸುತ್ತವೆ.

೨ ನೆಯ ಶ್ಲೋಕದಲ್ಲಿ ಕಥಾವಸ್ತುವಿನ ಸಾಮಾನ್ಯ ಪರಿಚಯವನ್ನೂ ಕಥಾ ಸಂಕ್ಷೇಪವನ್ನೂ ಸೂಚಿಸಲು ಅದಕ್ಕೆ ತಕ್ಕ ಪದಗಳಿಂದ ಶ್ರೀಮದನಂತನ ಗುಣ ಮತ್ತು ಕೀರ್ತಿಗಳನ್ನು ವರ್ಣಿಸಿರುತ್ತಾರೆ. ಅನಂತ ಪದದ ವಿವರಣರೂಪವಾಗಿ ಸತ್ಯ, ಕಾಲ, ಪೂರ್ಣ ಇತ್ಯಾದಿ ಪದಾರ್ಥನು ಶ್ರೀ ಹರಿಯೆಂದೂ ಅವನ ಗುಣಗಳೇ ಆಯಾ ಶಬ್ದಗಳ ಶಕ್ತಿಯೆಂದೂ ತಿಳಿಸಲು ಸೃಷ್ಟ್ಯಾದ್ಯಷ್ಟ ಕರ್ತೃತ್ವಾದಿ ಗುಣಗಳಿಂದ ಸ್ತುತಿಸಿ ಅನಂತನಿಗೆ ವಂದಿಸಿ ಶ್ರೀಹರಿ ಕಥಾ ಶ್ರವಣ ಮನನಾದಿಗಳು, ಶಾಸ್ತ್ರವಿಹಿತ ಧರ್ಮಗಳೆಂದು ಸೂಚಿಸಿರುತ್ತಾರೆ.

ನಕ್ಷತ್ರ ಮಾಲಿಕಾ ಸಂಧಿಯಾದಿಯಾಗಿ ಹತ್ತುಸಂಧಿಗಳಿಂದ ಕೂಡಿದ ಈ ಕಾವ್ಯದಲ್ಲಿ ಅನಂತ ಕಥಾ ಮುಖವಾಗಿ ಪಾಂಡವರ ರಾಜಸೂಯಯಾಗ, ತರಂಗ, ಮಾಗಧ, ಶಿಶುಪಾಲವಧ, ದುರ್ಯೋಧನನ ಅಪಮಾನ, ಅಗ್ರಪೂಜೆ, ನಂತರ ದ್ಯೂತ ಕ್ರೀಡಾ, ಫಲ, ಪಾಂಡವರ ಸೋಲು, ದ್ರೌಪತಿಯ ಮಾನ ರಕ್ಷಣ, ವನವಾಸ ಇವುಗಳನ್ನು ಸವಿಸ್ತಾರವಾಗಿ ಆರು ಸಂಧಿಗಳಿಂದ ವರ್ಣಿಸಿ ಮೂರು ಸಂಧಿಗಳಿಂದ ಅನಂತನ ವ್ರತಾಚರಣೆ ಕೌಂಡಿಣ್ಯೋಪಾಖ್ಯಾನಗಳನ್ನು ನಿರೂಪಿಸಿ ಕೊನೆಯ ಸಂಧಿಯಿಂದ ಫಲರೂಪವಾಗಿ ಸಂಕ್ಷೇಪದಿಂದ ಪಾಂಡವರ ರಾಜ್ಯವಿಜಯವನ್ನು ಚಿತ್ರಿಸಿ ಭಾರತ ಕಥೆಯಲ್ಲಿ ಅನಂತ ಕಥೆಯ ಅಂಗವಾಗಿ ಅಡಕವಾಗಿರುವದೆಂಬದನ್ನು ವ್ಯಕ್ತಗೊಳಿಸಿ ಭಾರತ ಕಥಾ ಮಂಗಳವನ್ನು

ವಿರಚಿಸಿರುತ್ತಾರೆ. ಸಂಧಿಯ ಆದಿಯಲ್ಲಿಯೇ ಸಂಧಿಯಲ್ಲಿ ಬರುವ ಕಥಾ ಸಂಕ್ಷೇಪವನ್ನು ಒಂದು ಪದ್ಯದಿಂದ ಸೂಚಿಸಿರುವದೂ ಒಂದು ಗಮನೀಯ ಸಂಗತಿಯೇ !

ಇನ್ನು ರಸಾಲಂಕಾರಗಳಕಡೆಗೆ ವಿಚಾರಿಸಿದರೆ ಈ ಕಾವ್ಯದಲ್ಲಿ ಆ ತರಹದ ಸಂಪತ್ತಿಗೂ ದಾರಿದ್ರ್ಯವಿಲ್ಲ ಪ್ರತಿಪದ್ಯದಿಂದ ಆಗುವ ಅರ್ಥಭಾವನೆಗಳಲ್ಲಿ ಮುಳುಗಿ ತಳಕಂಡು ಹಿಡಿಯುವ ಬುದ್ಧಿವಂತರಿಗೆ ನವರಸಗಳು ಒಂದೊಂದಾಗಿ ಯಾದರೂ ಈ ನವಸಂಧಿಯಲ್ಲಿ ಸಿಗದಿರಲಾರವು

## ಶೃಂಗಾರ ರಸ

ಶೃಂಗಾರ ರಸವು ದೇವತೆ, ಗುರುಗಳು, ಬಾಂಧವರು ಹೆಂಡಂದಿರು ಉಪ ನಾಯಿಕೆಯರು, ಜಾರಿಣಿ ಸ್ವೈರಿಣಿಯರು, ಹೀಗೆ ಎಲ್ಲರಲ್ಲಿಯೂ ಕಂಡುಬರುತ್ತವೆ. ಗ್ರಾಮ್ಯವಾದ ಶೃಂಗಾರವು ಬೀಭತ್ಸತನದಿಂದ ಭಾಣ ಮುಂತಾದವುಗಳಲ್ಲಿ ಕಂಡು ಬರುವದುಂಟು ಆದರೆ ಮಹಾಕಾವ್ಯಗಳಲ್ಲಿ ಬರಿ ಶೃಂಗಾರಗಳಿಗೆ ಬಹಳ ಕಡಿಮೆ ಅವಕಾಶವಿರುವದು ಹೀಗೆ ವಿಚಾರಿಸುವಾಗ ಈ ಕಾವ್ಯದಲ್ಲಿ ಬಹುಭಾಗ ಸಾತ್ವಿಕ ಶೃಂಗಾರವಿದ್ದು, ಗ್ರಾಮ್ಯಶಂಗಾರದ ಅತ್ಯಂತ ನ್ಯೂನತೆಯು ಸ್ಪಷ್ಟವಾಗಿ ಕಂಡು ಬರುವದು ಸಾತ್ವಿಕವಾದ ಮನೋವೃತ್ತಿಯಿಂದ ದೇವ ಗುರುಗಳನ್ನು ಶೃಂಗಾರ ರಸಗಳಲ್ಲಿ ಬಣ್ಣಿಸಿರುವದೂ ಈ ಕಾವ್ಯದಲ್ಲಿ ಮತಿಗೋಚರವಾಗುತ್ತದೆ.

ದ್ರೌಪದಿಯನ್ನು ಬಣ್ಣಿಸುವಾಗ ಶ್ರೀ ದಾಸವರೇಣ್ಯರು—

“ ಇಂದು ಮಂಡಲ ಸದೃಶವಾಗಿರಲು ಮುಖ ಪೊಳೆವ
ಮಂದಸ್ಮಿತಂ ಚಂದ್ರಿಕೆಯ ತೆರದೊಳಿರೆ ರತ್ನ
ಹೊಂದೆಡೆಗೆ ಮೌಕ್ತಿಕದ ಹಾರಂಗಳುಡು ನಿಕರದೊಳ್ ಮೆರೆಯ
ಕುಲಶ ಮಣಿಯಾ ॥ ೧ ॥
ವೃಂಗದಿಂ ನಿರ್ಮಿಸಿದ ಮಲ ಮಂಟಪಂ ಗಗನ
ದಂದ ವಾಗಿರೆ ಕೃಷ್ಣೆ ಕುಳಿತಿರ್ದಳತಿ ತೇಜ
ದಿಂದಲ್ಲಿ ನೆರೆದಂಗನೆಯರ ಕಂಗಳ ಚಕೋರಗಳಿಗಾನಂದಮಂ
ಕೊಡುತ್ತಾ ॥ ಸಂ. ೬ ಪದ್ಯ ೪೪ ॥

ಮುಖ ಸ್ಮಿತ ರತ್ನಹಾರ ನೇತ್ರಗಳನ್ನಷ್ಟೇ ವರ್ಣಿಸಿ ಅದರ ಮುಂದಿನ ಎಲ್ಲ ಶೃಂಗಾರವನ್ನು ವರ್ಣಿಸಕೂಡದೆಂಬ ಭಯದಿಂದಲೂ, ವಾಸ್ತವಿಕ ವಾಗಿಯೂ "ಭಾರತಿ ಸ್ವರೂಪಾಂಶಳಾದ ದ್ರೌಪದಿಯ ಶೃಂಗಾರವಂ ವರ್ಣಿಸುವ ಕವಿಯಾವನಾ" ಎಂದು ತಮ್ಮ ಅಶಕ್ತಿಯನ್ನು ತೋರ್ಪಡಿಸಿರು ತ್ತಾರೆ. ಆದರೆ– ಮುಂದೆ ಶೀಲೆಯ ಬಾಲ್ಯ ಯೌವನೋದಯಗಳನ್ನು ಚಿತ್ರಿ ಸುತ್ತ ಶೃಂಗಾರಗಳ ಪರಮಾವಧಿಯನ್ನು ಸಹೃದಯರಿಗೆ ಹೃದಯಂಗಮ ವಾಗುವಂತೆ ಬಣ್ಣಿಸಿರುತ್ತಾರ ||೪-೬|| ಪದ್ಯಗಳಲ್ಲಿ ತರುಣಿಯ ಸರ್ವಾಂಗ ಸೌಂದರ್ಯವನ್ನು ವರ್ಣಿಸಿ ರಸಿಕರ ಸರಸ ಮನಸ್ಸನ್ನು ವಶಪಡಿಸಿಕೊಂಡಿ ರುತ್ತಾರೆ

## ಯೌವನೋದ್ಗಮ

ಬಡ ನಡುವು ನಲಿಯೆ ಗತಿ ಮಂದತ್ವಮಂ ತಳಿಯೆ
ಜಡಜ ಕುಟ್ಮಲದಂತೆ ಕುಚಯುಗಂ ಪೂರ್ಣ್ಮೆ ಕೆಂ
ಪಿಡಿದಧರ ಬಿಂಬ ಫಲದಂತೆಶೆಯೆ ನುಣ್ಗಲ್ಲ ಮುಕುರದೊಲ್ ವಿಭ್ರಾಜಿಸೆ ||
ಕುಡಿವರಿವ ನಸುಲಜ್ಜೆ ನಗೆಮೊಗದೊಳಂಕುರಿಸೆ
ಕುಡತೆಗಂಗಳ ನೋಟ ಹೊರಸೂಸೆ ದೇಹ ಸೊಂ
ಪಡರ್ದು ನುಂಪಿಡಿದುದಾ ಕಂಪೊಗೆಯಲಾಶೀಲೆ ಜವ್ವನದೇಳ್ಗೆಯಂ
ಮೆರೆದಳು || ಸ. ೭-೫೩ ||

ಅಂಗೋಪಾಂಗಗಳಲ್ಲಿ ಪ್ರಾಯದ ನಿವೇಶನವನ್ನು ಚಿತ್ರಿಸುತ್ತ ಮದನನು ಅಲ್ಲಿ ನಿಗೂಢನಾಗಿ ನಿಂತು ತನ್ನ ಅಸ್ತ್ರ ಪ್ರಚಾರವನ್ನು ಅವಳ ಲ್ಲಿಯೂ ಇತರರಲ್ಲಿಯೂ ಉಂಟುಮಾಡುತ್ತಾನೆಂಬ ಮದನವಿಕಾರವನ್ನು ವ್ಯಂಗ್ಯವಾಗಿರಿಸಿ ಚಿತ್ರಿಸುವದನ್ನು ಮುಂದಿನ ಪದ್ಯದಲ್ಲಿ ಕಾಣಬಹುದು

ಅರಸಂಚೆಗಲೆಗೆ ಕೋಗಿಲೆ ಗಿಳಿಗಳಿಂಚರಕೆ
ಪರಮೆಕುಲ ಕುಂತಳಕೆ ಸಾರಂಗ ಕಂಗಳ್ಗೆ
ಹರಿಮಧ್ಯಕೆಣೆವಕ್ಕಿ ಸ್ತನಗಳ್ಗೆ ಶೋಭಿಸುವ ರೋಮರಾಜಿಗೆ
ಭುಜಗವೋ ||
ಮರೆವಾಂಗ ಲಾವಣ್ಯ ಕಂಡು ಮನಸೋಲ್ದು ಸು
ಸ್ಥಿರವಾಗಿ ನಿಂದನ ವಯವದೊಳೆನಲಾ ಬಾಲೆ

ಯರ ಶಿಖಾಮಣಿ ಶೀಲೆಯನುಪನು ಕಳೇವರದ ಸೌಂದರ್ಯ
ರಾಜಿಸಿದುದು ॥ ಸ ೭. ೫೬ ॥

ಯೌವನೋದಯದ ಫಲವಾಗಿ ಅಂಗೋಪಾಂಗಗಳಲ್ಲಿ ಸೌಂದರ್ಯವು ಬೆಳವಣಿಗೆ ಹೊಂದಿ ಮದನವಿಕಾರ ಪರಿಣಾಮವಾಗಿ ಮನಸಿಜನ ಸಂಮೋಹನ ಲೀಲೆಗಳನ್ನು ಸುಲಲಿತ ಸಮುಚಿತ ಪದಗಳಿಂದ ವರ್ಣಿಸಿರುವದನ್ನು ಮುಂದಿನ ಪದ್ಯದಲ್ಲಿ ಕಾಣಬಹುದು

ಪೊಳೆವ ಕಂಗಳ ಬೆಳಗು ಮನ್ಮಥನ ಮಸೆದಲಗು
ಲಲಿತ ಪುಬ್ಬಿನ ಮಾಟ ಸ್ಮರನ ಚಾಪಟಧೀಟಿ
ತೊಳಗುತಿಹ ಸದ್ವದನ ಲೋಕಮೋಹದ ಸದನ ಕಾಂತಿ
ಮುನಿಜನರ ಭ್ರಾಂತಿ ॥
ತಲೆದೋರ್ವ ನವಪ್ರಾಯ ವಿಟರಿಗಿಕ್ಕಿದ ಮಾಯ
ಪೊಲಿಯುತಿಹ ಕೇಶಗಳು ಮದನ ಜಯ ಪಾಶಗಳು
ಇಳೆಯೊಳಚ್ಚರಿ ಬಾಲೆ ಸಾತ್ವೀಕ ಗುಣಶೀಲೆ ಶೀಲೆಕಣ್ಗೆಸೆದಿರ್ದಳು॥೫೭॥

ಬಾಲೆಯರ ಒಂದೊಂದುಂ ಅವಯವಗಳು ಮದನಮಯವಾಗಿ ಮೋಹಕವಾಗಿರುವವೆಂಬುದನ್ನು ಸರಸವಾಗಿ ಹೇಳಿ "ಅವರು ಎಂಥವನನ್ನಾದರೂ ಮೋಹಿಸಬಲ್ಲರು" ಎಂಬುದನ್ನು ಧ್ವನಿಗೊಳಿಸಿ, ಆ ಅರ್ಥವನ್ನು ಶೀಲೆಯ ನಾಮಕ್ಕೆ ಇದು ಅಚ್ಚರಿಯೆಂದು ವಿರೋಧಾಭಾಸ ಅಲಂಕಾರದೊಂದಿಗೆ ರಸಿಕರ ಹೃದಯರಂಗದಲ್ಲಿ ಬಿಂಬಿಸಿರುತ್ತಾರೆ.

ಹೀಗೆ ಚೇತನಗಳಲ್ಲಿ ಶೃಂಗಾರವನ್ನು ವ್ಯಕ್ತಗೊಳಿಸುವಂತೆ ಅಚೇತನಗಳಂತಿರುವ ಕಮಲ ಮುಂತಾದವುಗಳಲ್ಲಿರುವ ಶೃಂಗಾರವನ್ನು ಸಾಮಾನ್ಯ ಬುದ್ಧಿಗನುಗುಣವಾಗಿ ವರ್ಣಿಸುವದೂ ಮಹಾ ಕವಿಗಳ ಸಂಪ್ರದಾಯ, ಅದನ್ನೂ ಈ ಕವಿಗಳು ಸೂರ್ಯೋದಯ ವರ್ಣನೆಯಲ್ಲಿ —

ಕಮಲಂಗಳಾಗ ಕಮಲಂ ಬಪ್ಪ ಪವನಂ
ಸಮನಿಸಲ್ ವ್ಯೆ ಪುದುಗಿಕೊಂಡು ಮಧುಪನಮುಖದ
ಕಮನೀಯ ಝೇಂಕಾರರೂಪದಿಂದ ತಮ್ಮ ಸಖನಾಗಮನ ಕೇಳುತಿರೆ॥
ವಿಮಲ ಮಣಿಮಯ ಜೋಡು ಧಾತ್ರಿಗೆ ತೊಡಿಸಿದಂತೆ
ದ್ಯುಮಣಿಮಂಡಲ ತೋರಲಾ ಸಮಯ ಕಬ್ಜವ್ರಜ

ಸುಮನದಿಂದೀಕ್ಷಿಸುತಲಪ್ಪು ವೊಲ್ಪಳಗಳಿಂ ಪಳ್ಳೈಸಿದವು
ನಲಿಯುತಾ ॥ ೫ ॥ ೧೫ ॥

ಚೇತನಗಳಂತೆ ಭಾವುಗಳನ್ನು ತೋರಿಸುತ್ತ ದಿನಮಣಿಯೆಂಬ ಇನಿಯನ ಸುಖಾಗಮನವನ್ನು ತುಂಬಿಯ ಗುಂಯಿಕಾರದಿಂದ ಕೇಳಿ ಮನಸೋತು ಪ್ರಣಯುವನ್ನು ವೈದೆರೆದು ತೋರಿಸಿ, ದಲ ನಿಮೀಲನದಿಂದ ಆದ ಶೃಂಗಾರವನ್ನು ನಲಿರಾಟದೊಂದಿಗೆ ತೋರಿಸಿರುವದು ಇವರ ಶೃಂಗಾರದ ಪರಮಾವಧಿಯು ನಿದರ್ಶಕವಾಗಿದೆ.

" ತರಣಿಯೊಳ್ ನೆರೆಯಬೇಕೆಂದು ಸುಮ್ಮಾನದಿಂ । ಪರಿ ಶೋಭಿಸುವ
ಪೂರ್ವದಿಕ್ ತರುಣಿ ಕುಂಕುಮದಿವರನುಜ್ಜನಂಗೈದಳೋ ॥

ಎಂಬ ಇವರ ಈ ಉತ್ಪ್ರೇಕ್ಷೆಯಿಂದ ಪ್ರಣಯರಾಗವು ವಿಶ್ವವ್ಯಾಪಕವೆಂಬುದು ಕಂಡುಬರುತ್ತಿದೆ ಹೀಗೆ ಶೃಂಗಾರ ರಸವನ್ನು ಜಡ-ಚೇತನ ಸಾಧಾರಣವಾಗಿ ಸಮುಚಿತ ಸರಣಿಯಲ್ಲಿ ಸೂರೆ ಸೂರೆಗೊಳಿಸಿರುವ ಇವರ ಶೈಲಿಯು ಅನೇಕ ಕಡೆಗೆ ಸ್ಫುಟವಾಗಿ ಕಂಡು ಬಂದು ಬುಧಜನರ ಶ್ಲಾಘನೆಗೆ ಗೋಚರವಾಗುತ್ತದೆ. ಸ್ವಯಂವರ ದಂಪತಿಗಳ ಪ್ರಣಯ ಸಂಗಮ ಮುಂತಾದವುಗಳ ಸನ್ನಿವೇಶಗಳಿರದಿದ್ದರೂ ಒಂದು ನಿಮಿತ್ತದಿಂದ ಶೃಂಗಾರವನ್ನು ವಿಸ್ತರಿಸಿ, ವ್ಯಕ್ತಗೊಳಿಸುವದು ಸಾಮಾನ್ಯ ಕವಿಗಳಿಗೆ ಬಾರದೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು

ಇನ್ನು ವೀರ-ಅದ್ಭುತ ಭಯಾನಕಗಳ ಕಡೆಗೆ ದೃಷ್ಟಿಯನ್ನು ತಿರಗಿಸುವ ! ಯುದ್ಧ ಪ್ರಸಂಗಗಳಲ್ಲಿ ಈ ರಸಗಳ ಸಮಾವೇಶವು ಕಂಡು ಬರುವದು. ಉಭಯ ವೀರರ ವೀರತನದ ಸಂಭಾಷಣೆಗಳಲ್ಲಿ ಕಾದಾಟದ ವರ್ಣನೆಯಲ್ಲಿ ಅದರ ಫಲವನು ಊಹಿಸಿ ಬಿಂಬಿಸುವಾಗ ಸ್ಪುಟವಾಗಿ ಮತ್ತಷ್ಟು ಎದ್ದು ಕಾಣಬಹುದು.

ವೀರ ರಸೋದಯವಾಗಲಿಕ್ಕೆ ಕಾರಣವಾದ "ಸ್ಪರ್ಧೆ– ಪರಸ್ಪರ–ಮತಿ-ಮತ ವೈಷಮ್ಯ ಸ್ವಭಾವ ವಿರೋಧ, ಹೀಯಾಳಿಸುವಿಕೆ ಮತ್ಸರ" ಇವುಗಳನ್ನು ತೋರಿಸಿ ವೈರಾನಲವನ್ನು ಹೊತ್ತಿಸಿ. ಅದರ ಆಟೋಪದ ಭರದಲ್ಲಿ ವೀರ ರಸದ ಜ್ವಾಲಾಮುಖಿಯನ್ನು ಹುಟ್ಟಿಸಿ ಪದ್ಯಗಳಲ್ಲಿ ತೋರಿಸುವದು ಮಹಾ

ಕವಿಗಳ ಸಂಪ್ರದಾಯ ಕುಮಾರವ್ಯಾಸ ಭಟ್ಟನಾರಾಯಣ-ಮುರಾರಿ ಮುಂತಾದ ಕವಿಕುಲ ಲಲಾಮರು ಹೀಗೆಯೇ ಸನ್ನಿವೇಶಗಳಿಂದ ರಸಪ್ರೋಷಣ ಮಾಡಿ ಕಾವ್ಯಗಳಿಗೆ ಶೋಭೆಯನ್ನಿತ್ತಿದ್ದಾರೆ ಇಂಥ ಸನ್ನಿವೇಶಗಳಲ್ಲಿ ಒಂದೆರಡನ್ನು ಮಾತ್ರ ಈ ಕಾವ್ಯದಲ್ಲಿ ಕಾಣಬಹುದು ಮಾಗರ ಭೀಮರ ಸಮರಾಗವಾಗಿ ಕೃಷ್ಣನಿಂದೆ, ಅದರ ಅಸಹನೆಯಿಂದ ಭೀಮನ ಆಟೋಪ, ಶ್ರೀ ಕೃಷ್ಣನ ಯುದ್ಧಯಾಚನೆ, ಭೀಮನೊಡನೆ ಯುದ್ಧಮಾಡುವ ಜರಾಸಂಧನ ಆಗ್ರಹ, ಭೀಮನ ರೊಚ್ಚಿನ ಅಂಕುರ, ಇವೇ ಮೊದಲಾದವುಗಳಿಂದ ವೀರ ರಸವು ಬಹು ರೂಪುಗೊಂಡು ಬೆಳೆದು ಹರಿದಿರುತ್ತದೆ

ಗದಾ ಯುದ್ಧದ ರುದ್ರಸನ್ನಿವೇಶದಲ್ಲಿ ವೀರ ಅದ್ಭುತ ಭಯಾನಕಗಳು ಸಹಜವಾಗಿ ಹೊರಹೊರಡುವವು, ಅಂತೆಯೇ ಈ ರಸಗಳು ಗದಾ-ಮಲ್ಲ ಸಮರಾಂಗಣದಲ್ಲಿ ಉಕ್ಕೇರಿಬುಗ್ಗೆಯಾಗಿ ಹರಿಯುವಷ್ಟುಮತ್ತಾವ ಪ್ರಸಂಗದಲ್ಲಿಯೂ ಹರಿಯುವದಿಲ್ಲ ರನ್ನನ ಗದಾಯುದ್ಧ, ಭಟ್ಟನಾರಾಯಣನ ಗದಾಯುದ್ಧದ ವರ್ಣನೆಯಂತೆ ಇಲ್ಲಿ ಭೀಮ ಮಾಗಧರ ಗದಾಯುದ್ಧದಲ್ಲಿ ನಾನಾ ಪ್ರಹಾರಗಳ ನಾಮಧೇಯದಿಂದ ಬಣ್ಣಿಸಿರುವಾಗ ಯುದ್ಧ ಕೌಶಲ್ಯದಿಂದ ಆ ರಸಪಾಕಕ್ಕೆ ಮತ್ತಷ್ಟು ರುಚಿ ಯೋಜನೆಯಾಗಿದೆ ಗದಾಯುದ್ಧದ ವಿವರಗಳು ಕವಿಗಳ ಪ್ರತಿಭಾ ಲೋಕದಲ್ಲಿ ಸಂಚರಿಸಿ ನಲಿದಾಡುತ್ತಿದ್ದವೆಂದು ನಿಃಸಂದೇಹವಾಗಿ ಹೇಳಬಹುದು ಇಂತಹ ಸಮರಶೌಂಡರ ವೀರಚರಿತ್ರಗಳು ರಸಭರಿತವಾಗಿ ವರ್ಣಿತವಾಗಿರುವದು ಕುಮಾರವ್ಯಾಸ ಮುಂತಾದವರಂಥ ನಿಸರ್ಗೋದ್ಭವ ಕವಿಗಳ ಪ್ರತಿಭೆಯಿಂದಲೇ ಸಾಧ್ಯವೆಂದು ಬೇರೆ ಹೇಳಬೇಕಿಲ್ಲ ಗದಾಮಲ್ಲ ಯುದ್ಧಗಳ ಸರ್ವಾಂಗೀಣ ವೈಭವವನ್ನು ಈ ಭೀಮ ಮಾಗಧರ ಕದನ ಕಥೆಯಲ್ಲಿ ಕಾಣಬಹುದಾದ್ದರಿಂದ ಆ ಬಗ್ಗೆ ಊಹಾಪೋಹ ತೋರಿಸುವದೆಂದರೆ ಸೂರ್ಯನನ್ನು ಕೈದೀವಿಗೆಯಿಂದ ತೋರಿಸಿದಂತೆ ಎಂದು ತಿಳಿದು ವಿರತರಾಗುವ.

ಇದರಂತೆ ಕರುಣರಸದ ವಿಷಯವಾಗಿಯೂ ಹೇಳಬಹುದು ಶೋಕ ಪ್ರಸಂಗಗಳು ಅನೇಕವಿದ್ದರೂ ದ್ರೌಪದಿ ಮತ್ತು ಕೌಂಡಿಣ್ಯರ ಶೋಕೋದ್ಗಾರಗಳು ಲೋಕೋತ್ತರವಾದವುಗಳು ದ್ರೌಪದಿಯಲ್ಲಿ ವಸ್ತ್ರಾಹರಣದ ಸನ್ನಿವೇಶ

ದಲ್ಲಿ ಬಂದಿರುವ ಪದ್ಯಗಳು-ಸಂಕಟದ ಬೇಡಿಕೆಗಳು ಜನರ ಹೃದಯ ನಯನಗಳಲ್ಲಿ ಬಾಷ್ಪ ಗಂಗಾಲಹರಿಯನ್ನು ಹರಿಯಿಸದೇ ಬಿಡಲಿಕ್ಕಿಲ್ಲ-

"ಬಾಗಿದೆಳೆ ಬಾಳೆಯೋಳ್ ಬಗ್ಗಿ ನಡೆವಾಸತಿಯ
ವೇಗಗತಿಯಲಿ ಝಣತ್ಕಾರಗಳ ನುಡಿ ವಸಂ
ಯೋಗ ನೂಪುರದರವ ಕಂಕಣ ಧ್ವನಿಯು ಹೊಂಗಿರು ಗೆಜ್ಜೆಗಳ ಸಿನಾದ ।
ಆ ಗರುತಿಯರ ರೋದನದ ರಭಸಗಳಿಗೆ ನೆರ
ವಾಗದಿರೆವೆಂಬ ತುಂಬಿದ ಮಹಾಶೋಕ
ಸಾಗರದ ಘೋಷವಾ ಗಜಪುರದ ಪಟ್ಟಣರೋಳೀ
ಪೇಳ್ವೆನದ್ಭುತವನಂ ॥ ೫೪ ॥

ಈ ಪ್ರಸಂಗದಲ್ಲಿ ದ್ರೌಪದಿಯ ಕರುಣಾರವವನ್ನು ಕೇಳಿ ಮನ ಮರುಗಿ ಕೊರಗಿರುವವರ ಪ್ರಳಾಪವನ್ನೂ ಆದರ ಅದ್ಭುತ ಪರಿಣಾಮವನ್ನೂ ಕಾಣುತ್ತೇವೆ ಇಂಥ ಹಲವಾರು ಪದ್ಯಗಳು ಶೋಕ ಅದ್ಭುತಗಳ ಸಂಯೋಗದೊಂದಿಗೆ ಎಷ್ಟೋ ಸಿಗುವವು ಅವನ್ನೆಲ್ಲ ಇಲ್ಲಿ ಉದಾಹರಿಸುವ ಗೋಜಿಗೆ ಹೋಗದೆ ಮುಂದೆ ಸಾಗೋಣ.

ದುಶ್ಶಾಸನನು ದ್ರೌಪದಿಯನ್ನು ಹಿಡಿತರುವಾಗ ದ್ರೌಪದಿಯ ವಚನಕ್ಕೆ ಉತ್ತರವಾಗಿ ಹೇಳುವನು—

ಎಲ್ಲಿ ಕುತ್ಸಿತ ಪ್ರಶ್ನ ನಿರ್ಣಯಂಮರೆ ವಾಕ್ಯ
ನೆಲ್ಲಿಯದು ಚಪಳೆ ನೀ ಪುಷ್ಪವತಿಯಾಗು
ಮೇಣಿಲ್ಲಿ ಫಲವತಿಯಾಗು ನಡೆ ಸುಮ್ಮನೆದ್ದು ನೀ ಕೌರವೇಶ್ವರನ
ಸಭೆಗೆ ॥ ೬-೫೪ ॥

ದ್ರೌಪದಿಯು—

" ನಾಂ ಪುಷ್ಪವತಿಯಾಗಿರ್ಪೆನೆಂದು " ಶಾಂತ ಹಾಗೂ ನ್ಯಾಯರೀತಿಯಿಂದ ಬೋಧಿಸಿದರೆ ಅದಕ್ಕೆ ಉತ್ತರರೂಪವಾಗಿ ಹೊರಟ ದುಶ್ಶಾಸನನ ಮೇಲಿನ ಪದ್ಯವು ಬೀಭತ್ಸತನದ ಪರಮಾವಧಿಯ ಉದಾಹರಣೆಯಾಗಿದೆ. ದುಷ್ಟ ಕಾಮಲೌಲ್ಯ ಮದಾಂಧತನ ಇವುಗಳ ಕಾರಣದಲ್ಲಿ ಬೆಳೆಯುವ ಬೀಭತ್ಸತನವು ಇಲ್ಲಿ ವ್ಯಕ್ತವಾಗುತ್ತದೆ.

ಹೀಗೆ ನವರಸಗಳು ನೆಲೆಯಾಗಿ ನಿಂತಿರುವ ಈ ಕವನಗಳ ವೈಖರಿ ಯನ್ನು ಹೀಗೆಯೇ ಪ್ರತಿ ಶ್ಲೋಕದ ವರ್ಣನೆಯೊಂದಿಗೆ ಬೆಳೆಸ ಹೊರಟರೆ ಮುನ್ನುಡಿವಿಸ್ತಾರವಾಗುವದರಿಂದ ಹಿಂದೆ ಸರಿಯುವ

ಇನ್ನು ರೀತಿ, ಅಲಂಕಾರ ಪ್ರಾಸ ಮುಂತಾದ ಅನೇಕ ಮಹತ್ವದ ವಿಷಯಗಳನ್ನು ಸೂಜ್ಞರು ಅಲ್ಲಲ್ಲಿ ಕಂಡು ಆನಂದ ಪಡುವರು, ಅದೆಲ್ಲವನ್ನೂ ಇಲ್ಲಿ ಉಲ್ಲೇಖಿಸುವದು ಅನಾವಶ್ಯಕ ! ಉಪಮೆ, ಉತ್ಪ್ರೇಕ್ಷೆ, ರೂಪಕ ದೃಷ್ಟಾಂತ, ನಿದರ್ಶನ, ಕಾವ್ಯಲಿಂಗ ಅರ್ಥಾಂತರನ್ಯಾಸ ಮೊದಲಾದ ಪ್ರಸಿದ್ಧ ಪ್ರಸಿದ್ಧ ಅಲಂಕಾರಗಳನ್ನು ಬುಧರು ವಿಮರ್ಶಿಸಿ ಪರೀಕ್ಷಿಸಿ ತೆಗೆಯಬಹುದು. ಅವುಗಳನ್ನು ಪ್ರಸಂಗಾಂತರದಿಂದ ತೋರಿಸುವ.

ಇಂತು ನವರಸಾತ್ಮಕವಾಗಿ ಅಲಂಕಾರರೀತಿ ಗುಣಗಳಿಂದ ಮೆರೆಯುವ ಈ ಕಾವ್ಯ ಕಾಮಿನಿಯು ಕವಿಗಳ ಮನೋರಂಗದಲ್ಲಿ ಸುಳಿದಾಡಿ ನಲಿದಾಡಿ ಭಾವಪರವಶರನ್ನಾಗಿ ಮಾಡಬೇಕು. ಆದರಿಂದ ಕವಿಗಳ ಪರಮ ಧ್ಯೇಯವಾದ ಭಕ್ತಿಯ ಪಾರವಶ್ಯತೆಯು ಅಂತರಂಗದಲ್ಲಿ ಆಗಬೇಕು ಎಂದು ಈ ಕಾವ್ಯವನ್ನು ಮುದ್ರಿಸಿ ಪ್ರಕಾಶಕ್ಕೆ ತಂದಿರುವದು ಅತ್ಯಂತ ಅಭಿನಂದನಾರ್ಹವಾಗಿದೆ. ಇದರಂತೆ ದಾಸಸಾಹಿತ್ಯಪಯೋನಿಧಿಯಲ್ಲಿ ಗುಪ್ತವಾಗಿರುವ ಕಾವ್ಯಾಮೃತಲಹರಿಗಳು ಒಂದೊಂದಾಗಿ ಹೊರ ಹರಿದು ಸಹೃದಯರಿಗೆ ಹೃದಯಾನಂದವಾಗಲೆಂದು ನಾನುಹಾರೈಸುತ್ತೇನೆ. ಇಂಥ ಪ್ರಕಟನೆಗಳನ್ನು ಶ್ರೀಯುತ ಗೊರೆಬಾಳ ಹಣಮಂತರಾಯರಿಂದ ಹೊರಡಿಸಿ ಆದರ ಮುಖಾಂತರ ದಾಸರಾಯರ ಪರಮ ಸಂದೇಶವನ್ನು ಬೀರಿಸಿ ಸುಜನರಿಗೆ ಇಹದಲ್ಲಿ ಆನಂದ ಪರತ್ರಕ್ಕೆ ಜ್ಞಾನಭಕ್ತಿ ಮುಂತಾದ ಸಾಧನಗಳನ್ನು ಬೆಳೆಯಿಸಿ ದಿವ್ಯ ಮಂಗಲವನ್ನೂ ಪ್ರಕೃತ ರಾಯರಿಗೆ ಇತೋಪ್ಯತಿಶಯ ಸೇವೆಗಾಗಿ ಸಕಲ ಸುಮಂಗಲಗಳನ್ನೂ ದಯಪಾಲಿಸಲೆಂದು ದೇವರಲ್ಲಿ ಪ್ರಾರ್ಥಿಸಿ ವಿರಮಿಸುವ !

ಸಜ್ಜನ ವಿಧೇಯ,

**केशवाचार्य जालिहाळ**

**गदग**
१२-१२-१९५८

# — ಪೀಠಿಕೆ —

೧ **ಕನ್ನಡ ಸಾಹಿತ್ಯ**— ಕನ್ನಡ ಸಾಹಿತ್ಯ ನೂರಾರು ವರುಷಗಳಿಂದ ಬೆಳೆದು ಬಂದ ಸಾಹಿತ್ಯ ಉಳಿದ ಭಾರತೀಯ ಸಾಹಿತ್ಯಗಳಂತೆ ಅದಕ್ಕೂ ತನ್ನದೇ ಆದ ಪ್ರಾಚೀನ ಪರಂಪರೆ, ವೈಶಿಷ್ಟ್ಯವುಂಟು. ಪಂಪನಿಂದ ಪ್ರಾರಂಭ ವಾದ ಜೈನ ಯುಗದಲ್ಲಿ ಪಂಡಿತರು ವಿವಿಧಕಲಾಮಂಡಿತರನ್ನು ತಲೆದೂಗಿ ಸುವ ಚಂಪೂ ಗ್ರಂಥಗಳ ರಚನೆಯಾಯಿತು ವೀರಶೈವ ಧರ್ಮ ಕ್ರಾಂತಿಯಿಂದ ಸಾಹಿತ್ಯದ ರೂಪದಲ್ಲಿಯೂ ಹೊಸತನ, ಸರಳತೆಗಳು ತಲೆದೋರಿ ಕನ್ನಡ ನುಡಿ ನೇರವಾಗಿ ಸಾಮಾನ್ಯರ ಹೃದಯದಲ್ಲೂ ಎಡೆಪಡೆಯಿತು ನಂತರ ಷಟ್ಪದಿಯ ಯುಗದಲ್ಲಿ ಮತೀಯ ಪುರಾಣಗಳ ಸುಗ್ಗಿಯಾಯಿತು. ಭಾರತ, ರಾಮಾಯಣ ಹಾಗು ವೀರಶೈವ ಪುರಾಣಗಳು ಒಂದರಮೇಲೊಂದು ರಚಿತವಾದವು. ಷಟ್ಪದಿಯ ಝೇಂಕಾರವು ಕವಿ, ಗಮಕಿ, ವಾಗ್ಮಿಗಳ ತಲೆದೂಗಿಸಿದಂತೆ ಪಾಮರರ ಮನವನ್ನೂ ಸೂರೆಗೊಂಡಿತು ಕುಮಾರ ವ್ಯಾಸನ 'ಕನ್ನಡ ಭಾರತ', ಚಾಮರಸನ ' ಪ್ರಭುಲಿಂಗ ಲೀಲೆ ', ಲಕ್ಷ್ಮೀಶನ 'ಜೈಮಿನಿ ಭಾರತ' ವಿರುಪಾಕ್ಷ ಪಂಡಿತನ ' ಚೆನ್ನಬಸವ ಪುರಾಣ ' ಗಳು ಷಟ್ಪದಿ ಪುರಾಣ ರತ್ನ ಗಳೆಂದು ಹೇಳಬಹುದು.

೨ **ದಾಸ ಸಾಹಿತ್ಯ**— ಕನ್ನಡ ನಾಡಿನ ವೈಭವದ ಕಾಲವಾದ ವಿಜಯನಗರ ಶ್ರೀ ಕೃಷ್ಣದೇವರಾಯನ ಆಳಿಕೆಯಲ್ಲಿ ಸಾಹಿತ್ಯಕ್ಕೆ ಮತ್ತೆ ಹೊಸ ಮುಖ ಮೂಡಿತು ಶ್ರೀ ನರಹರಿ ತೀರ್ಥಾದ್ಯರಿಂದುದಯವಾದ ದಾಸ ಸಾಹಿತ್ಯವು ಶ್ರೀ ವ್ಯಾಸರಾಯರ ಪ್ರಚಂಡ ಪ್ರೋತ್ಸಾಹ, ಅನುಗ್ರಹಗಳಿಂದ ಪುರಂದರ ದಾಸ, ಕನಕದಾಸಾದ್ಯರಿಂದ ಚಿಗುರೊಡೆದು ಕುಸುಮಿಸಿ ಪಕ್ವ ಫಲ ಗಳನ್ನಿತ್ತಿತು. ಅಜ್ಞಾನಾಂಧಕಾರದಲ್ಲಿ ಮುಳುಗಿದ ಸಾಮಾನ್ಯರ ಉದ್ಧಾರ ಕ್ಕಾಗಿ ಟೊಂಕಕಟ್ಟಿ ತಮ್ಮಕೀರ್ತನೆಗಳ ಮೂಲಕ ತತ್ತ್ವ ವಿಚಾರಗಳನ್ನು ಸುಲಭವಾಗಿ ವಿವರಿಸಿ ಸನ್ಮಾರ್ಗ ತೋರಿದರು ಸರಳ ಜನಬಳಕೆಯ ಪದಗ ಳಲ್ಲಿ ಜನರ ತಪ್ಪುತಡೆಗಳನ್ನು ಎತ್ತಿ ತೋರಿ ತಿದ್ದಿಕೊಳ್ಳುವ ದಾರಿ ಬಗೆಗಾಣಿಸಿ ದರು. ಅವರ ಪದಪದ್ಯಗಳು ಮನೆಮನೆಗೂ ಮುಟ್ಟಿ ನಾಡು ಪಾವನವಾ ಯಿತು ಸಾಹಿತ್ಯವನ್ನು ಸಂಗೀತಕ್ಕೆ ಸಮ್ಮೇಳಿಸಿದ ಶ್ರೇಯಸ್ಸು ದಾಸರಾಯ ರಿಗೇ ಸಲ್ಲಬೇಕು.

**೩. ದಾಸರು ಹಾಗೂ ಕಾವ್ಯಗಳು—** ದಾಸರೆಂದರೆ ಬಿಡಿ ಪದ್ಯಗಳನ್ನು ಬರೆವವರೆಂಬ ಕಲ್ಪನೆ ಸಾಮಾನ್ಯವಾಗಿದೆ ಆದರೆ ಅನೇಕ ದಾಸರುಗಳು ಕಾವ್ಯಗಳನ್ನು ಬರೆದುದು ತಿಳಿದುಬರುತ್ತದೆ ಕನಕದಾಸರ 'ಮೋಹನ ತರಂಗಣಿ', ಪ್ರಸನ್ನ ವೆಂಕಟದಾಸರ 'ದಶಮಸ್ಕಂದ ಭಾಗವತ' ದ ಕೆಲಭಾಗಗಳು ಕಾವ್ಯಗಳೆಂದೇ ಹೇಳಬೇಕಾಗುತ್ತದೆ. ಜಗನ್ನಾಥದಾಸರ 'ಹರಿ ಕಥಾಮೃತ ಸಾರ'ವು ಕಾವ್ಯವೆಂದು ಪ್ರಸಿದ್ಧಿ ಪಡಯದಿದ್ದರೂ, ಗಾತ್ರದಿಂದ ತಾತ್ವಿಕ ವಿವೇಚನೆಯಿಂದ ಸಾಹಿತ್ಯದಲ್ಲಿ ತನ್ನದೇ ಆದ ಸ್ಥಾನ ಪಡೆದಿದೆ. ಈ ಜಗನ್ನಾಥರಾಯರ ಸಮಕಾಲೀನರೂ, ಅವರಿಗಿಂತಲೂ ಸ್ವಲ್ಪ ಹಿರಿಯರೂ ಆಗಿರಬಹುದಾದ **ಶ್ರೀ ಮನೋಹರ ವಿಠಲರು** ಕೀರ್ತನೆ ಸುಳಾದಿಗಳ ಜತೆಯೇ ಕಾವ್ಯಗಳಲ್ಲಿಯೂ ತಮ್ಮ ಕೈಚಳಕ ಸಾಕಷ್ಟು ತೋರಿದುದು ಅವರ 'ಮನ್ಮಥ ವಿಲಾಸ' 'ಶ್ರೀ ಕೃಷ್ಣ ಜಯಂತಿ ಕಥಾ', 'ಶ್ರೀಮದನಂತನ ಕಥಾ' ಗಳಿಂದ ತಿಳಿದು ಬರುತ್ತದೆ. ರಸಾಲಂಕಾರಗಳಿಂದಲೂ, ಅಷ್ಟಾದಶ ವರ್ಣನೆಗಳಿಂದಲೂ, ಪದಲಾಲಿತ್ಯ ಪ್ರೌಢ ತಾತ್ವಿಕ ವಿವೇಚನೆಯಿಂದಲೂ, ಶ್ರೀ ಮನೋಹರ ವಿಠ್ಠಲರ 'ಶ್ರೀ ಅನಂತನ ಕಥಾ' ಕಾವ್ಯವು ರಸಿಕ ಜನ ಹೃದಯಾಹ್ಲಾದಕರವಾಗಿದೆ, ಭಕ್ತ ಜನ ಹೃತ್ಕುಮುದ ವಿಕಸನಕ್ಕೆ ಕಾರಣವಾಗಿದೆ

**೪ ಕವಿಯ ಮತ ಹಾಗೂ ಕಾಲ—** ಶ್ರೀ ಮನೋಹರ ವಿಠ್ಠಲರ ಬಗೆಗೆ ವಿಶೇಷ ಸಂಗತಿಗಳು ತಿಳಿಯುವದಿಲ್ಲವಾದರೂ, ಕವಿಯೇ ಶ್ರೀ ಮದನಂತ ಕಥೆಯ ಮೊದಲು ಸಂಧಿಯಲ್ಲಿ 'ಮಾನವಿ ದೇಶ ಕುಲಕರಣಿ. ... ಗೌತಮ ಗೋತ್ರೋದ್ಭವ ......ತಿರುಮಲರಾಯನಾತ್ಮಜಂ ನಾರಾಯಣಾಖ್ಯ' ನೆಂದು ಹೇಳಿಕೊಂಡಿದ್ದಾನೆ ತಾರತಮ್ಯಪೂರ್ವಕ ದೇವತಾ ಸ್ತೋತ್ರ ಪ್ರಾರಂಭಿಸಿ ಶ್ರೀ ಹರಿಯಿಂದ ಗುರುಗಳ ವರೆಗೆ ಬಂದು ತಮ್ಮ ತಂದೆ ತಿರುಮಲರಾಯನನ್ನು ಕುರಿತು, 'ರೂಪ ಗುಣ ಸುಜ್ಞಾನ ಧೃತಿ ಶಾಂತಿ ಕೀರ್ತಿ ಪ್ರತಾಪ, ಶಮದಮ ಪುತ್ರ ಸಂಪತ್ಕಳತ್ರದಿಂ ಈ ಪೊಡವಿಯೊಳ್ ಜಸಂ ಬಡೆದವನ ... ... ಆ ಪುಣ್ಯ ಪುರುಷಮಜ್ಜನಕ ತಿರ್ಮಲರಾಯನಾ ಪರಮಪಾವನಡಿದಾವರಿಯ ಧ್ಯಾನಂ ಸದಾ ಪೊರೆಯಲೆನ್ನ ಹೃದ್ವನಜದೊಳಗಿರ್ದೆನಗೆ ಸನ್ಮಂಗಳವ ನೀವುತ' ಎಂದು ಪರಮ ಭಕ್ತಿ ವಿಶ್ವಾಸಗಳಿಂದ ಸ್ತೋತ್ರ ಗೈದಿ

ದ್ದಾನೆ. 'ದಾತ ತಿರ್ವುಲ ರಾಯನಣುಗ ನಾರಾಯಣ' ತಾನೆಂದು ಹೇಳಿಕೊಂಡಿದ್ದಾನೆ

ಇನ್ನು ಕವಿಯ ಮತದ ವಿಚಾರದಲ್ಲಿ ವಿವಾದಕ್ಕೆ ಎಡೆಯೇ ಇಲ್ಲ. ವಾಯುದೇವರ ಮೂರನೆ ಅವತಾರವಾದ, ದ್ವೈತ ಮತ ಪ್ರತಿಷ್ಠಾಪನಾಚಾರ್ಯರಾದ ಶ್ರೀ ಮಧ್ವಾಚಾರ್ಯರನ್ನು 'ಭೇದ ಜ್ಞಾನನರುಹಿ ಸಿದ್ಧಾಂತ ಶಾಸ್ತ್ರದಿಂ ವಾದಿಗಳ ತರಿದು ಸುಜನರ ರಕ್ಷಿಸಿದ .. ಮಧ್ವಾಚಾರ್ಯ ಗುರುವರ್ಯ ಸತತೆನ್ನ ಸಲಹೋ ಜೀಯ' ಎಂದು ಅನನ್ಯ ಭಕ್ತಿ ವಿಶ್ವಾಸಗಳಿಂದ ಪ್ರಾರ್ಥಿಸಿದ್ದಾರೆ ಕಾವ್ಯದಲ್ಲಿ ಸಂದರ್ಭ ದೊರೆತಲ್ಲೆಲ್ಲ ಹರಿಸರ್ವೋತ್ತಮತ್ವವನ್ನು ಸಾರಿ ಪಂಚಭೇದಗಳನ್ನು ಉದ್ಘೋಷಿಸುತ್ತಾರೆ. ಆದ್ದರಿಂದ ಕವಿಯ ಮತ ದ್ವೈತ ಮತವೆಂದು ಬೇರೆ ಹೇಳಬೇಕಾಗಿಲ್ಲ.

ಕವಿಯ ಕಾಲ ವಿಚಾರದಲ್ಲಿ ಕಾವ್ಯದಲ್ಲಿ ನಿಶ್ಚಿತವಲ್ಲದಿದ್ದರೂ ಕೆಲ ಮಾತುಗಳು ತಿಳಿದು ಬರುತ್ತವೆ. ಮೊದಲ ಸಂಧಿಯಲ್ಲಿ ಗುರುಸ್ತುತಿ ಮಾಡುವಾಗ ವಿಜಯದಾಸರ ನಂತರ ಗೋಪಾಲದಾಸರ ಸ್ತುತಿಗೈದು ಕೂಡಲೆ ತಮ್ಮ ತಂದೆಯರನ್ನು ಪ್ರಾರ್ಥಿಸುತ್ತಾರೆ ಕಾರಣ ಇವರು ಗೋಪಾಲದಾಸರ ಶಿಷ್ಯರಾಗಿರುವ ಸಂಭವ ಹೆಚ್ಚಾಗಿದೆ. ಅಲ್ಲದೆ 'ಶ್ರೀ ಗೋಪಾಲ ವಿಠಲನ ಪ್ರೀತಿದಾಸರ ದಾಸ ಪಂಕಜವನನುದಿನ ಸ್ಮರಿಸುತೀ ಕಥೆ ಪೇಳುವೆ' ಎಂದು ಹೇಳಿದುದು ಮೇಲಿನ ಮಾತಿಗೆ ಪುಷ್ಟಿ ಕೊಡುತ್ತದೆ. ಗೋಪಾಲದಾಸರ ಶಿಷ್ಯರಲ್ಲಿ ಪ್ರಮುಖರಾದ ಜಗನ್ನಾಥದಾಸರು ಶ್ರೀ ಮನೋಹರ ವಿಠ್ಠಲರನ್ನಾಗಲಿ, ಶ್ರೀ ಮನೋಹರ ವಿಠ್ಠಲರು ಜಗನ್ನಾಥದಾಸರನ್ನಾಗಲಿ ತಮ್ಮ ಗ್ರಂಥಗಳಲ್ಲಿ ಹೊಗಳದಿರುವದು ಅವರ ಸಮಕಾಲೀನತ್ವವನ್ನೇ ಸೂಚಿಸುತ್ತದೆ ಜಗನ್ನಾಥದಾಸರ ಶಿಷ್ಯರಾದ ಶ್ರೀ ಪ್ರಾಣೇಶವಿಠ್ಠಲರು ಶ್ರೀ ಮನೋಹರ ವಿಠ್ಠಲರ 'ಮನ್ಮಥವಿಜಯ' ಹಾಗು 'ಶ್ರೀಕೃಷ್ಣಜಯಂತಿ ಕಥಾ' ಗಳನ್ನು ತಾವೇ ಸ್ವತಃ ಕೈಯಾರೆ ಪ್ರತಿಮಾಡಿಟ್ಟುಕೊಂಡದ್ದನ್ನು ವಿಚಾರಿಸಿದರೆ ತಮ್ಮ ಗುರುಗಳಾದ ಜಗನ್ನಾಥದಾಸರಲ್ಲಿಯಷ್ಟೇ ಭಕ್ತಿ, ವಿಶ್ವಾಸಗಳನ್ನು ಮನೋಹರವಿಠ್ಠಲರಲ್ಲಿಯೂ ಇಟ್ಟದ್ದುದು ತಿಳಿಯುತ್ತದೆ ಹಾಗು ಮನೋಹರ ವಿಠ್ಠಲರು ಜಗನ್ನಾಥ ದಾಸರ ಸಮಕಾಲೀನರೆಂಬುದನ್ನು ಸ್ಪಷ್ಟವಾಗಿಸುತ್ತದೆ. ಸ್ವತಃ ಮನೋಹರ ವಿಠ್ಠಲರು 'ಶ್ರೀ ಮದನಂತ ಕಥಾ' ಪ್ರಾರಂಭ ಸಂಧಿಯಲ್ಲಿ

'ವರಚಿತ್ರಭಾನು ಸಂವತ್ಸರದ ಕಾರ್ತಿಕ ಕರಿಯ ಪಕ್ಷದ ಚತುರ್ದಶಿ ಭಾನು ವಾರದಲ್ಲಿ ವರ ಕಾವ್ಯ ಪೇಳಿದಂ' ಎಂದು ಹೇಳಿರುವದನ್ನು ಗಣನೆಗೆ ತಂದು ಕೊಂಡರೆ ಕ್ರಿ. ಶ ೧೭೬೨ರ ಸುಮಾರಿಗೆ ಕಾವ್ಯವನ್ನು ಬರೆದಿರಬೇಕೆಂಬುದು ತಿಳಿಯುತ್ತದೆ. ಕಾರಣ ತಮ್ಮ ವಯಸ್ಸಿನ ಉತ್ತರಾರ್ಧದಲ್ಲಿ ಈ ಕಾವ್ಯ ಬರೆದಿರಬಹುದಾಗಿದೆ

**೫. ಕಾವ್ಯ ಕಥಾ-ವಿಮರ್ಶೆ**— ಶ್ರೀ ಭವಿಷೋತ್ತರ ಪುರಾಣೋಕ್ತ ಶ್ರೀ ಮದನಂತನ ಕಥಾ ಪ್ರಸಂಗವನ್ನು ಬಣ್ಣಿಸುವದೇ ಕವಿಯ ಮುಖ್ಯ ಉದ್ದೇಶವಾಗಿದೆ. ಸಂಸ್ಕೃತ ಮೂಲದಲ್ಲಿ ಒಟ್ಟು ೧೩೧ ಶ್ಲೋಕಗಳಿದ್ದು, ಮೊದಲಿನ ೧೪ಶ್ಲೋಕಗಳಲ್ಲಿ ರಾಜಸೂಯಯಾಗ, ದುರ್ಯೋಧನನ ಅಪಮಾನ ಶಕುನಿಯ ಸಲಹೆ, ದ್ಯೂತ, ಪಾಂಡವರ ಅರಣ್ಯವಾಸ ಇಷ್ಟೆಲ್ಲ ಕಥೆ ಸಂಕ್ಷೇಪ ವಾಗಿ ಪ್ರಸ್ತಾಪಿತವಾಗಿದೆ. ಮನೋಹರ ವಿಠ್ಠಲರು ತಮ್ಮ ಕಾವ್ಯದಲ್ಲಿ ಇದನ್ನೇ ಐದು ಸಂಧಿಗಳಲ್ಲಿ ವಿಸ್ತಾರವಾಗಿ ಹೇಳಿದ್ದಾರೆ ಕವಿಯು 'ಈಗನಂತನ ಕಥಾ ಸಂಗತಿ ನಿಮಿತ್ತದಿಂದ ಪಾಪ ಪರಿಹರಿಸುವ ಸಭಾಪರ್ವ ಪ್ರಸಂಗಗಳ..... ಚರಿತ್ರಮಂ ಕೇಳೆಂದು ಮುನಿ ನುಡಿದನು' ಎಂದು ಹೇಳಿ ಕಥೆಯನ್ನು ವಿಸ್ತಾರವಾಗಿಸಿದ್ದನ್ನು ಪ್ರಸ್ತಾಪಿಸಿದ್ದಾನೆ. ಈ ಸಭಾಪರ್ವ ಕಥೆಯಿಂದಾಗಿ ವಿವಿಧ ವರ್ಣನೆಗಳಿಗೂ ಶೃಂಗಾರಾದ್ಭುತ ವೀರ ಕರುಣಾರಸ ಗಳಿಗೂ ತುಂಬಾ ಎಡೆದೊರೆತಿದೆ. ಕವಿಯ ಹರಿಭಕ್ತಿಯ ಹೊನಲು ಕೃಷ್ಣ ಸ್ತುತಿ ರೂಪದಲ್ಲಿ ಸಂದರ್ಭೋಚಿತವಾಗಿ ಹೊರಹೊಮ್ಮಿದೆ.

ಶ್ರೀ ಅನಂತನ ಕಥಾಭಾಗ ಕೇವಲ ೭-೮ ಹಾಗು ೯ನೆಯ ಸಂಧಿಗಳಲ್ಲಿ ಬಿತ್ತರಿಸಲ್ಪಟ್ಟಿದೆ. ಕೊನೆಯ ಹತ್ತನೆಯ ಸಂಧಿಯಲ್ಲಿ ಕವಿಯು ಶೀಘ್ರಗತಿ ಯಿಂದ ಓಡುತ್ತಾನೆ. ಅರಣ್ಯಪರ್ವದಿಂದ ಮುಂದುವರೆದು ಮುಖ್ಯ ಪ್ರಸಂಗ ಗಳನ್ನೆಲ್ಲ ಬಿಡದೆ ಸಂಕ್ಷಿಪ್ತದಲ್ಲಿ ಹೇಳಿ ಧರ್ಮರಾಯನ ಪಟ್ಟಾಭಿಷೇಕದಲ್ಲಿ ಕಾವ್ಯ ಮುಗಿಸುತ್ತಾನೆ ಒಂದು ದೃಷ್ಟಿಯಿಂದ ವಿಚಾರಿಸಿದರೆ 'ಶ್ರೀ ಅನಂತನ ಕಥಾ' ಭಾರತದ ಕಥೆಯಲ್ಲಿಯೇ ಅರಳಿದ ಹೂ ಭಾರತದ ಕಥೆಗೆ ಶ್ರೀಕೃಷ್ಣನೇ ಸೂತ್ರಧಾರನು. ಅಂತಹ ಅವತಾರಿ ಪುರುಷನಾದ ಶ್ರೀಕೃಷ್ಣ ನಿಂದ ಕಥಿತವಾದ ಶ್ರೀಮದಂತನ ಕಥೆ ಕವಿಗೆ ಶ್ರೀಕೃಷ್ಣ ಚರಿತಾಮೃತವೇ ಆಗಿದೆ. ಅಂತೆಯೇ ಕವಿಯು ಕಾವ್ಯಕ್ಕೆ 'ಶ್ರೀಮದನಂತನ ಕಥಾ' ಎಂದು

ಕರೆದಿದ್ದಾನೆ ವಿಮರ್ಶಕರು ಇದನ್ನೇ ಸಂಕ್ಷಿಪ್ತ ಭಾರತವೆಂದು ಕರೆದರೂ ಯಾವ ದೋಷವಿಲ್ಲ.

ಕಾವ್ಯವನ್ನು ಓದುತ್ತ ಸಾಗಿದಂತೆ ಹಿಂದಣ ಕವಿಗಳಾದ ಕವಿ ಕುಮಾರ ವ್ಯಾಸ, ಲಕ್ಷ್ಮೀಶರ ಪ್ರಭಾವ ಕವಿಯ ಮೇಲೆ ಸಾಕಷ್ಟಾದುದು ತಿಳಿದು ಬರುತ್ತದೆ. ಪ್ರಾಸಾನುಪ್ರಾಸ, ಯಮಕ, ಪದಲಾಲಿತ್ಯ, ನಾದಮಾಧುರ್ಯಗಳಲ್ಲಿ ಲಕ್ಷ್ಮೀಶನ ಕಾವ್ಯವು ಪ್ರಭಾವ ಬೀರಿದ್ದರೆ ಕುಮಾರವ್ಯಾಸನ ಸಭಾಪರ್ವದ ಕಥೆಯು ಕವಿಯ ಕಣ್ಣೆದುರು ನಿಂತು, ಕುಮಾರವ್ಯಾಸನ ಪದಪ್ರಯೋಗ, ವಾಕ್ಯಗಳು ಕಾವ್ಯದಲ್ಲೆಲ್ಲ ಉದ್ದಕ್ಕೂ ಕಾಣಿಸಿಕೊಳ್ಳುವಂತಾಗಿದೆ ಕೆಲ ಸಲ ಕುಮಾರವ್ಯಾಸನ ಭಾಮಿನಿ ಷಟ್ಪದಿ ಪದ್ಯಗಳು ವಾರ್ಧಕದಲ್ಲಿ ಪರಿವರ್ತಿತವಾಗಿವೆ ಕುಮಾರವ್ಯಾಸನ 'ಕನ್ನಡ ಭಾರತ' ಮನೋಹರ ವಿಠ್ಠಲರ ಕಾಲಕ್ಕಾಗಲೇ ಎಷ್ಟೊಂದು ಜನಾದರಣೀಯ ಪ್ರಭಾವಿ ಕಾವ್ಯವಾಗಿತ್ತೆಂಬುದನ್ನು ಇದರಿಂದ ಊಹಿಸಬಹುದಾಗಿದೆ.

೬ **ಶ್ರೀಮದನಂತ ಕಥಾ**— ದ್ಯೂತದಲ್ಲಿ ಪಾಂಡವರು ಸೋತು ಪಣದಂತೆ ವನವಾಸಕ್ಕೆತೆರಳಿದ ವಾರ್ತೆಯನ್ನು ಶ್ರೀಕೃಷ್ಣನು ಕೇಳಿ, ಅವರನ್ನು ಸಂತೈಸಲು ಕಾಮ್ಯವನಕ್ಕೆ ಬರುವನು ಆಗ ಧರ್ಮರಾಯನಿಗೆ ಶ್ರೀ ಅನಂತನ ಕಥಾ ಮಹಿಮೆ ಹೇಳಿ ವ್ರತವನ್ನಾಚರಿಸಲು ಉಪದೇಶಿಸುವನು

ಸುಮಂತನೆಂಬ ಋಷಿಗೆ ಶೀಲೆಯೆಂಬ ಮಗಳು ಹುಟ್ಟಿದಳು. ಆದರೆ ಅಲ್ಪಾವಧಿಯಲ್ಲಿ ಸುಮಂತನಿಗೆ ಪತ್ನಿವಿಯೋಗ ದುಃಖವಾವರಿಸಿತು. ನಂತರ ದುಶ್ಶೀಲೆಯೆಂಬವಳನ್ನು ವಿವಾಹವಾದನು. ಅವಳಾದರೋ ಬಹು ಕಠೋರಳೂ ಕ್ರೂರಳೂ ಆಗಿದ್ದಳು. ಮಗಳು ಶೀಲೆಯು ಬಹು ಸದಾಚರಣಶೀಲಳು. ಕೌಂಡಿಣ್ಯನೆಂಬವನು ಕನ್ಯಾರ್ಥಿಯಾಗಿ ಸುಮಂತನೆಡೆಗೆ ಬರಲು ಶೀಲೆಯನ್ನು ಧಾರೆಯೆರೆದು ಕೊಟ್ಟನು ಕೌಂಡಿಣ್ಯನು ಶೀಲೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ತನ್ನ ಊರಿಗೆ ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಯಮುನಾ ನದಿಯ ದಂಡೆಯಲ್ಲಿ ಅನೇಕ ಸ್ತ್ರೀಯರು ಯಾವದೋ ವ್ರತವನ್ನಾಚರಿಸುವದನ್ನು ಕಂಡು, 'ಯಾವ ವ್ರತವನ್ನಾಚರಿಸುತ್ತಿರುವಿರಿ ?' ಎಂದು ಶೀಲೆಯು ವಿಚಾರಿಸಿದಳು. ಆ ಸುವಾಸಿನಿಯರು ಅನಂತನ ವ್ರತವಾಚರಿಸುತ್ತಿರುವದಾಗಿ ಹೇಳಿ ಅದನ್ನು ಮಾಡುವ ವಿಧಾನ ಹಾಗು ಮಹಿಮೆಗಳನ್ನು

ವಿಸ್ತಾರವಾಗಿ ಹೇಳಿದರು. ಶೀಲೆಯು ಕೂಡಲೆ ಬಹಳ ಭಕ್ತಿಯಿಂದ ತಾನೂ ಯಮುನೆಯಲ್ಲಿ ಸ್ನಾನಮಾಡಿ ಅನಂತನ ದಾರವನ್ನು ಕಟ್ಟಿಕೊಂಡು ವ್ರತವಾಚರಿಸಿದಳು. ನಂತರ ಕೌಂಡಿಣ್ಯ ಶೀಲೆಯರು ತಮ್ಮ ಊರಿಗೆ ಬರಲಾಗಿ ಶ್ರೀ ಅನಂತನ ಮಹಿಮೆಯಿಂದ ಕುಟೀರವು ಮಣಿ ಕನಕ ಖಚಿತ ದಿವ್ಯ ಅರಮನೆಯಾಗಿತ್ತು. ಸಕಲ ಸಂಪದ್ವೈಭವವು ಅವರಿಗಾಗಿ ಕಾದಿತ್ತು. ಇದೆಲ್ಲವೂ ಶ್ರೀ ಅನಂತನ ಮಹಿಮೆಯೆಂದು ತಿಳಿದು ಶೀಲೆಯು ಬಹು ಹರ್ಷಿತೆಯಾದಳು ಆದರೆ ಕೌಂಡಿಣ್ಯನು ಇದೆಲ್ಲ ತನ್ನ ತಪೋಬಲದ ಪ್ರಭಾವವೆಂದು ಗರ್ವಿತನಾದನು. ಅಷ್ಟಕ್ಕೆ ಬಿಡದೆ ದುರಭಿಮಾನದಿಂದ ಅನಂತನ ದಾರವನ್ನು ಅಗ್ನಿಯಲ್ಲಿ ಬೀಸಾಟಿದನು. ಕೆಲದಿವಸಗಳಲ್ಲಿಯೇ ಸಕಲ ವೈಭವ ಸಂಪದಗಳು ಅಳಿದು ದುಃಖ ದಾರಿದ್ರ್ಯಗಳು ಅಡರಿದವು. ಜನರೆಲ್ಲ ಅವನನ್ನು ತಿರಸ್ಕರಿಸಿ ದೂರಾದರು. ಆಗ ಕೌಂಡಿಣ್ಯನ ಕಣ್ಣುಗಳುತೆರೆದವು. ತಾನು ಶ್ರೀಅನಂತನನ್ನು ನಿಂದಿಸಿದುದೇ ಈ ಎಲ್ಲದುರವಸ್ಥೆಗೆ ಕಾರಣವೆಂದು ತಿಳಿದು ಪಶ್ಚಾತ್ತಾಪದಗ್ಧನಾಗಿ ಅನಂತನನ್ನು ಕಾಣುವೆನೆಂದು ಅರಣ್ಯಕ್ಕೆ ನಡೆದನು ಆ ಘೋರವಾದ ಅರಣ್ಯದಲ್ಲಿ ಎದುರು ಕಂಡ ಗಿಡಬಳ್ಳಿಗಳನ್ನು, ಪಶುಪಕ್ಷಿಗಳನ್ನು ಅನಂತನ ಬಗೆಗೆ ವಿಚಾರಿಸಿ ನಿರಾಶನಾದನು. ಬಹು ದುಃಖದಿಂದ ಮನದಲ್ಲಿ ಕಳವಳಗೊಳ್ಳುತ್ತ ಮುನ್ನಡೆದನು. ಆಗ ಶ್ರೀ ಮದನಂತನು ಕರುಣೆಗೊಂಡು ಭೂಸುರನಾಗಿ ಅವನಿಗೆ ಕಾಣಿಸಿಕೊಂಡು ಶ್ರೀ ಅನಂತನನ್ನು ತೋರಿಸುವದಾಗಿ ಒಂದು ಗುಹೆಗೆ ಕರೆದೊಯ್ದನು. ಅಲ್ಲಿ ದಿವ್ಯಲೋಕದಲ್ಲಿ ಮಂಡಿಸಿದ ಶ್ರೀಮದನಂತನ ರೂಪವನ್ನು ತೋರಿದನು ಕೌಂಡಿಣ್ಯನು ಭಕ್ತಿಪಾರವಶ್ಯದಿಂದ ಗದ್ಗದಿತ ಕಂಠಿತನಾಗಿ ಪರಿಪರಿಯಿಂದ ಶ್ರೀ ಅನಂತನನ್ನು ಹೊಗಳಲು ಪ್ರೀತನಾಗಿ ಅವನಿಗೆ ಮೂರು ವರಗಳನ್ನು ಇತ್ತನು ಮುಂದೆ ಕೌಂಡಿಣ್ಯನು ಬಹು ಭಕ್ತಿಯಿಂದ ಶ್ರೀಮದನಂತನ ವ್ರತವನ್ನಾಚರಿಸುತ್ತ ಈ ಲೋಕದಲ್ಲಿ ಸಕಲ ಸುಖಗಳನ್ನು ಭೋಗಿಸಿ ದೇವಲೋಕವನ್ನು ಸಾರಿ ಪುನರ್ವಸು ನಕ್ಷತ್ರ ಸ್ಥಾನವನ್ನು ಸೇರಿದನು.

ಈ ವಿಸ್ತಾರವಾದ ಕಥೆಯನ್ನು ಶ್ರೀ ಕೃಷ್ಣನು ಧರ್ಮರಾಯನಿಗೆ ಹೇಳಿ ವ್ರತವಾಚರಿಸಲುಪದೇಶಿದನು. ಧರ್ಮರಾಯನ ಬಹುಭಕ್ತಿಯಿಂದ ವ್ರತಗೈದನು. ಈ ವ್ರತ ಮಹಿಮೆಯಿಂದ ಅರ್ಜುನನು ಕಿರಾತರೂಪಿ ರುದ್ರನನ್ನು

ಗೆದ್ದನು, ಇಂದ್ರಲೋಕದಲ್ಲಿ ದೇವತೆಗಳಿಂದ ಪೂಜಿತನಾದನು. ಪಾಂಡವರು ಮುಂದೆ ತೀರ್ಥ ಯಾತ್ರೆ ಮಾಡುತ್ತ ಅಲೆಯುತ್ತಿರಲು ಕೌರವನು ತನ್ನ ಸಂಪದ್ವೈಭವವನ್ನು ಮೆರೆದು ಪಾಂಡವರನ್ನು ಅವಮಾನಿಸಲು ಕಾಮ್ಯವನಕ್ಕೆ ಬಂದು ಚಿತ್ರರಥ ಗಂಧರ್ವನಿಂದ ಬಂಧಿಸಲ್ಪಡಲು ಧರ್ಮರಾಯನ ಕಾರುಣ್ಯದಿಂದ ಬಿಡುಗಡೆಹೊಂದಿ ಅವಮಾನಿತನಾಗಿ ಹೋಗುವನು ಮುಂದೆ ಕವಿ ಕಥೆಯನ್ನು ವೇಗವಾಗಿ ಓಡಿಸುತ್ತ, ಅಜ್ಞಾತವಾಸ, ಕೀಚಕವಧೆ, ಉತ್ತರ ಗೋಗ್ರಹಣ, ಅರ್ಜುನ ವಿಜಯ, ಶ್ರೀ ಕೃಷ್ಣಸಂಧಾನ, ಕುರುಕ್ಷೇತ್ರ ಕಾಳಗ, ಪಾಂಡವ ವಿಜಯವಾಗಿ ಧರ್ಮರಾಯನ ಪಟ್ಟಾಭಿಷೇಕದಲ್ಲಿ ಕಾವ್ಯ ಕೊನೆಗಾಣಿಸುತ್ತಾನೆ. ಶ್ರೀಮದನಂತನ ವ್ರತವನ್ನು ಭಕ್ತಿಯಿಂದ ಆಚರಿಸಿದ ಧರ್ಮರಾಯನನ್ನು ಧರ್ಮ ಪಟ್ಟಕ್ಕೆ ಕೂಡಿಸುವಲ್ಲಿ ಕವಿಯು ಕಥಾ ವ್ರತ ಮಹಿಮೆ ತೋರುವ ಹಂಬಲ, ಧರ್ಮಕ್ಕೆ ವಿಜಯವೆಂಬ ಚಿರ ಸತ್ಯವನ್ನು ಸಾರುವ ಉತ್ಕಟತೆ ಕಾರಣವಾಗಿವೆ

೭ **ಕಾವ್ಯ ವಿಮರ್ಶೆ— ಕವಿ ಕಲ್ಪನಾ ವಿಲಾಸ—** ಮಹಾ ಕಾವ್ಯ ಲಕ್ಷಣಗಳಲ್ಲಿ ಬಹು ಮುಖ್ಯವಾದ ಅಷ್ಟಾದಶವರ್ಣನೆಗಳು ಸಂದರ್ಭೋಚಿತ ವಾಗಿ ಈ ಕಾವ್ಯದಲ್ಲಿ ಬಂದಿವೆ ಮೇರು ಪರ್ವತ ವರ್ಣನೆ ಮಾಡುವಾಗ 'ಸರ್ವಗೀರ್ವಾಣರಲ್ಲ ತಮ್ಮ ಯುವತಿಯರಿಗಾಭರಣ ನಿರ್ಮಿಸಲ್ ವರ ಹೇಮ ನಿವಹತಂಸೊಟ್ಟಿದರೋಮೇಣ್ ಧರಣಿ ತಳವೆಂಬ ನವಕೋಳದಲೊಗೆದ ಹೊಂದಾವರೆಯ ಮುಕುಟವೊ'ಎಂದು ಉತ್ಪ್ರೇಕ್ಷಿಸುತ್ತಾನೆ ಕವಿ. 'ಭೂಮಿ ಭಾಮಿನಿ ಶಿರದ ಭೂಷಣದ ಮಣಿ . . ....... ಸಕಳ ಸೌಭಾಗ್ಯದೊಡಲು' ಎಂದು ಇಂದ್ರಪ್ರಸ್ಥವನ್ನು ಬಣ್ಣಿಸಿದರೆ, 'ಎಲ್ಲ ನೋಡಿದಡೆ ಮಣಿ ಖಚಿತ ಪ್ರಸಾದಮಯ ಎಲ್ಲಿನೋಡಿದಡೆ ಗೋಪುರ ಚಿತ್ರ ಭುವನಮಯ ಎಲ್ಲಿ ನೋಡಿದಡ ಸೌಂದರ್ಯ ವನಿತೆಯರ ಮಯ ಸಕಳ ಸೌಭಾಗ್ಯಮಯ' ವೆಂದು ದ್ವಾರಕೆಯನ್ನು ವರ್ಣಿಸುತ್ತಾನೆ 'ಮುಗಿಲು ಮುಟ್ಟಿರ್ದ. ಪೊಂಗೋಟೆಯಿಂ ಪಾತಾಳ ಕೊಗೆದಗಳ ಖಾತದಿಂ ಮಣಿಖಚಿತದ್ವಾರದಿಂ' ಮೆರೆವ ಹಸ್ತಿನಾಪತಿಯ ಭವ್ಯತೆಯನ್ನು ತೋರಿ, 'ನೊಗಯಿಪ ಚಂದ್ರಕಾಂತದ ಶಿಲೆಗಳಿಂದ ನಿರ್ಮಿಸಿದ ಪ್ರಾಸಾದದಿಂದ ಝಗ ಝಗಿಪ ದೇವಾಲಯಾದಿ ಗೋಪುರದ ಪಂಕ್ತಿಗಳಿಂದ ಪೊಳೆವ ಧ್ವಜಮಕರ ತೋರಣದಿಂದ' ಶೋಭಾಯ

ಮಾನವಾದ ನಗರದ ಒಳನೋಟವನ್ನು ಸರಳಸುಂದರವಾಗಿ ನಿಲುಕಿಸುತ್ತಾನೆ 'ತುರಗಗಳ ಧೆರಿಯು ಕಾಂಚನದ ಸೌಧಂಗಳೇ ಗಿರಿಗಳು ಆ ಸತ್ತಿಗೆಯು ನಾಲ್ಗಳೇ ಫೇನಂಗಳು ಅರುಣಧವಿಯಾ ತೋರಣಂಗಳೇ ಪವಳ . ಪ್ರಾಕಾರ ವೆುರವ ತಡಿಯಾಗಲು ಆ ಕುಂಡಾಲಪುರ ಸಮುದ್ರಗಜಲ್ಪಿನಂತಿರ್ದುದು' ಎಂದು ಪಸ್ತಿನಾಪುರವನ್ನು ಸಮುದ್ರಕ್ಕೆ ಹೋಲಿಸುವಲ್ಲಿ, ಕವಿ ತನ್ನ ವರ್ಣನಾ ಕೌಶಲ್ಯ ಕಲ್ಪನಾ ಚಾತುರ್ಯಗಳನ್ನು ಬಗೆಗಾಣಿಸುತ್ತಾನೆ

'ಘುಳಿಘುಳಿಸಿ ಮುಳಿಗೇಳ್ವ ನೀರಾನೆ ಕರ್ಕಟಗಿ ಸಲಿಲದಿಂ ಜೀವಿಸುವ ಜಂತುಗಂಡೂಪದದಿ ಪೊಳೆವ .. ಘೂರ್ಮಿಸುವ' ವಾರಿಧಿಯನ್ನು ವರ್ಣಿಸುವಾಗ ಬಳಸಿದ 'ಘುಳಿಘುಳಿಸಿ .. .. ಘೂರ್ಮಿಸುವ' ಪದಗಳು ಧ್ವನಿಪೂರ್ಣವಾಗಿವೆ 'ತಿಮಿ ತಿಮಿಂಗಳ ಝುಷದ ಕುಲದಿಂದ ಬಲದಿಂದ .. ರಮಣೀಯ ಧೆರಗಳಾರ್ಭಟದಿಂದ ತಟದಿಂದ' ರಂಜಿಸುವ ಅಬ್ಧಿಯನ್ನು ಪ್ರಾಚೀನ ಕವಿಗಳ ಧಾಟಿಯಲ್ಲಿ ಚಿತ್ರಿಸಿದರೂ, 'ಘನಕುಲಂ ಬಿಪದೆ ಜಲಸೆಳೆಯಲೂಣೆ ಎನೆಗಿಲ್ಲ, ಮುನಿ ಈಂಟಿಬಿಟ್ಟದಕ್ಕೆ ಕೊರತೆ ತನಗಿನಿತಿಲ್ಲ, ಅನವರತ ತನ್ನ ಏಳ್ಗೆಯ ವೆಚ್ಚಲೀಸದಿಹ ವಡಬಾನಲನ ಬಾಧೆಗೆ ಕನಲಿ ನೈರಿಸದೆ ರಕ್ಷಿಪ ಕರ್ತನನ್ನರಸಲು ಅನಿತು ಲೋಕದಲಿ ಕಾಣಿಸದೆ, ದ್ವಾರಕೆಗೆ ತನುವನೆಡಗೆಡಹಿ ಕೃಷ್ಣಂಗೆ ಮೊರಯಿಡುವ ಪೊಲ್ ಉದಧಿ ರವಗೈಯುವಂತೆಸೆದುದು' ಎಂದು ಬಣ್ಣಿಸುವಲ್ಲಿ ಕವಿ ತನ್ನ ಪ್ರತಿಭೆಯ ಪರಾಕಾಷ್ಠತೆ ತೋರಿದ್ದಾನೆ ಇಲ್ಲಿ ಕವಿ ಬಳಸಿದ ಉತ್ಪ್ರೇಕ್ಷೆ ಮನೋಜ್ಞವಾಗಿದೆ

ಶ್ರೀ ಕೃಷ್ಣ ಭೀಮಾರ್ಜುನರು ಮಗಧ ದೇಶಕ್ಕೆ ಕಾಲಿಡುತ್ತಾರೆ ಕೆರೆಯ ಕಾಲುವೆಯ ತೆರಳಿಕೆಯ ವರಕಳವು ವಿರಚಿತ ರಸಾಲಿ ಪ್ರಪಾಶಾಲೆ ವಾಪೀಕೂಪಗಳಿಂದ ಪರಿಪಕ್ವ ಫಲಪುಷ್ಪ ವನದಿಂದ ಶೋಭಿಸುವ ಮಗಧ ದೇಶವನ್ನು ಕಂಡು ಬೆರಗಾಗುತ್ತಾರ ಕವಿಯ ವರ್ಣನಾ ಸಾಮರ್ಥ್ಯಕ್ಕೆ ರೆಕ್ಕೆಯೊದೆದಿದೆಯಿಲ್ಲಿ ವಿವರವಾಗಿ ಭೂವನ, ಪ್ರಪಾಶಾಲೆ, ಭೃಂಗ ಪಿಕಶುಕ, ಮಯೂರ ನಾನಾ ಪಕ್ಷಿಗಳ ವರ್ಣನ ಬಿತ್ತರಿಸಿದ್ದಾನೆ ಕವಿ. 'ಜಲದೊಳಗೆ ನಿಂದು ಬಹುಕಾಲದಿಂ ತಪದಿಂದ ಹಲವು ವ್ರತಂಗಳರ್ಚಿಸಿ ಬೇಡಿಕೊಂಡಡಂ ಪೊಳೆಪೊಳೆವುತಿಹ ಪಾಮರಿಯರ ಪೈಗಂಪು ಸಮನಿನಲಿಲ್ಲ ವೆಮಗೆನುತಾ ತಲೆವಾಗಿ ಲಜ್ಜೆಯಿಂ ಪಾಲ್ಗೆನೆಗಳಿಂ ಶಾಲಿಗಳ್ ಪೊಗಲಿಕ್ಕೆಲದಿ

ಪೊಂಬಣ್ಣದಿಂದ ಭೂ ಲಲನೆಯು ಹರಿದ್ರಲೇಪನಗೈದಳೆಂಬಂತೆ ರಾಜಿಸಿದವಾ ಧರೆಯೊಳು' ಎಂದು ಕಳಮಶ್ರೀಯ ಸೌಂದರ್ಯದಿಂದ ಸೊಗಯಿಸುವ ಧರೆಯ ವರ್ಣನೆ ಗೆಯ್ಯುವಲ್ಲಿ ತಲೆವಾಗಿನಿಂದ ಶಾಳಿಗಳ ಲಜ್ಜೆಯ ಕಾರಣ ವನ್ನು ಬಹು ಮನೋಜ್ಞವಾಗಿ ಹೇಳಿದ್ದಾನೆ. ಅಧ್ವದೋಳ್ ಕೇತಕಿಯ ಸುರಭಿದೋರಲ್ಕೆ ಭುಂಜಿಸ ಪೋಗೆ ನಯನದೋಳ್ಮಕರಂದ ಮುಸುಕೆ ಬೆನರಿ ಮರುಳಿದ್ದು ಸಾಗುವೆವೆ ಕಂಟಕಗಳೊರುತಿವೆ ಇರಲಂಧಕಾರಕ್ಷಿಗಡರಿ ದೆಶೆ ಗೆಡಸುತಿದೆ, ಹರಿನೆಂದು ಹರಿಗೆ ಮೊರೆಯಿಡುವವೋಲ್ ಝೇಂಕಾರಗೈತಿರ್ದವು ಷರವೆ' ಎಂದು ತುಂಬಿಗಳ ಬಣ್ಣನೆಯಲ್ಲಿಯೇ ಸಂಸಾರಿಗರ ತೊಳಲಾಟ ವನ್ನು ಬಹು ಸೂಚ್ಯವಾಗಿ ಚಿತ್ರಿಸಿ ಹರಿಗೆ ಮೊರೆಯಿಡುವದೊಂದೇ ಗತಿ ಯೆಂಬುದನ್ನು ಮೋಕ್ಷೇಚ್ಛುಗಳಿಗೆ ಸ್ಪಷ್ಟವಾಗಿ ತಿಳಿಸಿದ್ದಾನೆ ಕವಿ. ಶುಕಪಿಕ ಗಳು 'ಮುದದಿ ಮೆಚ್ಚಿ ಪರಿಮಳವ ಮೆಲುವಾನೆಯಿಂ ಪೋಗಬ್ಯಾಡಿ ಅಚ್ಚ ಸಂಪಿಗೆಯ ಬಳಿಗೆ, ಅಳಿವಿರಿ' ಎಂದು ಆಳಿಬಳಗಕ್ಕೆ ಎಚ್ಚರಿಸಿ ಪೇಳ್ವವಂತೆ. ಕವಿಯ ನೂತನ ಕಲ್ಪನಾ ಸೃಷ್ಟಿಯ ಕೌಶಲ್ಯವನ್ನು ಮಯೂರದ ಚೆಲ್ವಿಕೆಯ ಬಣ್ಣನೆಯಲ್ಲಿ ಕಾಣಬೇಕು 'ಎಲೆ ಮಯೂರವೆ ನಮ್ಮ ಬಿಡಬ್ಯಾಡವೆಂದೆಂದು ತಿಳಿಯಲಾಪರೆ ಸಹಸ್ರಾಕ್ಷನೆಂಬರು ನಿನಗೆ, ಚೆಲುವಂತನಾಗಿರ್ಪೆ ನೋಡು ನಮ್ಮನು ಬಿಡಲು ಶ್ರೀಹರಿಯ ಶಿರದೊಳಾಡಿ ಬಲು ಮಾನದಿಂದ ಅವನಿಪರ ಮೇಲೆ ಪೊಲಿದಾಡಿ ಕಳೆವಂತರಾಗಿಹೆವು, ನಿನ್ನಂಗ ಶೃಂಗಾರ ಕಳೆವುದು ಅನು ಚಿತವೆಂದು ಬುದ್ಧಿಯ ಪೇಳ್ವವೊಲು ನವಿಲ ಬೆಂಗೊಂಡು ಗರಿಗಳಿಹವು' ಇಲ್ಲಿ ನವಿಲುಗರಿಗಳ ಸೌಂದರ್ಯದ ಹಿರಿಮೆ ತಾನೇ ತಾನಾಗಿ ಮೂಡಿ ಬಂದಿದೆ.

'ಕ್ಷೀರಾಬ್ಧಿಯೆಂತಾದವೆಲ್ಲ ಶರಧಿಗಳ್, ನಿತ್ಯವಾರಣಗಳಾದವು ಐರಾ ವತದ ತೆರದಿ, ತ್ರಿಪುರಾರಿಯಂತಾದರೆಲ್ಲಾ ಸುರರ್, ಕೈಲಾಸದಂತಾದವು ಎಲ್ಲ ನಗಪು .. ವೀರ ಧರ್ಮಜನ ಸತ್ಕೀರ್ತಿ ಬಿಳಪಿನಲಿ' ಎಂದು ಧರ್ಮಜನ ಸತ್ಕೀರ್ತಿಯನ್ನು ಹೊಗಳುತ್ತಾನೆ. 'ರವಿಯಂತೆ ಕಾಂತಿಯಲಿ, ಶಶಿಯಂತೆ ಶಾಂತಿಯಲಿ, ಭವನಂತೆ ವೀರ್ಯದಲಿ, ಹರಿಯಂತೆ ವಿಭವದಲಿ, ಧ್ರುವನಂತೆ ಭಕ್ತಿಯಲಿ, ಸತ್ಯದಿ ಹರಿಶ್ಚಂದ್ರನಂತೆ' ಶೋಭಿಸುವ ಅವನಿಪಾಲಕ ಶಿರೋ ಮಣಿ ಧರ್ಮರಾಜಂಗೆ ಭುವನದೋಳ್ ಸರಿಯಿಲ್ಲವೆಂದು ಸುರನರ ಭುಜಗನಿ ವಹ ಕೊಂಡಾಡುತ್ತಿತ್ತಂತೆ. ಇಲ್ಲಿ ಬಳಸಿರುವ ಉಪಮಾನಗಳು ಔಚಿತ್ಯ

ಪೂರ್ಣವಾಗಿ ಧರ್ಮಜನ ಘನತೆಯನ್ನು ಇನ್ನೂ ಘನವಾಗಿಸುತ್ತವೆ ಧರ್ಮ ರಾಯನ ರಾಜ್ಯದಲ್ಲಿ 'ತಾಮಸರ್ ನಿಂದಕ ದುರಾಚಾರ ಕುಹಕಿಗಳ್ ಪಾಮ ರರ್ ಕಲ್ಮಷರ್ ಕರ್ಬುರರ್ ಕಪಟಿಗಳ್ ಪರಹಿಂಸರ್ ಅಪ್ರೌಢರ್ ಪ್ರೇಮ ಹೀನರ್ ಭಾಗ್ಯ ವರ್ಜಿತರ್ ಗರ್ವಿತರ್ ನೇಮಶೂನ್ಯರ್ ಜಾತಿ ಸಂಕರರ್ ನಿರ್ಗುಣರ್ ಕಾಮುಕರ್ ಓರ್ವರಂ ಕಾಣೆ' ಎಂದು ಕವಿ ಕಂಟಕರ ಬಳಗ ವನ್ನು ವಿಭಾಗಿಸಿ ಪರಿಪೂರ್ಣ ಪಟ್ಟಿಯನ್ನೇ ಕೊಟ್ಟಿರುವದು, ಅವನ ಜಾಣ್ಮೆ ಸೂಕ್ಷ್ಮ ನಿರೀಕ್ಷಣೆಗಳನ್ನೇ ತೋರುತ್ತದೆ.

'ಅಪರ ದಿಗ್ವನಿತೆಯ ಸುಬ್ಬೆತಲೆಯ ರಂಗು ಮೂಣಿಕದಂತೆ' ದಿನಪ ಪಶ್ಚಿಮಗಿರಿಯ ಮಸ್ತಕದೊಳಿಸೆಯುತ್ತಾನೆ. 'ಭಾಸ್ಕರನ ಮಂಡಲವ' ನುಂಗು ವೆನೆಂದು ಕತ್ತಲೆಯುಂಬತುಳ ರಾಕ್ಷಸಿ, ಕೋಪದ ಕಿಡಿಗಳುಗುಳಿದಳೊ ಮೇಣ್ ಗಗನ ತರುಣಿ ತಾಳ್ದಳೊ ಕೆಂಪು ಮಣಿಗಳಾಭರಣಮೆನೆ ತಾರೆಗಳು ಅಮಿತ ಪ್ರಕಾಶವಾಗಿ ಪರಿಶೋಭಿಸುತ್ತವೆ. ಅಲ್ಲಲ್ಲಿ ಮನೆಮನೆಯ ಸೊಡರ್ ವೆಳಗು ಪ್ರಜ್ವಲಿಸುತ ನೂರೆಲೆಯ ಬಾಂಧವನ ದೂತರೋಲ್ ತೋರುತ್ತವೆ. ಇಲ್ಲಿ ಕವಿ ಬಳಸಿದ ಉಪಮಾ ಉತ್ಪ್ರೇಕ್ಷಾಲಂಕಾರಗಳು ಕವಿಯ ಕಲ್ಪನಾ ವೈಭವವನ್ನು ಎತ್ತಿ ತೋರುತ್ತವೆ 'ತರುಣಿಯೊಳ್ ನೆರೆಯಬೇಕೆಂದು ಸುಮ್ಮಾನದಿಂಪರಿಶೋಭಿಸುವ ಪೂರ್ವದಿಕ್ ತರುಣಿ ಕುಂಕುಮದಿ ವರಮಜ್ಜನಂ ಗೈದಳೊ' ಎನೆ ರಂಜಿಸುವ ಮೂಡದೆಶೆಗೆಂಪು ನಮ್ಮನ್ನಷ್ಟು ಆಶ್ಚರಿಗೊಳಿಸದಿ ದ್ದರೂ, 'ಅಹಿರಾಜ ಭೂಭಾರಮಂ ತಾಳದೆ ಭರದಿಂದಲಿಳಿಯನುತ್ಸಳಿಸಿ ಪಾತಾಳದಿಂ ಪೊರಮಡಲ್ ಸಾಸಿರ ಫಣಾಳಿಗಳ್ ಮಣಿಗಣದ ಕಿರಣಂಗಳ್ ಆಗಸವ ತೀವಿತೆನೆ' ಮೂಡಗೆಂಪು ರಂಜಿಸಿತೆನ್ನುವಲ್ಲಿ ಕವಿಯ ನವ ನವೋನ್ಮೇ ಷಶಾಲಿನಿಯಾದ ಪ್ರತಿಭೆಯ ಅರಿವು ನಮಗಾಗುತ್ತದೆ. 'ಅತಿ ದುರಾತ್ಮಕ ಹರಿದ್ರೋಹಿ ಪಾಂಡವಶತ್ರು ಪತಿತ ಮೂರ್ಖಂ ಕಪಟಿ ದ್ವೇಷಿ ದುರ್ಯೋಧನನ ಹಿತವ ಬಯಸುತಲವನ ಕೂಡೆ ನೀನಿರುತಿರಲ್ ಮೃತಿತಪ್ಪದು; ಆದರಿಂದಲೀ ಕ್ಷಿತಿಯೊಳೀ ದುರ್ಜನನ ಸಂಗಮಂ ತ್ಯಜಿಸೆನುತ ಸುತನಾದ ಕರ್ಣಂಗೆ ಬುದ್ಧಿಯಂ ಪೇಳಲುನ್ನತ ಪೂರ್ವ ಶಿಖರಮಂ ಸಾರ್ದ ನೆಂಬಂತೆ ದಿನನಾಥನುಂ ಕಣ್ಗೆಸೆದನು' ಎಂದು ಸೂರ್ಯೋದಯವನ್ನು ವರ್ಣಿ ಸಿದ ಕವಿಯ ಮನೋಧರ್ಮವು ಮನನೀಯವಾಗಿದೆ. ಕುಮಾರವ್ಯಾಸ ಮಹಾ

ಭಾರತದಲ್ಲಿ ನೇಸರನು, ಕುಂತಿ ಕರ್ಣನನ್ನು ಸಂಧಿಸುವೆಡೆ ಬಂದು, 'ಅವಳ ಮಾತಿಗೆ ವಚನಬದ್ಧನಾಗ' ದಿರಲು ಉಪದೇಶಿಸುತ್ತಾನೆ. ಇಲ್ಲಿ ದಾಸ ರಾಯರ ನೇಸರನಾದರೋ 'ಯತೋಧರ್ಮಸ್ತತೋಜಯಃ 'ಎಂದು ಸನ್ಮಾರ್ಗ ತೋರಲು ಧಾವಿಸುತ್ತಾನೆಂಬ ಕಲ್ಪನೆ ಕವಿಯ ಮನೋಧರ್ಮವನ್ನು ನಿಚ್ಚಳ ವಾಗಿ ಪ್ರತಿಬಿಂಬಿಸುತ್ತದೆ.

ಮಯನ 'ಮಖಶಾಲೆ' ಯಂತೂ ಕವಿಯ ವರ್ಣನೆಯಿಂದ ಕಣ್ಣೆದುರು ಅಚ್ಚಳಿಯದೆ ನಿಲ್ಲುತ್ತದೆ ಆದರ ವೈಭವಕ್ಕೆ ಬೆರಗಾಗುತ್ತೇವೆ. 'ಮರಕತಂಗಳ ಜಗುಲಿ, ಪುಷ್ಯರಾಗದ ತೊಲೆಯು, ಮಿರುಪ ಗೋಮೇಧಿಕದ ನೆಲಕಟ್ಟು ಬೋದಿಗೆಯು, ಥರಥರಕೆ ಮುಂದುಲಿವ ಮುತ್ತುಗಳ ಸೂಸುಕದ ಮದನ ಕೈ, ನವರತ್ನದ ಕಿರುಣದಿಂಡೆಸೆವ ಸೋಪಾನ, ವಜ್ರದ ದ್ವಾರ, ಹರಿ ನೀಲಮಣಿ ಖಚಿತ ನೆಲ ಪೊನ್ನಪೊದಿಕೆ, ಸೌಂದರ ಪವಳ ನವಮುಕರ ತೋರಣದ ಚೆಲ್ವಿನಿಂ ರಂಜಿಸುವ, ಮಂಟಪವನ್ನು ಕಂಡಾಗ, 'ನಿನ್ನಸಂಗಮಂ ಬಿಟ್ಟು ಪೋದಾಕ್ಷಣದಿ ಬನ್ನಗೊಂಬುವಕಿಂತ ಚಿಂತೆ ಬ್ಯಾಡೈ . ಅಲಂಕಾರಮಂ ಮಾಡೆಬಹು ಶೋಭ ನಿನ್ನು ಸಂಶಯವ್ಯಾತಕೆಂದಂಬುಧಿಗೆ ಪೇಳಿ ರತ್ನಂಗಳೆಲ್ಲ ಧರ್ಮಜನ ಮಖ ಶಾಲೆಗೈತಂದು ಪ್ರಭೆಯೋಳ್ಮಿರೆದವು!' ಎಂದು ಹೇಳುವ ಕವಿ ಮಾತುಗಳ ಯಥಾರ್ಥತೆಯ ಅರಿವಾಗುತ್ತದೆ ಆ ಸಭೆಯಲ್ಲಿ ಒಪ್ಪುವ ಪುತ್ಥಳಿಗಳ ವಿವರ ವರ್ಣನೆ ಕವಿಯ ಕಲಾ ಪ್ರೌಢಿಮೆಯನ್ನು ಸಾರುತ್ತದೆ. 'ವೇಗ ಮುರಿವ, ಬಾಯ್ದೆರೆವ, ಮುಕುರಮಂ ತೋರಿ ನಸುನಗುವ, ತಿಲುಕವನಿಡುವ, ಕುಂತ ಳವ ಬಾಚಿ ಮುಡಿಬಿಗಿವ, ಕಜ್ಜಲ ಬರೆವ, ನರ್ತಿಸುವ, ಸ್ವರಗೈವ, ನುಡಿವ, ಸರಸವನಾಡುವ, ಬಗೆಬಗೆಯ ವೀಣಾದಿ ವಾದ್ಯಮಂ ಬಾಜಿಸುವ ಸೊಗಸಿನಿಂದ ಭಿನಯುವ ಪ್ರಕಟಿಸುವ, ಕರಗಳಂ ಮುಗಿವ, ಮಲಗುವ, ನಗುವ ಪುತ್ಥಳಿ ಗಳು ಒಪ್ಪಿದವು' ಎಂದು ಹೇಳುವಲ್ಲಿ ಕವಿಯ ಕಲಾದೃಷ್ಟಿ ಸೂಕ್ಷ್ಮ ನಿರೀಕ್ಷಣೆ ಗಳು ಕಂಡು ಬಾರದಿರವು. ಹೆಚ್ಚೇನು! 'ಕುಲಿನೇಂದು ಮೌಕ್ತಿಕದ ತಾರಾ ಗಣವ ಸಹಿತ ನಲಿಮಾಣಿಕದ ರವಿಯು ಪವಳಸ್ತ ರಾಗದಿಂದ ಇಳಿಗೀರ್ವಗೈ ತಂದು ನೀಲ ಕತ್ತಲೆಯೊಡನೆ ಧರ್ಮಜನ ಸಿರಿ ನೋಡಲು ಇಳಿದಿರ್ಪರು.

'ಕುಡಿವರಿವ ನಸು ಲಜ್ಜೆ ನಗೆ ಮೊಗ ದೊಳಂಕುರಿಸೆ, ಕುಡಿತೆಗಂಗಳ ನೋಟ ಹೊರಸೂಸೆ, ದೇಹ ಸೊಂಪಡರ್ದು ನುಂಪಿಡಿದು, ಮೆರೆವ ಯುವತಿ

ೀಲೆಯ ಪ್ರಾಯ, ‘ ವಿಟರಿಂಗಿತ್ತಿದ ಪ್ರಾಯ, ಪೊಲಿಪುತಿಹ ಕೇಶಗಳು ಮದನ
ರಯ ಪಾಶ ’ ಗಳಾದುದೇನಚ್ಚರಿ ! ಮಿರುಪ ಸೌದಾಮಿನಿಯೋ ಕನಕ
ತೆಯೋ ತನುವೋ . ಆ ಲೀಲೆ ಚೆಲ್ವಿಕೆ ವರ್ಣಿಸುವರಾರು ’ ಎನ್ನುತ್ತಾನೆ.
ಕವಿ ಯಮುನಾ ತೀರದಲ್ಲಿ ಸಣ್ಣ ನಡುವಿನ ಸೊಕ್ಕ ಜವ್ವನದ ಪೊಸಮಿಸುನಿ
ಕಣ್ಣಾದಂಗದ’ನೀರೆಯರು ಆರಡಿ ಸಮೂಹಗಳ ನ್ಯಾವರಿಸಿ ಮಸ್ತಕವನೋರಣಂ
ಗೈದು ಮುಡಿಯಿಡೆ, ಸಿಲ್ಲದಹಿ ಬಹಿರ ಸಾರುಪ್ಯಮಂ ಪಡೆವೆವು ಎಂದಥೋ
ಮುಖವಾಗಿ ತೊಡವಿಟ್ಟು ಹಿಂದುಲಿಯಲು, ಅಚ್ಚ ಸಂಪಿಗೆಯ ಕರದಿಂದೆ
ಕೋರಲ್ಕೆ ಭಯದಿಂದ ಪದಕೆರಗುವ್ಪೋಲ್ ಜೋಲ್ವ ಚಾರು ಕೇಶರಗಳು
ಂಜಿಸುತಿವೆ ’ ಎಂಬಲ್ಲಿ ಕವಿ ಕಲ್ಪನೆಗೆ ಕುಸುರೊಡೆದಿದೆ.

ಯಮುನಾ ತೀರದಲ್ಲಿ ‘ ಕೆಲರುದಕದೋಳ್ ಕ್ರೀಡೆಯಾಡುವರು ಸರಸ
ಂಕೆಲರು ಮೈದೊಳದು ದಿವ್ಯಾಂಬರವನುಡುತಿಹರು ಕೆಲರು ಕುಂಕುಮ ಗಂಧ
ಪರಿಮಳ ಹರಿದ್ರಾನುಲೇಪನಂ ಗೈವುತಿಹರು ’ ಎಂದು, ಯಾವ ಆಡಂಬರ
ಇಲ್ಲದೇ ಸರಳ ಸುಂದರವಾಗಿ ಚಿತ್ರಿಸಿದರೆ, ಇನ್ನೊಮ್ಮೆ ‘ ಕರಿಕುಂಭಾದಿ
ಸಾಮ್ಯದಿಂ ವರ್ಣಿಪರ್ ತರುಣಿಯ ಕುಚಗಳಂ, ಮಿಥ್ಯವಿದು ತಿಳಿಯಲು ಆ
ಸ್ಮರ ಮೂರು ಲೋಕವಂ ಜೈಸಿ ಭೇರಿದ್ವಯವ ತಲೆ ಕೆಳಗೆ ಮಾಡಿ ತನ್ನಾ
ಶರಮನೆಯ ಸೌಧಾಗ್ರದೋಳ್ ವಸನದಿಂ ಪೂದಿಸಿ ಮರೆಮಾಡುತಿಟ್ಟನೋ
ಟ ’ ಎಂದು ಬಹು ರಮಣೀಯವಾಗಿ ಅಬಲೆಯರ ಬಲ್ಮೊಲೆಗಳನ್ನು
ಬಣ್ಣಿಸುತ್ತಾನೆ

ಭೀಮ ಮಾಗಧರ ಗದಾಯುದ್ಧದ ಬಣ್ಣನೆ ಬಹು ಭಯಂಕರವಾಗಿ
ಚಿತ್ರಿತವಾಗಿದೆ “ ಸಿಡಿಲು ಚಲಕೆರಗಿ ಪೊಯ್ವಂತೆ, ಮಂದರನಗಂ ಕಡಲೊ
ಗೆ ಧಡಧಡ ಧಡಲ್ಪೊಪ್ಪು ಖಿಳಖಿಣಿ ಖಿಟಿಲಧಿಪ್ಪು ಧುಡುಧುಡುಧುಡಲ್
ಕೊಕ್ಕುಮೆನೆ ” ಸೂಳುವಾಳಿನಿಂ ಪೊಡೆವ ಗದೆಗಳ ಸಂಘಟ್ಟಣೆಯ ಅಬ್ಬರವು
ದೆ ನಡಗಿಸುತ್ತದೆ “ ಪೋಯ್ದು ಪ್ಪರಿಸುತಪ್ಪಳಿಸುವ ” ಗದೆಗಳ ನುಸೆದಾಟದ
ಘಮ್ಮ ಘಂಘಿಣಿಲು ಘಣವೆಂಬ ಘರ್ಘರ” ರವ ಜಗತ್ರಯವ ತೀವಿತೆನ್ನು
ತ್ತಾನೆ. ಇಲ್ಲಿ ಕವಿ ಬಳಿಸಿದ ಶಬ್ದಗಳು ಎಷ್ಟು ಧ್ವನಿಪೂರ್ಣವಾಗಿವೆಯೆಂಬುದು
ಪದ್ಯ ಬಾಯಿಂದ ಹೇಳಿದಾಗಲೆ ಅರ್ಥವಾಗುತ್ತದೆ. ಆ ಭೀಕರ ಯುದ್ಧದ
ರೌದ್ರತೆಯನ್ನು ಕವಿ “ ಭರಸಿಡಿಲು ಸಿಡಿಲಿನಪ್ಪಳಿಸಿದಂತೆ, ಆಯುಧದ ಬಿರಸಿನ

ಛಟಛಟತ್ಕಾರಕಂಬರಂ ತುಂಬಿಡಲು ಮಿರುಪ ಮಿಂಚಿನ ಮಳೆಯಕರೆವ ಬಲು 'ಗದೆಯು ಚಳುಬಳಿಕೆ " ಬಣ್ಣಿಸುತ್ತಾನೆ ಮಾಗಧನು ಭೀಮನ ಗದಾಘಾತ ದಿಂದ ಜರ್ಜರಿತನಾದ ಬಗೆಯನ್ನು ಕವಿ, 'ಪವನಾತ್ಮಜಂ ನಿಜ ಸಾಹಸದೊಳ ಮಮ ಕುರುಬ ಮಾಗಧನಂಗ-ಭಿತ್ತಿಯೊಳ್ ಚಿತ್ರಮಂ ಬರೆದನೋ, ಮೇಣ್ ವೀರ ಲಕ್ಷ್ಮೀ ನಖರೇಖೆಯಾವಳಿಗಳೋ ಪೇಳೆಂದೆನೆ, ಉರುಭಾಳ ಗಂಡ ಮಂಡಲಿ ಮುಡುಹು ಮುಂಗೈಗಳುರುಕಂಠ ಕಕ್ಷ ಮೊದಲಾದೆಡೆಗಳಲ್ಲಿ ಭೀಕರ ಗದಾಘಾತದಿಂ ಜರ್ಜರಿತನಾಗಿ ಖೂಳನಳವಳಿದನು' ಎಂದು ಹೇಳು ತ್ತಾನೆ. ' ಬಾಯೊಳುಕ್ಕಿದು ರುಧಿರ ಕಂಪಿಸುತ ಶತಕೋಟಿ ಘಾಯಕೆ ಮಹಾ ನಗಂ ಸಿಡಿದಿಳಿಗೆ ಬೀಳ್ವಂತೆ' ಬೀಳುತ್ತಾನೆ ಮಾಗಧನು. ಮತ್ತೆ ಚೇತರಿಸಿ ಕೊಂಡೆದ್ದು, 'ಘುಡಿಘುಡಿಸಿ ರೋಷದಿಂದಾಲಿಗಳ್ ಕೆಂಪಡರೆ ಕಿಡಿಕಿಡಿಗಳುರಿಯ ನುಗುಳುತ ಭ್ರುಕುಟಿ ಬದ್ಧದಿಂ ಫಡಫಡಲೆ ಭೀಮನಿಲ್ಲೆನುತ' ಬೊಬ್ಬಿರಿಯು ತ್ತಾನೆ. ' ಹೊಳದು ಚಿಗಿವರ್, ತನುವಡಗಿಪರ್ ಮುನೆಯನುಣದೊಳ್ ಪೊಗುವರವ್ವಳಿಸಿ ವಾಯ್ವರು, ಅವಧಾನವಿಡಿದು ಅಳವಿಯೊಳ್‌ನಿಲ್ವರು, ಅತಿ ಬಿರುಬಿನಿಂದೆರಗುವರ್ ' ಎಂದು ಅವರ ಯುದ್ಧದ ಗತಿಯನ್ನು ಚಿತ್ರಿಸು ತ್ತಾನೆ. ನಂತರ ಮಲ್ಲಯುದ್ಧ ಪ್ರಾರಂಭವಾಗುತ್ತದೆ. ' ಅಡಿಗಡಿಗೆ ತೊಡೆ ಹೊಯ್ದು ಪಾರುತ್ತ ಚೀರುತ್ತ ಘುಡುಘುಡಿಸಿ ಮುಷ್ಟಿಯಿಂದಿರಿವುತ್ತ ಸರಿವುತ್ತ ಬೀಳುತ್ತಲೇಳುತ್ತ ಭುಜದಿಂದ ಪೊಯ್ವುತ್ತ ನೊಯ್ವುತ್ತ ' ತಿವಿದಾಡುವರು.

**ಅಲಂಕಾರಗಳು:—**

ಕವಿಯು ಕಾವ್ಯದಲ್ಲೆಲ್ಲ ಉಪಮಾ ಉತ್ಪ್ರೇಕ್ಷೆ ಅರ್ಥಾಂತರನ್ಯಾಸಾಲಂ ಕಾರಗಳನ್ನು ಹೇರಳವಾಗಿ ಬಳಸಿದ್ದಾನೆ. ಉಪಮಾ ಉತ್ಪ್ರೇಕ್ಷೆಗಳಂತೂ ಕಾವ್ಯದಲ್ಲಿ ಹೆಜ್ಜೆ ಹೆಜ್ಜೆಗೆ ಕಾಣಬರುತ್ತವೆ. ಲಕ್ಷ್ಮೀಶನು ಉಪಮಾಲೋಲ, ಕುಮಾರವ್ಯಾಸ ರೂಪಕ ಶಿಖಾಮಣಿಯಾದರೆ, ಇಲ್ಲಿ ಕವಿಉತ್ಪ್ರೇಕ್ಷೆಯ ಉಯ್ಯಾ ಲೆಯನ್ನು ಬಹು ನಿರಾಯಾಸವಾಗಿ ತೂಗಿ ರಸಿಕರನ್ನು ತಲೆದೂಗಿಸುತ್ತಾನೆಂಬ ಮಾತು ಈ ಮೊದಲೇ ವಿವರಿಸಿದ ವರ್ಣನೆಗಳಿಂದ ಓದುಗರಿಗೆ ಅರಿವಾಗದಿರದು. ಪ್ರಾಸಾನುಪ್ರಾಸ ಯಮಕಗಳಂತೂ ಕವಿಗೆ ಕರತಲಾಮಲಕ ಕುಮಾರ ವ್ಯಾಸ ಲಕ್ಷ್ಮೀಶರ ಕಾವ್ಯಗರಡಿಯಲ್ಲಿ ಸಾಧನೆ ಮಾಡಿ ಸ್ಫೂರ್ತಿಗೊಂಡ ಕವಿ ಲೀಲಾಜಾಲವಾಗಿ ಪದಗಳನ್ನು ಬಳಸುತ್ತಾನೆ. ' ಪೊಳೆವ ಮಚ್ಚೋದರದಿ

ಪೊರವುಟ್ಟ ಕಾಮನಂ ಕಂಡು ಹರುಷಿಸಿದ ರತಿಯಂತೆ' ನಲಿಯುವ ಇಂದ್ರ ಸೇನನು 'ಅಂಧನಕ್ಷಿಯು ಪಡೆದವೊಲು ಮೌನೀಶ ಸುರಸಿಂಧುವಂ ಕಂಡಂತೆ ಬಂಜೆಯಾಗಿರ್ದ ಸತಿ ನಂದನನ ಪೆತ್ತಂತೆ' ಹರುಷ ತಾಳುತ್ತಾನೆ ಸಿರಿಲೋಲ ನನ್ನು ಕಾಣುವೆನೆಂಬ ಉಬ್ಬಿನಿಂದ ಇಲ್ಲಿಬಳಸಿದ ಉಪಮಾನಗಳು ಎಷ್ಟೊಂದು ಅರ್ಥಗರ್ಭಿತವಾಗಿವೆ, ಮಾರ್ಮಿಕವಾಗಿವೆ ಎಂಬುದನ್ನು ವಿವರಿಸಿ ಹೇಳಬೇ ಕಾಗಿಲ್ಲ 'ಕಡೆಗಾಲಪೂಳು ಮೃಡನ ಪಣೆಗಣ್ಣಿನಿಂ ಸುರಿವ ಕಿಡಿಗಳಂತು ಭಯ ವೀರರ ಗದಾ ದಂಡದಿಂ ಸಿಡಿವ ಸ್ಫುಲಿಂಗಗಳ್ ತ್ರಿಪುರದಹನಂಗಾರ ಶೇಷದೋಲ್' ಕಣ್ಣೆಸೆದವು ಎಂಬುದು ಎಷ್ಟೊಂದು ರುದ್ರ ರಮಣೀಯ! 'ಚೂತಪಲ್ಲವದಂತೆ, ಕೆಂಪಬ್ಜದಂತೆ, ತಪ್ತಜಾತರೂಪ ಪ್ರತಿಮೆಯಂತೆ, ಅಶೋಕಾಜಾತ ಮಹೀಜಾತ ತಳಿರಂತೆ, ಎಸೆವ ವಿದ್ರುಮದ ಲತೆಯಂತೆ ದಾಸವಣದ ಅರಳಿನಂತೆ, ಪೋತಕಿಂಶುಕದಂತೆ, ಪೊಳೆವರುಣಮಣಿ ರುಚೀ ವ್ರಾತದಿಂ ಸಮೆದಂತೆ' ಮೃಗಪಾಘಾತದಿಂ ರಕ್ತಮಯವಾದ ಚಿತ್ರದಲ್ಲಿ ಬಳಸುವ ಉಪಮಾನಗಳಲ್ಲಿಯ ವೈವಿಧ್ಯ ವೈಶಿಷ್ಟ್ಯಗಳು ಕವಿಯ ಬಹು ಮುಖ ಸೂಕ್ಷ್ಮ ಪ್ರಜ್ಞೆಯನ್ನು ಬಗೆಗಾಣಿಸುತ್ತವೆ ಕವಿಯ ದೃಷ್ಟಿ ಎಷ್ಟು ವ್ಯಾಪಕವಾಗಿದೆ ಯೆಂಬುದರ ಅನುಭವ ಇಲ್ಲಿ ಬರದೇ ಹೋಗದು ಮಯ ಮಂಟಪದಲ್ಲಿ ಮುಖ ಭಂಗಿತನಾಗಿ ಮರಳಿ ಬಂದ ದುರ್ಯೋಧನನು ಅಂತಃ ಪುರವನ್ನು ಹೊಗುವಾಗ, 'ಪುತ್ತು ಪುಗುವಹಿಪನಂತೆ' ಎಂದು ಹೇಳುತ್ತಾನೆ. 'ಮದವಳಿದ ಗಜದಂತೆ, ಕೈ ಕಾಲ್ಗಳುಡಿದ ಸಿಂಹದ ಶಿಸುವಿನಂತೆ, ಪಲ್ಮುರಿದ ಫಣಿಯಂತೆ, **ಸರದು ದಕವನಗಲ್ದ ಝುಷವಂತೆ,.... .... ... ಮದನನಂಬಿನ ತಾಪಕೊಳಗಾದ ಸತಿಯಂತೆ, ಸುವತಿ ಪಾಧರಿ ಯಾದ ಮನುಜನಂತೆ'** ಚಿಂತಿಸುವ ದುರ್ಯೋಧನನ ಮನದಂತರಾಳದ ಚಿಂತೆಯನ್ನು ಇನ್ನೂ ಅಂದವಾಗಿ ಉಚಿತವಾಗಿ ಏನು ಚಿತ್ರಿಸಬಹುದು! ಒಂದೊಂದು ಉಪಮಾನವೂ ಚಿಂತೆಯ ಒಂದೊಂದು ಮುಖವನ್ನು ತೋರು ತ್ತದೆ. ಕೌರವನಿಗಾದ ಅನುತಾಪ–ಉದ್ವೇಗ, ದುಃಖ ದುಮ್ಮಾನಗಳು ಅರ್ಥ ವತ್ತಾಗಿ ಚಿತ್ರಿತವಾಗಿವೆ, ಧೃತರಾಷ್ಟ್ರನು ದ್ಯೂತಕ್ಕಾಗಿ ಪಾಂಡವರ ಕರೆ ಯಲು ವಿದುರನನ್ನು ಕಳುಹುವೆನೆನ್ನಲು ಕೌರವನು, 'ಖೂಳದಲಿ ಸತ್ಕಥಾ ಧರ್ಮಪ್ರಸಂಗ, ಕಿವಿಗೇಳದವನಲಿ ಮಂತ್ರಬೀಜ ಸಂಬೋಧನ, ಆಲಿ ಇಲ್ಲ

ದವಂಗೆ ರೂಪಗಳ ಚೆಲ್ವಿಕೆಯು, ಕ್ಲೀಬಂಗೆ ಸ್ಮರಶಾಸ್ತ್ರ, ನಾಲಿಗಿಲ್ಲದವನ ಕೂಡೆ ಆಲೋಚನೆಯು .. ಪ್ರಯೋಜನ ಸಿಗಲೀವನೇ ತಾತ ' ಎನ್ನುತ್ತಾನೆ. ವಿದುರನನ್ನು ಕಳುಹುವದು ಅಪ್ರಯೋಜಕವೆಂಬುದನ್ನು ಎಷ್ಟು ಮಾರ್ಮಿಕ ವಾಗಿ ಕವಿ ಹೇಳಿದ್ದಾನೆ ಕೌರವನಿಂದ ಇಲ್ಲಿ ಒಡಮೂಡಿದ ಕವಿಯ ಲೋಕಾನುಭವ ಅಸದಳ ವಿದುರನನ್ನು ಕರೆಯಿಸಿ 'ಕರೆದು ತಾ ಪ್ಪೋಗೆಂದು' ಹೇಳುವನು ಆಗ ಕವಿ, 'ಗರಳಮಯ ಸರಸಿಯೊಳ್ಪರಿವ ತಿಳಿ ನೀರೊ, ರುಚಿಭರಿತ ಪಾದರಿಯ ಲಾವಣ್ಯವೋ ಭಯಂಕರದುಗ್ರ ಪೈಶಾಚಿಗಳ ಮನೆಯ ನಿಧಿಯೊ, ನಲೆಭಸ್ಮ ಮುಚ್ಚಿರ್ದ ಶಿಖಿಯೋ, ಕೊರಳಗೊಯ್ಕರ ವಿನಯನುಡಿಗಳೋ ' ಎಂದು, ಕೃತ್ರಿಮವನೊಳಗಿಟ್ಟು ಪೊರಗೆ ಸಜ್ಜನರಂತೆ ನಸುನಗುತ ನುಡಿದ ಅಂಧನ ಮಾತುಗಳನ್ನು ಬಣ್ಣಿಸುತ್ತಾನೆ

ಕವಿಯ ಉತ್ಪ್ರೇಕ್ಷೆಗಳಲ್ಲಿಯ ಕಲ್ಪನೆಯ ಔನ್ನತ್ಯವನ್ನು ದಿಗ್ದರ್ಶಿಸಲು ಮತ್ತೆ ಉದಾಹರಣೆಗಳ ಆವಶ್ಯಕತೆ ಇಲ್ಲ ಈ ಮೊದಲೆ ಕವಿ ಕಲ್ಪನಾವಿಲಾಸ ದಲ್ಲಿ ಸಾಕಷ್ಟು ವಿವೇಚಿಸಿದೆ. ಕವಿ ಬಳಸುವ ಅರ್ಥಾಂತರನ್ಯಾಸಾಲಂಕಾರ ಕೂಡ ಬಹು ಸಮಯೋಚಿತವೂ ಅರ್ಥಗರ್ಭಿತವೂ ಆಗಿ ಕಾವ್ಯಕ್ಕೆ ಕಳೆ ತರು ತ್ತದೆ ಭಾನುವಿಗೆ ಅರ್ಘ್ಯಾದಿಗಳ ನಾಧಿಸದೆ ಸ್ನಾನಾದಿ ಕರ್ಮ ಬಿಟ್ಟು ಪಾಂಡವರ ಶ್ರೇಯೋಹರಣ ದುರಾಲೋಚನೆಯಲ್ಲಿರುವ ಕೌರವನ ಕಂಡು ಕವಿ ' ದುರ್ಜನರ್ ಸಾಧುಗಳ ಸೌಭಾಗ್ಯದೇಳ್ಗೆಯಂ ಕಂಡು ಸೈರಿಸುವರೇ ಭೂತಳದೊಳು ' ಎಂದು ಹೇಳುತ್ತಾನೆ ದ್ವಾರಕೆಯಲ್ಲಿ ಸತ್ಯಭಾಮೆಯೊಡನೆ ಲೆತ್ತವಾಡುತ್ತಿರುವ ಶ್ರೀಕೃಷ್ಣನು ದ್ರೌಪದಿಯ ವಸ್ತ್ರವು ' ಅಕ್ಷಯವಾಗಲಿನುತ ಕರವೆತ್ತಲು', ' ಶ್ರೀಕೃಷ್ಣನುತ್ತಮರ ಹಾನಿಯಂ ನೋಳ್ಪನೇ ' ಎಂಪು ಕೇಳುತ್ತಾನೆ ಕಪಟ ಖಳರಿವರೆಂದು ತಿಳಿತಿಳಿದು ಮರುಳಾಗಿ ನೃಪಧರ್ಮ ಜೂಜಾಡಲ್ಕೆ ಮನ ಮಾಡಿದಾಗ, ' ವಿಪರೀತ ಬುದ್ಧಿಯು ವಿನಾಶಕಾಲಕ್ಕೆ ' ಎಂದು ಸಿಟ್ಟುಸಿರಿಡುತ್ತಾನೆ. ದ್ಯೂತದಲ್ಲಿ ಸರ್ವಸ್ವವನ್ನು ಸೋತು ವನ ವಾಸಕ್ಕೆ ತೆರಳಿದ ಪಾಂಡವರ ಬಗೆಯನ್ನು ಕವಿ, ' ಕರಿ ಕಪೋಲದಿ ಸೋರ್ವ ಮದದ ಸುರಭಿಯನುಂಡು ಪರಿಪರಿಯ ಪುಷ್ಪಗಳ ಖಂಡನಾಸ್ವಾದಿಸುತ ....... ಮಕರಂದಮಂ ಸವಿದು ಬದುಕುವರ್ಗೀಸಮಯ ನಿರಸ ಬೊಬ್ಬುಲಿ ಕುಸುಮ ಅರ್ಕ, ಧತ್ತೂರಿ ಪುಷ್ಪಿಗೆರಗಿ ಕಾಲಂ ಕಳೆದ ತೆರನಾಯ್ತು ' ಎಂದು ಮರುಗಿ

'ಘಣಿಯಲ್ಲಿ ಸರಸಿಜೋದ್ಭವ ಬರದುದನನುಭವಿಸಬೇಕೆಂದು ಭೃಂಗಗಳ್ ಮೊರೆವುತಿರ್ದವು " ಎಂದು ಚಿತ್ರಿಸುತ್ತಾನೆ. ಭೃಂಗಗಳ ಮೊರೆಯಲ್ಲಿ ಕೇಳುವ "ವಿಧಿಲಿಖಿತ ಅಳಿಸಲಸದಳವು" ಎಂಬ ಲೋಕಾನುಭವವನ್ನೇ ಪಾಂಡವರ ವನವಾಸಕ್ಕೂ ಎಷ್ಟು ಧ್ವನಿ ಪೂರ್ಣವಾಗಿ ಅನ್ವಯಿಸಿದ್ದಾನೆಂಬುದನ್ನು ವಿಮರ್ಶಕರು ತಿಳಿಯಬಲ್ಲರು ಇದೇ ಮಾತನ್ನು ಇನ್ನೊಂದು ಪ್ರಸಂಗದಲ್ಲಿಯೂ ಕವಿ ಹೇಳುತ್ತಾನೆ ಕವಿ ಕಲ್ಪನಾ ಸೃಷ್ಟಿಯ ಅದ್ಭುತಕ್ಕೆ, ರಸಿಕತೆಗೆ ಮೂಕ ವಿಸ್ಮಿತರಾಗಿ ನಿಲ್ಲುತ್ತೇವೆ "ಕರಿ ಕುಂಭಗಳ್ ಬಿಡದ ಮಾವತಿಗನಂಕುಶ ದಲಿರಿಸಿಕೊಳಲಾರದಲೆ ಭಯದಿಂದ ಮೂಲೋಕವರಸಿ ರಮ್ಯ ಸ್ಥಳಗಳಂ ಕಾಣದೆ ಅಂಗನೆಯರ ಉರಜಂಗಳಾಗಿ ಜನಿಸೆ, **ನಿರುತಲ್ಲಿ ವಲ್ಲಭರ ನಖಗಳೆಂಬಂಕುಶದ ಬಿರುಗಾಳಿ**ಯಿಂ ನೊಯ್ಯುತಿರ್ದವೈ" ಎಂದು ಚಿತ್ರಿಸಿ ಕೊನೆಗೆ "ಘಣಿಯಲ್ಲಿ ಸರಸಿಜೋದ್ಭವ ಬರೆದ ಲಿಖಿ ತಪ್ಪದೆಂಬಂತೆ ಕಣ್ಗೆಸೆದವಾ ಮೊಲೆಗಳು" ಎಂದು ಹೇಳುತ್ತಾನೆ ಕವಿ ವರ್ಣಿಸುತ್ತಿರುವದು ಯಮುನಾ ಜಲದಲ್ಲಿ ಕ್ರೀಡಿಸುತ್ತಿರುವ ಯುವತಿಯರ ತಿಣ್ಣ ಮೊಲೆಗಳನ್ನು. ಇಲ್ಲಿ ತೋರುವ ಕವಿಯ ಜಾಣ್ಮೆ ಪ್ರತಿಭೆಗಳು ಅನ್ಯಾದೃಶವಾಗಿವೆ ಅನಂತ ಕಥೆಯಲ್ಲಿ ಬರುವ ವಿಪಿನವರ್ಣನೆ, ಕೊಳದ ವರ್ಣನೆಗಳಲ್ಲಿ ಶ್ಲೇಷಾಲಂಕಾರದ ಮೂಲಕ ವಿಷ್ಣುವಿಗೆ, ಅಪ್ಸರೆಗೆ ಹೋಲಿಸುವ ಬಗೆ ಕವಿಯ ಪ್ರೌಢ ಪಾಂಡಿತ್ಯವನ್ನು ಎತ್ತಿತೋರುತ್ತದೆ

**ಕವಿಯ ಲೋಕಾನುಭವ**— ಉಳಿದ ದಾಸರಾಯರಂತೆ ಮಾನವ ಸಹಜವಾದ ಸ್ವಭಾವ ದೌರ್ಬಲ್ಯಗಳನ್ನು ಎತ್ತಿ ತೋರಿಸಿ, ಉದ್ಧಾರದ ಮಾರ್ಗ ವನ್ನು ಕವಿ ತೋರುತ್ತಾನೆ ದುಶ್ಶೀಲೆಯ ಪಾತ್ರವನ್ನು ಕವಿ ಚಿತ್ರಿಸುವ ಬಗೆ ನೋಡಿ. 'ತನ್ನ ತವರ್ಮನೆ ಬಂಧು ಬಳಗ ಬರೆ, ಮಂದಿರದಿ ಮನ್ನಿಸುವಳು ಆದರದಿ, ಪತಿಯ ತನು ಸಂಬಂಧಿಯನು ಕಂಡರೆ ಮಾತನಾಡಿಸಳ್ ಜರಿವಳು ಅತಿ ಕಟು ವಚನದಿಂ ನುಡಿವಳು, ಕುನ್ನಿಯಂತೊದರುವಳು ........ ನಾರಿಯವಳಲ್ಲ ಹೆಮ್ಮಾರಿ ಕ್ರೂರಿ ಕರ್ಣಕಠೋರಿ' ಎಂದು ಹೇಳಿರುತ್ತಾನೆ. ಇಂದಿಗೂ ನಾವು ಸಮಾಜದಲ್ಲಿ ಸ್ತ್ರೀಯ ಈ ಸ್ವರೂಪವನ್ನು ನಿತ್ಯ ಕಾಣುತ್ತೇವೆ. ಸ್ತ್ರೀ ಸ್ವಭಾವ ದೇಶ ಕಾಲಾತೀತವೆಂಬುದನ್ನು ಕವಿ ಸೂಕ್ಷ್ಮವಾಗಿ ದುಶ್ಶೀಲೆಯ ಸ್ವಭಾವದಲ್ಲಿ ಚಿತ್ರಿಸಿದ್ದಾನೆ. ಮಗಳು ಶೀಲೆಯನ್ನು ವಿವಾಹ ಮಾಡಿಕೊಟ್ಟು

ಕಳಿಸುವಾಗ ತನ್ನ ಹೆಂಡತಿ ದುಸ್ಸೀಲೆಗೆ ' ಅಥ್ಸದ ಪದಾರ್ಥದನುಕೂಲವಂ ತರಳೆಗೋಸುಗ ಮಾಡಿಕೊಡುವದೆನೆ ' ಆಕ್ರೋಶದಿಂದ ' ಭ್ರುಕುಟಿಬದ್ಧಳಾಗಿ ಬಾಗಿಲನಿಕ್ಕಿಕೊಂಡು ಘರ್ಜಿಸುತ, ಎಲ್ಲಿದೆ ಪದಾರ್ಥ ನೀ ನೋಡಿಕೋ ಬೇಕಾದಡೆಲ್ಲಿನ್ನು ಪೋಗೆನುತ ' ಚಂಡಿಯಂತೆ ಕೂಗುತ್ತಾಳೆ ಈ ಮಲತಾಯಿಯ ಮನಸ್ಸಿನ ಕಠೋರತೆ ಇಂದಿಗೂ ಯುಗ ಯುಗಗಳುರುಳಿದರೂ ಮೂದು ಮೃದುಗೊಂಡಿಲ್ಲ ಶ್ರೀ ಮದನಂತನ ಮಹಿಮೆಯಿಂದ ಕೌಂಡಿಣ್ಯನು ಸಿರಿಸಂಪದಗಳನ್ನು ಹೊಂದಲು, ' ಉನ್ನತೈಶ್ವರ್ಯ ಮದದಿಂದಲುಬ್ಬೇರಿ ವರ ಕನ್ಯೈದಲಾಕ್ಷಿಯೊಡನತಿ ವಿ ಷ ಯ ಭೋ ೧ ಗ ಸಂಪನ್ನನಾಗಿರ್ದನನವರತ ರಮಿಸುತಲಿ ಸುಮ್ಮಾನದಿಂದ ' ಎಂದು ಹೇಳಿ, ' ದಾರಿದ್ರಾವಸ್ಥೆಯಲಿ ನರರು ವಿನಯದಿ ಸದಾಚಾರದಿಂ ನ ಡೆ ವ ರು ಗುರುಹಿರಿಯರಚ್ಯುತನನಾರಾಧಿಸುತ ಅಚ್ಚ ಸಾತ್ವಿಕ ಭಾವದಿಂ ಇರ್ಪರ್ಕೆ ಭಾಗ್ಯವಿರಲು ಹೋರುವರ್ ಸಾಧುಗಳ್ ವಿಷಯಲಂಪಟರಾಗಿ, ನಾರಿಯಲಿ ಮನವಿಡುವರು, ಆ ಹರಿಯ ಮರದಪರ್ ' ಎಂದು ಮರುಗುತ್ತಾರೆ ' ಸಿರಿಯನರ್ಥ ಸಾಧನ ದುಃಖಕಾರಣವು ' ಎಂದು ಉಪದೇಶಿಸುತ್ತಾರೆ. ದಾರಿದ್ರ್ಯ ದಾಸ್ಯ ಕೌಂಡಿಣ್ಯನಿಗೆ ಪ್ರಾಪ್ತವಾಗಲು ' ಆರಿಗಳಾದರ್ ಮಿತ್ರರೆಲ್ಲ ಮಾತಾಡಿಸರು ಪೊರೆಯೊಳಿರ್ದರ್ಬಗೆಯದಲೆ ದ್ವಿಜನ ತಾತ್ಸಾರದಿ . .. ನಿಲವು ಕಂಡರೆ ನೇರದಲೆ ಕಲಹವಂ ಮಾಳ್ಪರು ' ಎಂದು ಹೇಳಿ, ಧನದ ಮಹಿಮೆಯನ್ನು ವ್ಯಂಗವಾಗಿ, ಪರಿಣಾಮಕಾರಿಯಾಗಿ ಚಿತ್ರಿಸುತ್ತಾನೆ ' ಕುಲಹೀನನಾಗಲಿ ಮೂಢನಾಗಲಿ ಧರ್ಮನುಳಿದ ಖಳನಾಗಲಿ ಕುರೂಪನಾಗಲಿ, ಧಾತ್ರಿಯೊಳಗವಂ ಸಿರಿವಂತನಾಗಿದ್ದರೆ ಎಲ್ಲ ಜನರು ಅವನ ಮನವಿಡಿದು ಸತತ, ಬಲು ಜ್ಞಾನಿ ಸತ್ಕುಲಪ್ರಸೂತ ಪುಣ್ಯಾತ್ಮ ಅತಿಚಲುವಂ ಮಹಾ ದಾನಿ ಸತ್ಪುರುಷನೆಂದವನ ಪೊಲಿಸಿ ಕೊಂಡಾಡುತ್ತ ಉದರ ಪೋಸಣೆ ' ಮಾಡುವ ಲೋಕದ ನೀತಿಯನ್ನು ಬಹು ಮಾರ್ಮಿಕವಾಗಿ ಬಗೆಗಾಣಿಸುತ್ತಾನೆ ದಾರಿದ್ರ್ಯ ಬಂದಾಗ ' ನೆಂಟರೂ ಕಂಟಕ 'ರಾಗುವದು ನಿತ್ಯಾನುಭವವಾಗಿದೆ

ಕಥಾ ಮೂಕವಾಗಿ' ಘನಸುವಿದ್ಯಾ ಗರ್ವದಿಂ ಓರ್ವ ಶಿಷ್ಯಜನಕೆ ಅಕ್ಷರವೊಂದನೆ ಪೇಳದೆ ಅನವರತ ಲೋಭತ್ವ ಮಾಡಿದ ಅಘದಿಂದ ' ಹೆಮ್ಮರದ ಜನ್ಮ ಬರುವದೆಂಬುದನ್ನು ' ಅಕ್ಷರವ ದಾನ ಮಾಡದ ವಿಪ್ರ ಕುಜನಾಗಿ

ಸಂಭವಿಸುವನು ' ಎಂದು ಹೇಳುತ್ತಾನೆ. ಕುದಾನದ ಫಲವನ್ನು ವರ್ಣಿಸುತ್ತ, ' ಸಿರಿವಂತನಾಗಿರ್ದು ದೀನತ್ವ ಬುದ್ಧಿಯಿಂ ಫಲರಹಿತವಾದ ಉಸರ ಭೂಮಿಯಿಂ ದಾನವುಂ ಕೊಡಲು ' ತೃಣಕಬಳಿಸಲು ಅಸಮರ್ಥವಾದ ಗೋವತ್ಸ ಜನ್ಮವೆಂದು ಹೇಳುತ್ತಾನೆ. ' ಭೂಮಿದಾನದಕಿಂತ ಅಧಿಕ ದಾನ ಮತ್ತೊಂದಿಲ್ಲ ಅಖಿಲ ವಸ್ತುಗಳು ಪುಟ್ಟುವವು ಭೂಮಿಯೊಳಗೆ ' ಎಂದು ಭೂದಾನದ ಹಿರಿಮೆ ಸಾರುತ್ತಾನೆ ದಾನಕೊಟ ಭೂಮಿಯನ್ನು ತಿರುಗಿ ಅಪಹರಿಸಲು, 'ನರಕದಲಿ ಬೀಳ್ವರವರು' ಎಂದು ಹೇಳಿ 'ಗರಳ ಗರಳಲ್ಲ ಬ್ರಹ್ಮಸ್ವವೇ ವಿಷದಿಟಂ ಗರಳುಂಡರೋರ್ವನಂ ಕೊಲ್ಲುವದು, ಬ್ರಹ್ಮಸ್ವಹರಣ ಮಾಡಲ್ಕೆ ಅವನ ಪುತ್ರ ಪೌತ್ರಾದಿಗಳ ತರಿವುಪ್ರೆ ಕುಲ ಮೂಲಮುಂ ಕರಿಕು ಮಾಡುವದು . ದ್ವಿಜರೊಡವೆ ದಕ್ಕುವದೇ ಜೀವಿಗಳ್ಗೆ ' ಎಂದುದ್ಗರಿಸುತ್ತಾನೆ ದಾನವನ್ನು ಅಪಾತ್ರರಲ್ಲಿ ಎಸಗಿದರೆ ಪಶುಯೋನಿ ಜನ್ಮಫಲ ಹೇಳುತ್ತಾನೆ ಅನ್ನದಾನದಲ್ಲಿ ಪಾತ್ರಾಪಾತ್ರ ವಿಚಾರ ಮಾಡದಲೆ ಸರ್ವಜೀವರಿಗೆ ಈವುದು. ಆದರೆ ' ಕನ್ಯಾದಿ ಗೊ ಭೂಮಿ ದಾನವುಂ ಜ್ಞಾನಸಂಪನ್ನ ಸತ್ಪಾತ್ರರಿಗೆ ತಿಳಿದೀಯಬೇಕು ' ಎಂಬ ಮಾತನ್ನು ಇಂದಿನ ಜನ ಮನದಟ್ಟು ಮಾಡಿಕೊಳ್ಳಬೇಕಾಗಿದೆ ತಮ್ಮ ತಮ್ಮಲ್ಲಿಯ ಬಂಧುಬಳಗದಲ್ಲಿ ದಾನ ಕೊಡುಕೊಳ್ಳುವದನ್ನು ನಿಂದಿಸಿ ' ದೇಹಾನುಬಂಧಿಗಳಾದವರ್ಗೆ ದಾನವನೀಯೆ ಕಾನನದೊಳುದಿಸುವರ್ ಜಡರಾಗಿ ' ಎಂದು ಫಲ ಹೇಳುತ್ತಾನೆ ಈ ರೀತಿಯಾಗಿ ದಾನದ ಫಲಾಫಲಗಳನ್ನು ಹೇಳುವಲ್ಲಿ ಮೂಲದಲ್ಲಿಯು ಮಾತುಗಳಿಗೆ ತನ್ನ ಅನುಭವವನ್ನು ಸೇರಿಸಿ ಅರ್ಥವನ್ನು ಹಿಗ್ಗಿಸಿ ಪರಿಣಾಮಕಾರಿಯಾಗಿಸುತ್ತಾನೆ.

**ಕಾವ್ಯಶೈಲಿ—** ಕವಿ, ಈ ಮೊದಲೇ ಹೇಳಿದಂತೆ ಪ್ರಾಸಾನುಪ್ರಾಸ ಯಮಕ ಪದಲಾಲಿತ್ಯಗಳಲ್ಲಿ ಕವಿ ಲಕ್ಷ್ಮೀಶನನ್ನು ಮಾದರಿಯಾಗಿಟ್ಟುಕೊಂಡು ನಾಗುತ್ತಾನೆಂಬ ಮಾತನ್ನು ' ಜಯ ಜಯತು ಕವಿಗೇಯ ವಿಮಲಮಂಗಳ ಕಾಯ ಜಯ ಜಯ ಸಹಸ್ರಾಕ್ಷ ಸುವಿಶಾಲ ತರವಕ್ಷ . .. ' 'ತ್ರಾಹಿ ಕಮಲಾಕಾಂತ ನಿಶ್ಚಿಂತ ಬಲವಂತ, ತ್ರಾಹಿ ನಿರುಪಮ ನಿಜಾನಂದ ನಿರ್ಭಯನಿರಜ... ' ಇತ್ಯಾದಿಗಳಲ್ಲಿ ಕಾಣಬಹುದು ' ಪರಿ ಪರಿಯ ಲತೆ ಗುಲ್ಮ ಕುಜಗಳಿಂ ಗಜಗಳಿಂ, ದುರುತರದ ವೃಕ ವ್ಯಾಘ್ರ ಹರಿಗಳಿಂ ನರಿಗಳಿಂ .......' ' ವಾಣಿ ಸಕಲಾಗಮ ಪ್ರವೀಣೆ ಕಿಸಲಯ ವಾಣಿ,... ಬ್ರಹ್ಮಾಣಿ ಗುಣಪೂರ್ಣ ಕಲ್ಯಾಣಿ

ಸುಶೇಣಿ ಫಣಿವೇಣಿ ಶುಕವಾಣಿ ಜಾಣಿ ' ಎಂಬ ಪದಗಳನ್ನು ಓದಿದಾಗ ತಟ್ಟನೆ ಲಕ್ಷ್ಮೀಶನ ಪದ್ಯಗಳು ನೆನಪಾಗುತ್ತವೆ. ಪ್ರಾರಂಭದ ಮಂಗಳ ಶ್ಲೋಕ ವಾದ ' ಶ್ರೀ ರಮಣಿಸುಸ್ತನಗಳೆಂಬ ಕೋಕನಗಳಿಂ ಸಾರಭಕ್ತಾವಳಿಯ ಹೃತ್ಕ ಮಲ ನಲಿದಾಡೆ ... . ' ಎಂಬ ಮೊದಲ ಪದ್ಯವನ್ನು ಓದಲು ' ಶ್ರೀವಧುವಿನಂ ಬಕಚಕೋರಕಂ ಸೂರೆಯೆ ಭಕ್ತಾವಳಿಯ ಹೃತ್ಕುಮುದ ಕೋರಕಂಬಿರಿಯೆ' ಎಂಬ ಲಕ್ಷ್ಮೀಶನ ಶ್ಲೋಕ ನೆನಪಿಗೆ ಬರುತ್ತದೆ. ಕವಿಯು ಕೆಲ ವಿಷಯಗಳಲ್ಲಿ ಹಿಂದಣ ಕವಿಗಳನ್ನನುಕರಣ ಮಾಡಿದರೂ ತನ್ನತನವನ್ನು ಬೆಳಗದೇ ಇಲ್ಲ ' ರವಿಯಂತೆ ಕಾಂತಿಯಲಿ ಶಶಿಯಂತ ಶಾಂತಿಯುಲಿ, ಭವನಂತೆ ವೀರ್ಯದಲಿ ಹರಿಯಂತ ವಿಭವದಲಿ .. . ." ಎಂಬ ಪದ್ಯವನ್ನು ಓದಿದಾಗ ಷಟ್ಪದಿಯ ಅಂದಚಂದ, 'ಮಾರನಂ ಪಡೆದ ಸುಂದರ ಮೋಹನಾಕಾರ ಸಾರಿದರೆ ಸಲಹೊ ಪರಮೋದಾರ ಕೋದಂಡಧಾರ ಜಗದೋದ್ಧಾರ ಗುಣಸಾರ ರಘುವೀರ ಭಕ್ತರಾಧಾರಧೀರ ' ಎಂಬ ಪದ್ಯವನ್ನು ಓದಿದಾಗ ಪದಗಳ ನಿರರ್ಗಳ ಓಟದ ಅರಿವಾಗದಿರದು. ' ನಮೋ ನಮೋ ವೈಕುಂಠ ವನಮಾಲ ಧೃತಕಂಠ.... ನಮೊ ನಮೊ ಶ್ರುತಿನಾಥ ಬ್ರಹ್ಮಾದಿ ಸುರನಾಥ .. ಗೀರ್ವಾಣ ಪಾಲ ಸದ್ಗುಣ ಪೂರ್ಣ ಶ್ರೀವತ್ಸ ಲಾಂಛನ ನಮೋ ' ಈ ಪದ್ಯದಲ್ಲಿ ಬಳಸಿದ ಸಂಸ್ಕೃತಪದ ಬಂಧನವನ್ನವಲೋಕಿಸಿದರೆ ಕವಿಯು ಉಭಯ ಭಾಷಾ ಪಂಡಿತನೆಂಬುದು ತಿಳಿದು ಬರುತ್ತದೆ.

ಇಡೀ ಕಾವ್ಯದಲ್ಲೆಲ್ಲ ಸಂಸ್ಕೃತ ಪದಗಳನ್ನು ನಿರಾಯಾಸವಾಗಿ ಕನ್ನಡ ಪದಗಳೊಂದಿಗೆ ಬಳಸುತ್ತಾನೆ. 'ಶಶಿಕಾಂತ ಶಿಲೆಗಳಿಂ ತೊಳಗುತಿಹ ಸೋಪಾನ ಪ್ರಸಾದದಿಂ ವಿಮಲ ಸ್ವಾದೋದಕ ತರಂಗಳ ವಿಸರದಿಂ .. . ... ದೆಶೆದೆಶೆಗೆ ಬೀರ್ವ ಹೊಂದಾವರೆಯ ಸುರಭಿಯಿಂದೆಸೆವ ತಂಗಾಳಿಗಳ ತಂಪಿನಿಂ ಮಕರಂದ ರಸವನಾಸ್ವಾದಿಸುವ ಭೃಂಗಗಳ ಸಂಗದಿಂ ಕಣ್ಗೆಸೆದವಾ ಕೊಳಗಳು' ಎಂಬ ಪದ್ಯದಲ್ಲಿ ಕನ್ನಡ ಸಕ್ಕದಗಳ ಪದ ಪ್ರಯೋಗ ಕರ್ಮಣಿ ಸರದೊಳ್ ಚೆಂಬ ವಳಮಂ ಕೋದಂತಾಗಿದೆ, ರನ್ನಕ್ಕೆ ಕುಂದಣವನಿಟ್ಟಂತಾಗಿದೆ. ಕವಿಯು ಭಾವ ರಸಗಳಿಗನುಗುಣವಾಗಿ ಪದ ಪ್ರಯೋಗಗಳನ್ನು ಧ್ವನಿ ಪೂರ್ಣವಾಗಿ ಮಾಡಿದುದು ಕಾವ್ಯದ ವೈಶಿಷ್ಟ್ಯವಾಗಿದೆ.

ದಾಸರಾಯರ ಜನಪದ ಭಾಷೆಯ ಅಂದಚಂದವಂತೂ ಕಾವ್ಯದತುಂಬಾ ಕಾಣಬರುತ್ತದೆ. 'ಎಲೆ ಮಯೂರವೆ ನಮ್ಮ ಬಿಡಬ್ಯಾಡ.. ಬಲು ವಂತ ನಾಗಿರ್ವೆ ನೋಡು ... ... ...ಕಳೆವಂತರಾಗಿಹೆವು' 'ಬರಿದ ಚಿಂತಿ ಪುದ್ಯಾಕೆ ... . ಮುರಿದು ಕಷ್ಟವಗೊಂಡು ಬಹೆನು' ಹಿರಿಯತನವುಂ ವೃಥಾ ಬಿಡಲ್ಯಾಕೆ ಲೇನೆನುತ ಸಿಕ್ಷರಕ್ಷಾವ್ಯಸನವು ನೆಲೆ ಎಮಗೆ ನೀನರಿಂಪೆ ಸಾಕು ರಾಜ್ಯಾವಳಿಯ ತಳುವ್ಯಾಕೆ ಬಿಡು ಭಂಡವಿದ್ಯೆಯುವ' ಎಂಬಲ್ಲಿಯು ಒಳಕೆ ಮಾತುಗಳ ಸ್ವಾರಸ್ಯವನ್ನು ನಾವುನವಿಯಬಹುದು ಧಡಧಡಧಡಲ್ . .. .... ಖಿಳಿ ಖಿಣಿ ಖಿಟಿಲ್— ಧುಡುಧುಡುಧುಡುಲ್ ಪೌಯ್ವ ಪ್ಪರಿಸುತಪ್ಪ ಳಿಸಲು' ಇತ್ಯಾದಿ ಪದಗಳಲ್ಲಿಯ ಧ್ವನಿ ನತ್ವಗಳು ಉಚಿತವಾಗಿವೆ, ಸಂದ ರ್ಭವನ್ನು ಯಥಾರ್ಥವಾಗಿ ಚಿತ್ರಿಸುತ್ತವೆ 'ಹಳಿಚಿದರ್ ಸುಳಿಗಾಳಿಯಂತೆ ಗರ್ರನೆ ತಿರುಗಿ ನುಳಿದು ಖಗಪತಿಯಂತೆ ಹೊಯ್ದರ್ ಎರಗಿದರ್ ಬಿಡದೆ ಬಳಿಸಿ ತಿವಿದರ್' ಎಂಬಲ್ಲಿ ಕವಿ ಕೊಡುವ ಶಬ್ದ ಚಿತ್ರಗಳು ತುಂಬಾ ಅರ್ಥವ ತ್ತಾಗಿವೆ. ಕವಿಯ ಭಾಷಾ ಪಾಂಡಿತ್ಯ ಪ್ರಭುತ್ವಗಳನ್ನು ಕಾಣಲು ಈ ಕೆಳ ಗಿನ ಶ್ಲೋಕಗಳಲ್ಲಿಯ ಪದಪ್ರಯೋಗಗಳನ್ನು ತೋರಿಸಬಹುದು 'ಹರಿಣಾಂಕ ವಂಶ ಸಂಜಾತನಂ ಖ್ಯಾತನಂ ಹರಿಜಾತನಚ್ಛಿನ್ನ ಭಕ್ತನಂ ಶಕ್ತನಂ ... .. ' ಈ ಶ್ಲೋಕದಲ್ಲಿ ಹರಿಣಾಂಕ, ಹರಿಜಾತ, ಹರಿಧ್ವಜ, ಹರಿಸುತ, ಹರಿದ್ವೇಷಿ, ಹರಿತನ ಮುಂತಾದ ಪದಗಳಲ್ಲಿ ಹರಿ ಎಂಬ ಪದವನ್ನು ವಿವಿಧಾರ್ಥಗಳಲ್ಲಿ ಬಳಸಿದುದನ್ನು ತಿಳಿಯಬಹುದು. ಅಂತೆಯೆ ೯ ನೆಯ ಸಂಧಿಯಲ್ಲಿಯ ೪೨ನೆಯ ಪದ್ಯದಲ್ಲಿ ವತ್ಸರರ್ಯ, ವತ್ಸರಾಗ್ರಣಿ, ವತ್ಸರಾರ್ಣವ, ವತ್ಸರಾರಿ, ವತ್ಸದವ, ವತ್ಸರಂಗ್ರೆಸಿ ಮುಂತಾದ ಪದಗಳನ್ನು ಪ್ರತಿಪಾದಗಳಲ್ಲಿ ಉಪಯೋಗಿಸಿ ವಿವಿಧಾರ್ಥಗಳನ್ನು ಬಹು ಚಮತ್ಕಾರಿಕವಾಗಿ ಕೊಡುತ್ತಾನೆ ಇಲ್ಲಿ ವತ್ಸರ ಪದಕ್ಕೆ ಸಂವತ್ಸರಗಳ ವಿವಿಧ ಹೆಸರುಗಳನ್ನು ಅನ್ವಯಿಸಿಕೊಳ್ಳಲು ಕ್ರಮವಾಗಿ ಬ್ರಹ್ಮನೊಡೆಯ ಶ್ರೀಕೃಷ್ಣ, ಸೌಮ್ಯ ( ಸಂವತ್ಸರ ) ಅಗ್ರಣಿ ಧರ್ಮ ವತ್ಸರಗ್ರಜ ( ವಿಜಯ ನಾಮ ಸಂವತ್ ) ಅರ್ಜುನ, ಹೀಗೆ ಅರ್ಥ ಮಿಂಚುತ್ತದೆ ಪದ್ಯಾರ್ಥ ಸುಲಭವಾಗುತ್ತದೆ. ಇಲ್ಲವಾದರೆ ತಿಳಿಯದ ಒಗಟಾಗುತ್ತದೆ ಹೀಗೆ ಅನೇಕ ಸಂದರ್ಭಗಳಲ್ಲಿ ಪದಪ್ರಯೋಗ ಪರಿಣತಿಯನ್ನು ಕವಿ ತೋರಿದ್ದಾನೆ. ೧೦ನೆಯ

ಸಂಧಿಯಲ್ಲಿ ೪೨ನೆಯ ಶ್ಲೋಕದಲ್ಲಿ ವಾರಶತ, ವಾರದಶ, ವಾರಪ್ರದಾಯಿಕ ಮುಂತಾಗಿ ' ವಾರ ' ಪದವನ್ನು ಬಳಸಿದ್ದಾನೆ ಇಲ್ಲಿ ಕ್ರಮವಾಗಿ ಆಯಾ ವಾರಗಳ ಹೆಸರನ್ನು ಅನ್ವಯಿಸಿಕೊಳ್ಳಲು ಅರ್ಥ ಸುಗಮವಾಗುತ್ತದೆ ೮ ನೆಯ ಸಂಧಿಯಲ್ಲಿ ೧ನೆಯ ಪದ್ಯದಲ್ಲಿ ' ರಾಸಿ ' ಪದವನ್ನುದ್ದಕ್ಕೂ ಉಪಯೋಗಿಸುತ್ತಾನೆ ಇಲ್ಲಿ ' ರಾಸಿ ' ಪದಕ್ಕೆ ಮೇಷಾದಿ ರಾಶಿಗಳಲ್ಲಿ ಆರು ರಾಶಿಗಳನ್ನು ಅನ್ವಯಿಸಿಕೊಂಡಲ್ಲಿ ಅರ್ಥವು ಸುಲಭವಾಗುತ್ತದೆ ಇದೇ ರೀತಿಯಾಗಿ ' ಕನಕೋದರೋದ್ಭವನ ಮೊಮ್ಮಗನ ಮೊಮ್ಮಗನ ತನುಜಂಗೆ ಕಥೆ ಪೇಳ್ದನನ ಪಿತನ ತತ್ಪಿತನ, ವನಿತೆಯ ರಸನ.... . ವಿನಯ ನುಡಿ ಜರಿದವನ ಸಹ ಭವನ ಸಹ ಭವನ' ಹಾಗು, ಭೇರಿನಾಮದ ಖಳನ ಕೊಂದವನ ಕೊಂದವನನಾರಿಯಂ ಪಡೆದವಳ ತನುಭವನ ತನುಭವನ ' ಪದ್ಯಗಳಲ್ಲಿ ಒಡಪಿನ ಅಂದ ಇಟ್ಟಿದ್ದಾನೆ ೮ ನೆಯ ಸಂಧಿಯಲ್ಲಿ ೪೨ ಮತ್ತು ೪೩ ನೆಯ ಪದ್ಯಗಳಲ್ಲಿ ಕೊಳವನ್ನು ವಿಷ್ಣುವಿಗೂ ಅಪ್ಸರೆಗೂ ಹೋಲಿಸುವಲ್ಲಿ ಬಳಸುವ ಶ್ಲೇಷಾರ್ಥವುಳ್ಳ ಶಬ್ದಗಳಲ್ಲಿ ಕವಿಯ ಪಾಂಡಿತ್ಯವೇ ಕಂಡು ಬರುತ್ತದೆ ಮೃಗಗಳ ಆರ್ಭಟವನ್ನು ಚಿತ್ರಿಸುವ 'ವಿಟಪ ವಿಟಪಂಗಳಿಂ ಪುಟಿನೆಗೆದು ಚೀರುತ್ತಾರ್ಭಟಂಗೈವುತುತ್ಕಟದ ಕಟಕಟನೆ ಪಲ್ಮುರಿವ ಚಟುಲ ಮರ್ಕಟಕಟಕದಿಂದ ಸಂದಟಿತವಟಜಟವಿಡಿದು ನಟಿಸುತ ಕುಟಿಲ ರಿಕ್ಷಂಗಳಿಂ ಮಿಟ ಮಿಟನೆ ಕಣ್ಬಿಡುವ ಕಿಟಿ ಕರಿಣ ಮೃಗಗಳು ಛಟಛಟತ್ಕಾರ ನವಘಟಿತ ಘೋರಡವಿ' ಎಂದು ಹೇಳುವಲ್ಲಿ 'ಟ' ಕಾರ ಬಾಹುಲ್ಯದ ಸ್ವಾರಸ್ಯ ಧ್ವನಿ, ಪದ್ಯಹೇಳಿಯೇ ಅನುಭವಿಸಬೇಕು. ಕವಿಯ ಶಬ್ದ ಭಾಂಡಾರ, ಜ್ಞಾನವೂ ವಿಪುಲವೆಂಬುದಕ್ಕೆ ನಿದರ್ಶನವಾಗಿ ಅವನು ವಿವರಿಸುವ ಆಯುಧಗಳು, ಹಕ್ಕಿಮಿಗಗಳೇ ಸಾಕ್ಷಿ 'ಕೈದುಮುದ್ಗರವೊ ಖಡ್ಗವೊ ಪರಶು ಮುಸಲವೊ ಕೊಂತ ಶೂಲವೋ ಡುಂಕಣಿಯೋ ಪರಿಘ ಚಕ್ರವೊ ಗದೆಯೊ ತೋಮರವೋ ಪಟ್ಟಿಸುವ ಬಂಧಿವಾಳವೊ ಶಕ್ತಿಯೊ ಶರಧನುವೊ ಕಕ್ಕಡಿಯೊ ಮುಷ್ಟಿಯೊಮೇಣ್ದಂಡವೊ ವರ ಕರಾರಿಯೋ ' ದಾವುದು ಇರಿತಕೆ ಅಭ್ಯಾಸವೆಂದು ಮಾಗಧನು ಭೀಮನನ್ನು ಕೇಳುತ್ತಾನೆ ವೃಕ್ಷಗಳನ್ನು ವಿವರವಾಗಿ ' ಬೋರೆ, ಬೊಬ್ಬುಳಿ, ಚಿಣಕು, ಮುಳ್ಕಳ್ಳಿ, ಕರಿಬೇವು, ಕರಿಬಿಲ್ವ, ಕಪಿತ್ಥ ಔದುಂಬರಾಮಲಕ ನಿಂಬಾದಿ ಭೂರುಹವನೇಕ ಜಾತಿ ' ಎಂದು ಹೇಳುತ್ತಾನೆ. ' ಶರಭ, ಸೈರಭ, ಕಲಭ, ಶಲಭ, ಶಾರ್ದೂಲ, ಶಶ, ಸುರಭಿ,

ವನಮಹಿಷಿ, .. ಕೇಸರಿಖಡ್ಗ, ಪರಿಪರಿಯ ಭೀಷಣದ ಮೃಗಗಳಲ್ಲದೆ, 'ಗೊರವಕ, ಕಪೋತ, ಬಕ, ಹಂಸ, ಶಿಖಿ, ಮಯೂರ ಹರಿಕಾಕ, ಗೃಧ್ರ, ಕೋಕಿಲ, ಚಕ್ರಭೈರುಂಡ, ವರಚಮರಿ, ಗೀಜಗ, ಚಕೋರಾದಿ' ಪಕ್ಷಿಗಳಿಂದ ವಿಪಿನ ರಾಜಿಸಿತೆಂದು ಬಣ್ಣಿಸುತ್ತಾನೆ. ಹೀಗೆಯೇ ಕವಿಯ ಪಾಂಡಿತ್ಯಕ್ಕೆ ಪದಲಾಲಿತ್ಯಕ್ಕೆ ಸಮುಚಿತ ಪದಪ್ರಯೋಗಕ್ಕೆ ನಾದಮಾಧುರ್ಯಕ್ಕೆ ಉದಾಹರಣೆಗಳನ್ನು ಕೊಡುತ್ತ ಹೋಗಬಹುದು.

**ಕಾವ್ಯಮಹತಿ**:— ಕುಮಾರವ್ಯಾಸ, ಲಕ್ಷ್ಮೀಶರಂತೆ 'ಶ್ರೀ ಮನೋಹರ ವಿಠಲನೇ ಕೃತಿಯ ನೊರೆದನೆಂದು' ವಿನಯದಿಂದ ಸೌಜನ್ಯಪೂರ್ವಕವಾಗಿ ಹೇಳಿಕೊಳ್ಳುತ್ತಾನೆ. ಭಾರತೀತಿಹಾಸ ರಾಮಾಯಣ ಸುಭಾಗವತ ಪುರಾಣ ಶರಧಿಗಳಮಥಿಸಿ ಕವಿಜನರು ತತ್ಸಾರಾಮೃತದಸವಿಕೊಳಕೊಳಲು ಮೇಲುಳಿದ ಅಲ್ಪರಸವನು ಹರಿಯ ಕಾರುಣ್ಯದಿಂ ಸಂಪಾದಿಸಿದೆನೆನ್ನುತ್ತಾನೆ 'ಶ್ರೀ ರಮಾಪತಿಯ ಗುಣ ಸ್ತುತಿಗಳಲ್ಲದ ಕಾವ್ಯ ರಚನೆ ವ್ಯರ್ಥಂ' ಎಂದು ಘಂಟಾಘೋಷವಾಗಿ ಸಾರುತ್ತಾನೆ. 'ಋತುಗಳೊಳ್ ವಸಂತ, ಮಾಸದೊಳು ಮಾರ್ಗಶಿರ ವ್ರತದೊಳೇಕಾದಶಿ............' ಎಂದು ಹೇಳಿ 'ಸತ್ಕಥಾ ಜಾಲದೊಳ್ ಉತ್ತಮ ಅನಂತ ಕಥಾ ಪ್ರಸಂಗ'ವೆಂದು ಅನಂತ ಕಥೆಯ ಹಿರಿಮೆಯನ್ನು ಹೇಳುತ್ತಾನೆ ಈ ಕಥೆಯ ಕೇಳ್ದವರಿಗೆ 'ಸೌಭಾಗ್ಯ ಮಾರೋಗ್ಯ ಮಾಯುಷ್ಯಮಭಿವೃದ್ಧಿಯು, ಆ ಮಹಾ ಕೀರ್ತಿ ಸತಿ ಸಂತತಿ ಸುಶಾಂತಿ ಧೃತಿ ರಾಮಣೀಯಕಜ್ಞಾನ ಶತ್ರುಜಯ .. . ಹರಿಭಕ್ತಿ ದೃಢವಾಗಿ ಕೈಸಾರ್ವವು' ಎಂದು ಫಲ ಹೇಳುತ್ತಾನೆ ಸಕಲದುರಿತನಾಶ ಪುಣ್ಯರಾಶಿ ಈ 'ಕಾವ್ಯವು ಇದು ದುರಿತವಿಪಿನ ದಾವಾನಳನಂ ಧಿಟ ಬಗೆವಡಿದು ದುರಿತವೋಘ ಪ್ರಭಂಜನಂ, ಭಾವಿಸುವೊಡೆ ಖೂಳಜನದಂಧಕಾರ ಸಂಹಾರ ಕಾರಣಾ ಚಂಡಕರ ನುದಯ' ಎಂದು ಹೇಳಿ 'ಇದು ಪುಣ್ಯ ವಿಮಳ ಪಿಯೂಷ, ಪಾರಾವಾರವಿದು ಸುಜನ ಹೃತ್ಕುಮುದ ಕೋರಕಕೆ ಚಂದ್ರ . ಇದು ಮಹಾ ಶೋಕಾಬ್ಧಿಯಂ ಶೋಷಣಂ ಮಾಳ್ಪದಿದು ಸಂಸಾರವ್ಯಾಧಿ ಭೇಷಜ ಸತ್ಯವಿದು ಮುಕ್ತಿ ಪಥಕೆಸೋಪಾನವಿದು' ಎಂದು ಬಣ್ಣಿಸುತ್ತಾನೆ.

**ಕೊನೆಯ ಮಾತು**— ಇಂತಹ ಸರಸ ಸುಂದರ ಹರಿಕಥಾ ಕಾವ್ಯ ವನ್ನು ಶ್ರೀಯುತ ಗೋರಬಾಳ ಹಣಮಂತರಾಯರು ಬೆಳಕಿಗೆ ತಂದು ಕನ್ನಡಿಗರನ್ನು ಋಣಿಯಾಗಿಸಿದ್ದಾರೆ ನಾವು ಅವರಿಗೆ ಎಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಿಮೆಯೆ ದಾಸರಾಯರಿಗೆ ನನ್ನ ಅಳಿಲು ಸೇವೆ ಸಲ್ಲಿಸಲು ಅವಕಾಶ ನೀಡಿದ್ದಕ್ಕಾಗಿ ಶ್ರೀ ಹಣಮಂತರಾಯರಿಗೆ ನನ್ನ ಕೃತಜ್ಞತೆಗಳು.

**ಗದಗ**

೨೪—೧೧—೧೯೫೪

ತಮ್ಮ,

**ಎ ಆರ್ ಬುರ್ಲಿ,**

ವಿದ್ಯಾದಾನ ಸಮಿತಿ ಹಾಯಸ್ಕೂಲ, ಗದಗ.



# — ವಿಷಯಾನುಕ್ರಮಣಿಕೆ —


ಸಂಪಾದಕನ ಅರಿಕೆ.

ಕಾವ್ಯವಿಮರ್ಶೆ-- ಶ್ರೀ ಪಂಡಿತವರ್ಯ ಶ್ರೀ ಕೇಶವಾಚಾರ್ಯರು ಜಾಲಿಹಾಳ.

ಪೀಠಿಕೆ— ಶ್ರೀ ಅನಂತಾಚಾರ್ಯ ಬುರ್ಲಿ, B. A. ( Hons. ), B.Ed

ಶ್ರೀ ಮನೋಹರ ವಿರಲ ಕೃತ ಅನೇಕ ಕಾವ್ಯಗಳ ಪದ್ಯಗಳು ಮಾದರಿಗಾಗಿ ೧—೪

ಕಾವ್ಯಕರ್ತರ ಸಂಕ್ಷಿಪ್ತ ಪರಿಚಯ .... .... ೫—೬

**ಸಂಧಿ** **ವಿಷಯ** **ಪುಟ**

**೧ ನೇ ಸಂಧಿ**— ಪೀಠಿಕಾಸಂಧಿ, ೨೭ ಅವರೋಹಣ ಪದ್ಯ ೭—೧೭

ಕ್ರಮದಿಂದ ಮಂಗಲಾಚರಣೆ ಪದ್ಯಗಳು ಸ್ವಾಹಂಕಾರ ಖಂಡನಪೂರ್ವಕ ಕವಿವರ್ಯರ ಆತ್ಮಕಥನ ಶ್ರೀ ಹರಿಸ್ತೋತ್ರಯುಕ್ತ ನವರಸಾಲಂಕಾರ ಮಹಾ ಕಾವ್ಯ ಗಾನ ಮಾಡಿದ ವರ್ಣನೆ.

**೨ ನೇ ಸಂಧಿ**— ( ಪದ್ಯ ೮೦ ) ... .... ೧೮—೪೬

ರಾಜೇಂದ್ರನಾದ ಧರ್ಮಜನು ಪಿತನಸದ್ಗತಿಗೆ ರಾಜಸೂಯಾಗ ಮಾಡು ವದು ನಿಶ್ಚೈಸಿ ಶ್ರೀ ಕೃಷ್ಣನಕೂಡ ಭೀಮಾರ್ಜುನರನ್ನು ಮಗಧ ದೇಶಾಧಿ ಪತಿಯಾದ ಜರಾಸಂಧನನ್ನು ಗೆಲ್ವುದಕ್ಕೆ ಕಳುಹಿದುದು

**೩ ನೇ ಸಂಧಿ**— ( ಪದ್ಯ ೯೨ ) ... .... ೪೬—೮೩

ಭೀಮಾರ್ಜುನರು ಶ್ರೀ ಕೃಷ್ಣನೊಡನೆ ಮಗಧ ದೇಶಕ್ಕೆ ಹೋಗಿ ದುರ್ಗವೇರಿ ಭೇರಿಹೊಯ್ದು. ಒಡೆದುದು. ಅವನ ಸದನವನ್ನು ಪೊಕ್ಕು. ಅವನ ಸಂಗಡ ಭೀಮನು ಯುದ್ಧಮಾಡಿ ಜರಾಸಂಧನನ್ನು ತರಿದು ಧನಕನ ಕಾದಿಗಳ ಕೊಂಡು ವಿಜಯೋತ್ಸವದಲ್ಲಿ ಇಂದ್ರಪ್ರಸ್ಥಕ್ಕೆ ಬಂದುದು.

| ಸಂಧಿ | ವಿಷಯ | ಪುಟ |
|---|---|---|

**೪ ನೇ ಸಂಧಿ— ( ಪದ್ಯ ೮೯ )** ... .... ೮೪—೧೧೨

ಧರ್ಮರಾಜನು ಭೀಮಾರ್ಜುನ ನಕುಲ ಸಹದೇವರಿಂದ ಚತುರ್ದಿಕ್ಕಿನ ಸಕಲ ರಾಜರನ್ನು ಪರಾಜಯ ಗೈಸಿ, ಧನ ತರಿಸಿದ್ದು. ರಾಜೀವ ನೇತ್ರನಾದ ಶ್ರೀಕೃಷ್ಣ ದೇವರ ಸಹಾಯದಿಂದ ರಾಜಸೂಯಾಧ್ವರವನ್ನು ಚನ್ನಾಗಿ ಮುಗಿಸಿ ಸಕಲ ಮುನಿ, ರಾಜರಗಳನುಪಚರಿಸಿ ಸುಖದಿಂದ ಸಾಮ್ರಾಜ್ಯವಾಳ್ದುದು.

**೫ ನೇ ಸಂಧಿ— ( ಪದ್ಯ ೧೧೭ )** .... .. ೧೫೦—೧೮೨

ದುಷ್ಟ ದುರ್ಯೋಧನನ ದುಃರಾಲೋಚನೆ ಧೃತರಾಷ್ಟ್ರನಾಜ್ಞೆಯಿಂದ ಧರ್ಮಜನು ಅನುಜ ತನುಜ ಸತಿಗಳು ಸಹ, ವಿದುರನೊಡನೆ ಅತಿಸಂತೋಷದೊಡನೆ ಇಂದ್ರಪ್ರಸ್ಥ ಪೊರಮಟ್ಟು ಹಸ್ತಿನಾಪುರಿಗೆ ಬರುವಿಕೆ

**೬ ನೇ ಸಂಧಿ— ( ಪದ್ಯ ೧೦೪ )** ... .. ೧೫೦—೧೮೨

ಶ್ರೀಪತಿಯ ಕರುಣದಿಂದ ಪಾಂಡುವರು ಆ ದುಷ್ಟನಾದ ಫಣಿಕೇತನನು ಎಸಗಿದ ಉಪಹತಿಗಳಂ ಗೆಲ್ದು, ದ್ರೌಪದಿ ದೇವಿಯರ ವಸ್ತ್ರಾಪಹರಣದಿ ಶ್ರೀಕೃಷ್ಣನಿಂ ಮಾನಮಂ ಪಡೆದು ಸಂತೋಷದಿಂದ ಗಜಪುರದಿಂದ ಪೊರಡುವಿಕೆ.

**೭ ನೇ ಸಂಧಿ— ( ಪದ್ಯ ೯೪ )** ... . ೧೮೩—೨೧೨

ದುರಾತ್ಮನಾದ ದುರ್ಯೋಧನ ಕಪಟದಿಂದ ಧೃತರಾಷ್ಟ್ರನಾಜ್ಞೆಯಂತೆ ಧರ್ಮನು, ಪುನಃ ಗಜಪುರಿಗೆ ಬಂದು ಉಪದ್ಯೂತದಲ್ಲಿ ಸಕಲ ಸಾಮ್ರಾಜ್ಯವನ್ನು ಸೋತು, ನಾಲ್ಕುಜನ ತಮ್ಮಂದಿರು ದ್ರೌಪತಿ ಧೌಮ್ಯಾದಿಗಳೊಡನೆ, ಕಾಮ್ಯಕ ವನಕ್ಕೆ ಬಂದು ದುಮ್ಮಾನದಿಂದಿರಲು ಶ್ರೀ ಕೃಷ್ಣಪರಮಾತ್ಮ ಆಗಮಿಸಿ ದುಃಖ ಪರಿಹರಿಸಲು ಅನಂತ ಕಥೆಯ ವ್ರತಾಚರಣೆ ಪೇಳಿದುದು ೧ ನೇ ಸಂಧಿಯಿಂದ ಆರಂಭಮಾಡಿ ಶ್ರೀ ಅನಂತನ ಕಥಾ ವ್ಯಾಜ್ಯದಿಂದ ಮಹಾಭಾರತ ಸಭಾಪರ್ವ ಕಥಾ ೭ನೇ ಸಂಧಿ ೩೧ ಪದ್ಯದವರೆಗೆ ನವರಸಾಲಂಕಾರಯುಕ್ತದಿ ಬಣ್ಣಿಸಿದ ಮಹಾ ಕವಿಗಳ ಕವಿತಾ ಚಾತುರ್ಯ.

**ಸಂಧಿ** **ವಿಷಯ** **ಪುಟ**

**೮ ನೇ ಸಂಧಿ—** ( ಪದ್ಯ ೮೪ ) .... ... ೨೧೨—೨೪೨

ಶೀಲೆಯ ಪತಿಯಾದ ಕೌಂಡುಣ್ಯನು ಅನಂತನ ದೋರವಮಂ ಪರಿದು ಬಿಸಾಟಿ, ಅನಂತನಂ ಜರಿಯಲು, ಸಕಲ ಸಂಪದ ನಾಶವಾಗಿ ಅವಮಾನಿತನಾಗಿ ವನಕ್ಕೆ ಪೋಗಿ ನಾನಾ ಕಷ್ಟಗಳನು ಅನುಭೋಗಿಸಿ, ಕೊನೆಗೆ ಪ್ರತ್ಯಕ್ಷವಾಗಿ ಅನಂತ ದೇವನಂ ಕಂಡು ನಾನಾಬಗೆ ನುತಿಗೈದು ಮುದದಿಂದ ಮೂರು ವರ ಸಂಪಾದಿಸಿದುದು

**೯ ನೇ ಸಂಧಿ—** ( ಪದ್ಯ ೪೪ ) ... ... ೨೪೨—೨೫೭

ಕೌಂಡುಣ್ಯ ಋಷಿಯು, ದೇವೇಶನಾದ ಅನಂತನ ವರಪ್ರಸಾದದಿಂದ ಈ ವಸುಧಿಯಲ್ಲಿ ಮಹಾ ಭಾಗ್ಯವನು ಅನುಭೋಗಿಸುತ್ತ ಶ್ರೀಹರಿ ಸ್ಮರಣೆ ಪೂರ್ವಕ, ಪವಿತ್ರವಾದ ಪುನರ್ವಸು ನಕ್ಷತ್ರ ಸ್ಥಾನವಂ ಸಾರ್ದು ಸುರರಿಂದ ಪೂಜಿತನಾದುದು.

**೧೦ ನೇ ಸಂಧಿ—** ( ಪದ್ಯ ೬೬ ) ... .... ೨೫೭–೨೮೦

ಶ್ರೀ ಕೃಷ್ಣನಾಜ್ಞೆಯಂತೆ ಧರ್ಮರಾಜನು ಮಂಗಳಾತ್ಮಕನಾದ ಶ್ರೀಮದನಂತನ ವ್ರತಾಚರಿಸಿ ಅನಂತನ ಕೃಪಾವಾಂಗದಿಂ, ಸಂಗ್ರಾಮದೊಳಗೆ ದುರ್ಯೋಧನಾದಿ ಸಕಲ ಅರಿಗಳಂ ಗೆಲ್ದರು. ಮತ್ತು ಆ ಪಾಂಡವರು ಮಾತಂಗ ಪುರವರದ ನಿಜ ಸಾಮ್ರಾಜ್ಯವನು ಸಂಭ್ರಮದಿಂದ ಆಳುತ್ತ ಸುಖದಿಂದಿರ್ದರು ಎಂದು ೪೪ ಪದ್ಯದವರಿಗೆ ಸೂತರು ಶೌನಕಾದಿಗಳಿಗೆ ಬಂಣಿಸಿದ ಕಥಾ.

ಮುಂದೆ ೨೨ ಪದ್ಯದಲ್ಲಿ ಕವಿವರ್ಯರು ಶ್ರೀ ಹರಿಯು ತಮಗೆ ವರವಿತ್ತುದು. ಕಾವ್ಯ ನುಡಿಸಿದುದು ಮಹಾ ಕಾವ್ಯ ಮೇಲ್ಮೆ ಕಾವ್ಯದಲ್ಲಿಪ್ಪ ಸಂಧಿಪದ ಸಂಖ್ಯಾ ಇತ್ಯಾದಿ. ಫಲಶ್ರುತಿಯಂ ಪೇಳಿ ಮಂಗಳಂ ಮಾಡುವಿಕೆ ಮುಂದೆ (೨) ಪುಟಗಳಲ್ಲಿ ವಾವಿ (೨) ಪದ್ಯಗಳ ಅಭಿಪ್ರಾಯ. ೨೮೦–೨೮೨

# — ಒಪ್ಪೋಲೆ. —

| ಪುಟ ಸಾಲು | | | ತಪ್ಪು ಒಪ್ಪು |
|---|---|---|---|
| ೪—೧೯ | .... | ... | ಜವಾಮುಕುಟ--ಜಟಾಮುಕುಟ |
| ೬—೧೩ | | (ಗದ್ಯ) | ಆದ — |
| ೧೩—೨೫ | ... | .. | ಶ್ರಿಂಗಾರ—ಶೃಂಗಾರ |
| ೩೭—೧೪ | .... | ... | ವೆತ್ತಣಿದು—ವೆತ್ತಣದು |
| ೫೪— ೧ | ... | .... | ಕೃಷ್ಣಮಾರ್ಜುನ—ಕೃಷ್ಣಭೀಮಾರ್ಜುನ |
| ೫೪— ೪ | .... | ... | ನವಹವಂ—ನಿವಹವಂ |
| ೫೪—೧೭ | ... | ... | ಶೇಕ್ಷಿತ—ಶೀಕ್ಷಿತ |
| ೫೭— ೭ | .... | ... | ವಗಧಕೇಳ್—ಮಗಧಕೇಳ್ |
| ೫೭— ೧ | . | ... | ವಿದ್ಯಯುವ—(ವಿದ್ಯಯುವ) |
| ೬೨— ೮ | | ... | ಚಲಿನ—ಚಲಿಸ |
| ೬೩— ೯ | .. | ... | ಪಟ್ಟಿಸವ—ಪಟ್ಟಿಸವ |
| ೬೮— ೨ | | | ನುಣ್ಣಪರ್ನುಪಸುತೀರ್ಪ—ನುಣನುಣಸುತಿರ್ಪ |
| ೬೮— ೫ | .... | .... | ಪರಪರ—ಪರಂಪರ |
| ೬೮—೧೪ | ... | ... | ಗಥೆಬಗೆಯೆ—ಗದೆಬಗೆಯೆ |
| ೬೮—೨೧ | ... | ... | ಪಲ್ಮಿರಿವೆತಾರ್ದು—ಪಲ್ಮುರಿವುತಾರ್ದು |
| ೬೮—೨೪ | .... | .... | ಭೀಮುನ—ಭೀಮನು |
| ೬೯—೧೭ | .... | ... | ಬೆರಗಾಗಿ—ಬೆರಗಾಗೆ |
| ೭೪—೨೦ | .... | ... | ಹೊಪ್ರೊಯ್ದು—ಹೊಯ್ದು |
| ೭೬—೨೧ | .... | .. | ರಣಧಯಂಕರ—ರಣಭಯಂಕರ |
| ೭೬—೨೧ | . | .. | ದಿರ್ವರ್ದರ್ಪ—(ದಿರ್ವರ್ದರ್ಪ) |
| ೮೧— ೫ | .. | ... | ಕಪ್ಪಕಾಗಿಕೆ—ಕಪ್ಪಕಾಣಿಕೆ |
| ೮೧—೧೨ | .... | ... | ವಣಿಖತಿಕ—ಮಣಿಖಚಿತ |
| ೯೦—೧೮ | .... | ... | ರಾಗಶಿಳ—ರಾಸಿಗಳ |
| ೯೪— ೯ | .... | ... | ವಾಕೆನಲ್—ವ್ಯಾಕೆನಲ್ |
| ೯೮—೧೩ | .... | ... | ಪರಿಪರಯ—ಪರಿಪರಿಯ |

| | | | |
|---|---|---|---|
| ೧೦೬—೧೯ | ... | .... | ನೀಡಿಲೂ—ನೀಡಲೂ |
| ೧೦೮—೨೭ | ... | | ಚರಣಾಂಬುಜ—ದೇವತವ ಚರಣಾಂಬುಜವ |
| ೧೧೨—೧೫ | ... | ... | ಪೊರಟ್ಟನು—ಪೂರಮಟ್ಟನು |
| ೧೧೯—೧೦ | .... | .... | ದುರುಳಾದಿನೇ—ಮರುಳಾದಿನೇ |
| ೧೨೦— ೨ | .... | . | ಕಾಳಾದು ದೇವಿಳ್ವಿ—ಕಾಳಾದುದೇವಳಿ |
| ೧೨೬—೨೦ | .. | .. | ಳಿರುವುತಾ--ಳುರಿವುತಾ |
| ೧೨೮— ೯ | .... | .. | ತಿಳುಹಿ ತಾ—ತಿಳುಹಿತಾ |
| ೧೨೮—೧೮ | .... | ... | ನಿಧಾವವ—ನಿದಾನವ |
| ೧೩೪—೧೦ | .... | ... | ಪೊದಲಲಿದು—ವೊದಲಲಿದು |
| ೧೩೭—೨೫ | ... | ... | ತಾವಸಾಸುರರ—ತಾಮಸಾಸುರರ |
| ೧೩೮— ೨ | .. | | ದೇನವೇ—ದೇವನೇ |
| ೧೫೨—೧೯ | ... | .... | ನರಮನೆ ಯು—ನರಮನೆಯನು |
| ೧೬೦—೨೫ | .... | ... | ಚಿಂತೆಯೋಳ ರಸ—ಚಿಂತಿಯೋಳರಸ |
| ೧೬೩— ೫ | ... | ... | ಬುದ್ಧಿ ಯುಲ—ಬುದ್ಧಿ ಯುಲಿ |
| ೧೬೬—೧೭ | ... | ... | ಲ ತಾರಗಿನಿ—ಲತಾಂಗಿನಿ |
| ೧೯೯—೧೮ | .... | .... | ರಚಿಸುತಲ—ರಚಿಸುತಲಿ |
| ೧೨೦—೧೮ | ... | .... | ಖಳಗಳಿಂ—ಖಗಗಳಿಂ |
| ೨೧೯— ೫ | ... | .... | ಕೋಮಾವಳಿಯಾ—ರೋಮಾವಳಿಯಾ |
| ೨೩೨—೨೩ | .... | .... | ಅನ್ಯಂಗ—ಅನ್ಯಗಂ— |
| ೨೩೩— ೪ | .... | ... | ನೀಡುವೆಂತೆಂದನು—ನೀಡುತಿಂತಾಂದನು |
| ೨೩೩—೨೫ | ... | ... | ಸಸಾಕಾರ—ಸಾಕಾರ |
| ೨೩೬— ೯ | .... | .... | ಷುಹಾಮುಹಿಮನಂ—ಮಹಾಮುಹಿಮನಂ |
| ೨೪೦— ೪ | ... | ... | ವೇದಗಳ್ವ—ವೇದಗಳ್ತವ |
| ೨೪೨—೧೨ | .... | .... | ಮೂರು ನರಗಳ—ಮೂರು ವರಗಳ |
| ೨೬೨— ೭ | .... | .... | ಸರಳವುರಿ—ಸರಳವುಳಿ |
| ೨೬೨—೧೭ | .... | .... | ಮಣಿಮತನನ್ನು—ಮಣಿಮ-ತನನ್ನು |
| ೨೬೫— ೭ | .... | .... | ಬಯುದಂಬುಲ—ಬಾಯುದಂಬುಲ |

| | | | |
|---|---|---|---|
| ೨೬೮—೧೨ | ... | .... | ದೊಳಿಯುುತ—ದೊಳಯುುತ |
| ೨೬೯—೧೫ | .... | ... | ದಾಹವ್ಯೆಯ್ದಿ ದಿ—ದಾಹವ್ಯೆಯ್ದಿದಿ |
| ೨೭೧—೨೦ | ... | ... | ವಾನೆನಿಸುವ—ವಾರನೆನಿಸುವ |
| ೨೭೨—೨೦ | .... | .... | ವಾದದ—ವಾದ |
| ೨೭೩— ೭ | ... | ... | ಚತುರ್ವಿದ—ಚತುರ್ವಿಧ |
| ೨೭೪— ೪ | .... | .... | ವಿರಲನೇಕ್ಕೃತಿಯ—ವಿರಲನೀಕ್ಕೃತಿಯ |
| ೨೭೭— ೫ | ... | ... | ಭಾದೆ—ಬಾಧೆ |
| ೨೭೭— ೪ | .... | –·– | ವಾಘ್ರ—ವ್ಯಾಘ್ರ |
| ೨೭೯—೨೧ | .... | ... | ಜಗಧೀಸಿ—ಜಗದೀಶ |



|| ಹರಿಃ ಓಂ ||

# ಕಾವ್ಯ ವಿಭಾಗ ೨

## ಶ್ರೀ ಹರಿದಾಸರ ನವರಸಾಲಂಕಾರಭರಿತ ಕಾವ್ಯ.

ಕನ್ನಡ ಕಾವ್ಯಾರಾಮದಲ್ಲಿ ಕುಕಿಲ ಕೋಕಿಲಗಳನೇಕ ಬಣ್ಣ ಬಣ್ಣದ ಹಣ್ಣು ಕಾಯಿಗಳಿಂದ ತುಂಬಿದ ಕನ್ನಡ ಉದ್ಯಾನದಲ್ಲಿ ಪಕ್ಷಿಸಂಕುಲದ ವೈವಿಧ್ಯಕ್ಕೆ ಕೊರತೆ ಇಲ್ಲ. ಕನ್ನಡ ಸಾರಸ್ವತೋದ್ಯಾನವು ಪಕ್ಷಿಗಳ ಇಂಚರದ ಸಂಚಯವಾಗಿದೆ. ಭಕ್ತಿ ಪಾರವಶ್ಯಗಳ ಸವಿಗನಸಿನಿಂದ ಪ್ರಚೋದಿತವಾಗಿ ಆಶುಕವಿತ್ವರೂಪದಲ್ಲಿ ದಾಸವರ್ಗವು ಲೋಕ ಸೇವೆಯನ್ನೆಸಗಿತು. ಹರಿದಾಸರ ಕಾವ್ಯಾಲಂಕಾರ ಶ್ರೀ ಹರಿಯ ನೂತನ ವಾದ ಶುಭ ಗುಣಾಲಂಕಾರಕ್ಕೆ ಸೇರಿ ಕಾವ್ಯದ ಸೊಬಗು ಮೇಲೆನಿಸಿತು.

( ಮಾನವೀಯ )

### ( ಆದರ್ಶ ) ಮಾದರಿಗಾಗಿ

ಅನಂತ ಕಥೆಯಲ್ಲಿ ಬೇರೆ ಬೇರೆ ಕೆಲ ಪದ್ಯಗಳು

### ವಾರ್ಧಿಕ ಷಟ್ಪದಿ

ಶ್ರೀ ರಮಣಿ ಸುಸ್ತನಗಳೆಂಬ ಕೋಕನಗಳಿಂ ।
ಸಾರ ಭಕ್ತಾವಳಿಯ ಹೃತ್ಕಮಲ ನಲಿದಾಡೆ ।
ಮಿರಿದಾನಂದದಿಂ ಸುಜನಭ್ರಮರಂಪಾಡೆ ದುರ್ಬುದ್ಧಿ
ಕುಮುದಬಾಡೆ ॥
ಘೋರ ದುರಿತಗಳೆಂಬ ಋಕ್ಷಗಳ ನಡಗಿಸುವ ।
ಮಾರಪಿತ ಶ್ರೀ ಮನೋಹರ ವಿರಲನಂಘ್ರಿನಖ ।
ನೂರೆಲೆ ಗೆಳೆಯನೆನ್ನ ಕುಮತಿ ತಮ ಪರಿಹರಿಸಿ ಸುಮತಿ ದ್ಯುತಿಯಂ
ನೀಯಲಿ ॥ ೧ ॥

೨

ಶ್ರೀಮದ್ರಮಾರಮಣ ಸಕಲಸದ್ಗುಣಪೂರ್ಣ ।
ತಾಮರಸ ಭವ ಮರುತ ದ್ವಿಜ ಫಣಿಪ ಹರ ದಿವಿಜ ।
ಸ್ತೋಮ ವಂದಿತ ಚರಣ ಸರ್ವೇಶ ಭವಹರಣ ಸ್ಥಿತಿಲಯೋದಯ
ಕಾರಣಾ ॥
ರೋಮ ರೋಮದೊಳಿಡಿದ ಜಾಂಡಕೋಟಿಗಳಿಹ್ಯ ಮ ।
ಹಾ ಮಹಿಮನಾದ ಮನೋಹರ ವಿಠಲನೆ ನಿಖಿಳ ।
ಕಾಮಿತಾರ್ಥಗಳಿತ್ತು ಸಲಹು ಶರಣರದಾತ ಶ್ರುತಿಗಾಥ
ಲೋಕನಾಥ ॥ ೨ ॥
ಸಾಕ್ಷಾಜಗನ್ಮಾತೆ ಪಂಕಜಭವಾತೀತೆ ।
ರಾಕ್ಷಸಾರಿಯದಯಿತೆ ನಿತ್ಯಸುಖ ಸಂಪೂರ್ತೆ ।
ಮೋಕ್ಷಪ್ರದಾತೆ ಮುಕ್ತಾಮುಕ್ತ ಗಣವಿನುತೆ ಕ್ಷೀರಾಬ್ಧಿ ಜಾತೆ ಖ್ಯಾತೆ ॥
ಈ ಕ್ಷೋಣಿಯೊಳ್ ನಿನಗೆ ಪತಿಯಾಗಿ ಮೆರೆವ ಕಮ ।
ಲಾಕ್ಷನ ಚರಿತ್ರೆಯಂ ವಿರಚಿಸುವ ಭಕ್ತನಂ ।
ನೀಕ್ಷಿಸು ಕೃಪಾವಲೋಕನದಿಂದಲನುದಿನಂ ಜ್ಞಾನಸಂಪದವನಿತ್ತು
॥ ೩ ॥
ಹರಣ ವೀಣೆಯ ಮಾಡಿ ರದನ ಮೆಟ್ಟಂಗೈದು ।
ವರಜಿಂಹ್ವೆಯಂತಂತು ಪಂಕ್ತಿಗಳ ನೆರೆಮಾಡಿ ।
ಸ್ಥಿರಬುದ್ಧಿಯೆಂಬಶ್ರುತಿರವನಂ ಬಲಿದೊತ್ತಿ ಸುಜ್ಞಾನ ಸ್ವರಗೂಡಿಸಿ ॥
ಪರಮಕೋವಿದ ಮನೋಹರ ವಿಠಲನಂತನ್ನ ।
ಕರುಣಪಾಣಿಗಳಿಂದ ಬಾರಿಸುತ್ತೀ ಕಥೆಯ ।
ನೊರದೆ ನಲ್ಲದೆ ವೆಗ್ಗಳಿಕೆ ಎನ್ನೊಶವಲ್ಲ ಸುಜನರು ಕೇಳಿರೆಲ್ಲ ॥ ೪ ॥

**ಶ್ರೀ ಕೃಷ್ಣ ಜಯಂತಿ ಕಥೆಯಲ್ಲಿ**

ಪುರುಹೂತಪಗೆಯ ಶರಪಾಶದಿಂ ಬಿಗಿವಡದು ।

ಗಿರಿಗಂಧ ಮಾದನವ ತಂದು ಸಂಜೀವನವನಿತ್ತು ಬದುಕಿಸಲು
ಕಂಡು ||

ಸಿರಿಮನೋಹರವಿರಲ ರಾಮಚಂದ್ರಂ ಮೆಚ್ಚಿ |
ಕರುಣದಿಂ ಸಂಜೀವ ಹನುಮಂತ ನಿವನೆಂದು |
ವರನಾಮವಿತ್ತ ನಿನಗನಿಲಜನ ವಂದಿಸುವೆ ಕರುಣಿಸೀಕೃತಿಗೆ
ಮತಿಯಾ || ೫ ||

ಪೊಳೆವ ಮಿಂಚುಗಳೈಸೆ ಕಣ್ಬೆಳಗಿದಲ್ಲ ಸ |
ನ್ಮೊಳಗುಗಳಿವೈಸೆ ಮಗುಮಣಿಯ ಸುಸ್ವರಮಲ್ಲ |
ತೊಳಗುವಮರೇಂದ್ರ ಕಾರ್ಮುಕ ವೈಸೆ ಕಂದನ ಸುಭ್ರೂಲತೆಗಳಲ್ಲ
ಮೆರವಾ ||

ಅಳಿಜಾಲ ವೈಸೆ ಕುಂತಳಜಾಲಮಲ್ಲ ನೈ |
ದಿಲೆಶಾಮನೈಸೆ ನೀಲಾಂಗ ನಿವನಲ್ಲೆನುತ |
ನಳಿನಾಕ್ಷಿಯರು ನಂದನಂದನ ಚಲ್ವಿಕೆಯು ವಿಧವಿಧದಿ ವರ್ಣಿಸಿದರು
|| ೬ ||

ಶ್ರೀ ಸುಮಧ್ವ ವಿಜಯ

ಹರಿಪಾದ ಸಂರತ ವಿಶಾರದಂ ವಾರಿದಂ |
ತೆರತೆರದ ಗೋಧಾರೆ ವಾರದಿಂ ಭಾರದಿಂ |
ವರವಿದ್ಯ ವಿದ್ಯುಪ್ರದೀಪಿತಂ ದಿಂಬ್ಮುಖಂ ಭೂರಿ ವೃಷ್ಟಿಯಗೈಯುತ
|| ೭ ||

ನಿರುತ ಭವಭಯ ಮಹಾ ಘರ್ಮಸಂತಪ್ತವಹ |
ಉರುಸದಂಘ್ರಿಪ ಮಂಡಲವ ಸಫಲ ಸುಮನಸಂ |
ಚಿರದಿ ಸಾಂದ್ರಾನಂದ ಮವಿಪಲ್ಲವಂ ಮಾಡೆ ಘನಘೋಷ
ಲೋಕತೋಷ ||

### ಶ್ರೀಹರಿ ವಾಯುಸ್ತುತಿಯಲ್ಲಿ

ಪುರಹೂತರಿಪು ಹಿರಣ್ಯಕನೆಂಬೊ ದೈತ್ಯಮದ ।
ಕರಿ ಘಟೆಯ ಕುಂಭಾದ್ರಿ ಶೀಳಲಿಕ್ಕಧಿಕ ಪಟು ।
ತರ ವಜ್ರದಂತೆ ಪ್ರತ್ಯೇಕಾಚರಿಸುವ ಶ್ರೀಮತ್ಕೇಸರಿ ಅಂಶನೆ ॥
ಅರಿಯ ದೂರದಿ ತರಿದ ಧ್ವಸ್ತವಿದ್ಯವನುಳ್ಳ ।
ಪರಮ ಶಾಂತಿಯ ತಾಳ್ದ ಪ್ರವಿತತ ಮನಸಿನಿಂದ ।
ಸುರನಿಕರ ಪೂಜಿಸುವ ಪ್ರತತ ಸುನಖಾವಳಿಯು ನಮ್ಮ ಸಂತತ
ಸಲಹಲಿ ॥ ೮ ॥

### ಶ್ರೀ ರಾಘವೇಂದ್ರ ಸ್ತೋತ್ರದಲ್ಲಿ

ಶ್ರೀ ಪೂರ್ಣಬೋಧ ಗುರುತೀರ್ಥ ಸುಪಯೋನಿಧಿಯ ।
ತಾಪಾರಗಂಡು ಸ್ಮರರಿಪುಮೂಕ್ಷ ವಿಷಮಾಂಬ ।
ಕಾ ಪಿನಾಕಿಯ ಶಿರವಸಾರಿ ಪೂರ್ವೋತ್ತರದ ಸಿದ್ಧಾಂತ
ಮೆಂಬೂರ್ಮಿಯಾ ।
ಅಪರಮಹಂಸ ಚಾರಾದಿ ದೇವಾಳಿಯಿಮ್ಮ ।
ಹಾಪೂಜೆಇಂದ ಸೇವಿತವಾದ ಪರಮಾತ್ಮ ।
ನಾಪಾದ ಪದ್ಮಗಳ ರಜವನ್ನು ಪ್ರಕ್ಷಾಲನಂಗೈದು ಲಗ್ನವಾಗಿ ॥ ೯ ॥
ಪರಿಪೂರ್ಣಕಾಂತಿಯಿಂ ಬುಧಗೆ ಗುರುಜನಕನಾ ।
ಗಿರುವ ಶಶಿಗುದಿ ಷಿಲಾಸ್ಪದ ಕ್ಷೀರ ಶರಧಿಯೊಳು ।
ನೆರದು ಮಾರಾರಿ ಜ್ಞಾನಾಕ್ಷ ಮುಕ್ಕಣ್ಣನ ಜಟಾಮಕುಟಮಂ ಚುಂಬಿಸಿ।
ಚರಿಪಹಂಸಗಳು ಪೂರ್ವೋತ್ತರ ತರಂಗಗಳ ।
ನೆರವಿನಿಂ ದೇವಾಲಿಯಿಂದ ಸೇವಿತವಾದ ।
ಪರಮಾತ್ಮನಂಘ್ರಿ ಕಮಲದೊಳುದಿಸಿ ಪ್ರಕ್ಷಾಲನಂಗೈದು
ಲಗ್ನವಾಗಿ ॥ ೧೦ ॥

**ಮುಂದೆ ಸರಿಯಾಗಿ ಒಂದೊಂದು ಕಾವ್ಯ ಕೊಡಲಾಗುವದು,**

# ಹರಿದಾಸರ ಕಾವ್ಯ ವಿಭಾಗ ೨

ಅಪರೋಕ್ಷ ಜ್ಞಾನಿಗಳಾದ ದಾಸರು ಅನೇಕ ಪ್ರೌಢ ಕಾವ್ಯಗಳನ್ನು ರಚಿಸಿದ್ದಾರೆ ಇದುವರೆಗೆ ಎಷ್ಟೋ ಜನರಿಗೆ ಗೊತ್ತೇ ಇಲ್ಲ ದಾಸರು ಪದಗಳನ್ನೇ ರಚಿಸಿರುವರಲ್ಲದೇ ನವರಸಾಲಂಕಾರಯುಕ್ತ ಕಾವ್ಯ ಅರಿಯರೆಂಬುದೇ ಜನರ ಭಾವನೆ ಶ್ರೀ ಪುರಂದರ ದಾಸರೇ ಅನೇಕ ಷಟ್ಪದಿ ಕಾವ್ಯಗಳನ್ನು ರಚಿಸಿರುವರೆಂದು ಆಧಾರಗಳಿವೆ. ಆದರೆ ದುರ್ದೈವದಿಂದ ದೊರೆತಿಲ್ಲ ಶ್ರೀಪ್ರಸನ್ನ ವೆಂಕಟದಾಸರು ನವರಸಾಲಂಕಾರಯುಕ್ತ ಅನೇಕ ಕಾವ್ಯಭಾಗ ರಚಿಸಿದ್ದಾರೆ ದಶಮಸ್ಕಂಧ ಭಾಗವತಾದಿ ೧-೨ ಗ್ರಂಥಗಳು ಹೊರಬಿದ್ದಿವೆ.

ಈಗ ಸುಮಾರು ೧೭೦-೧೭೫ ವರ್ಷಗಳ ಹಿಂದೆ ಮಾನವಿ ತಾಲ್ಲೂಕಿನಲ್ಲಿ ಬುದ್ದಿನ್ನಿ ದೇಸಾಯಿ ನಾರಾಯಣಪ್ಪನೆಂಬುವರು ಹರಿದಾಸ ಪಂಥದವರು ಬಹುಶಃ ಇವರು ಶ್ರೀ ಗೋಪಾಲದಾಸರ ಶಿಷ್ಯರೆಂದು ತೋರುತ್ತದೆ. ವಯಸ್ಸಿನಲ್ಲಿ ಶ್ರೀ ಜಗನ್ನಾಥದಾಸರಿಂದ ಹಿರಿಯರು ಶ್ರೀ ಜಗನ್ನಾಥದಾಸರ ಕಿಂತಲೂ ಮೊದಲಿಗೆ ಕಾವ್ಯಗಳನ್ನು ರಚಿಸುತ್ತಿದ್ದರೆಂದು ಗೊತ್ತಾಗುತ್ತದೆ ಸರಿಯಾದ ಕಾಲ ಗೊತ್ತಾಗಿಲ್ಲ. ಸಂಶೋಧನೆ ನಡದಿದೆ. ಇವರು ಗೌತಮ ಗೋತ್ರದ ವೈಷ್ಣವ ಬ್ರಾಹ್ಮಣರು ಗುರುಗಳಿಂದ ಮನೋಹರ ವಿಠಲನೆಂದು ಅಂಕಿತ ಪಡೆದಾರೆ ಎಷ್ಟೋ ನವರಸಾಲಂಕಾರ ಯುಕ್ತ ಕಾವ್ಯ ರಚಿಸಿದ್ದಾರೆ. ೧. ಶ್ರೀ ರಾಘವೇಂದ್ರ ಗುರುಸ್ತೋತ್ರ, ೨ ಶ್ರೀಕೃಷ್ಣ ಜಯಂತಿ ಕಥಾ, ೩ ಮನ್ಮಥವಿಲಾಸ, ಇವು ಮೂರು ನಮ್ಮಲ್ಲಿ ಮೊದಲಿಗೆ ಅಚ್ಚಾಗಿವೆ. ೪. ಶ್ರೀ ಹರಿವಾಯುಸ್ತುತಿ ಬಹು ಗಂಭೀರವಾಗಿ ರಚಿಸಿದ್ದಾರೆ. ೫ ಗಧಾ ಯುದ್ಧ ಪಂಚ ಪರ್ವ ಚಾಯಣಭಾರತವೆಂಬ ಕಾವ್ಯಕ್ಕೆ ೧೫೧ ಪದ್ಯಗಳು ಖಿಲವಾದುದರಿಂದ ರಸಭರಿತವಾಗಿ ರಚಿಸಿ ಪೂರ್ತಿಗೊಳಿಸಿದ್ದಾರೆ. ಸಂಕೋಚ ಭಾರತ ಕಾವ್ಯ ಒಂದಿದೆ ಅಲ್ಲದೇ ಈಗ ಪ್ರಕಟಿಸುವ ಶ್ರೀ ಅನಂತನ ಕಥೆ ಒಟ್ಟಿಗೆ ೧೦ ಸಂಧಿ ವಾರ್ಧಿಕ ಷಟ್ಪದಿಯಲ್ಲಿ ಶ್ರೀ ಹರಿಯು ವರ ಬಲದಿಂದ ರಚಿಸಿರುವೆವೆಂದ ಹೇಳಿದ್ದಾರೆ. ಸಂಸ್ಕೃತ ಕನ್ನಡ

ಹಳೆಗನ್ನಡ ಉದ್ಭಾವ ಪಾಂಡಿತ್ಯರಲ್ಲದೆ ಹರಿಪ್ರಸಾದೀಕವಾದ ಅಪರೋಕ್ಷ ಜ್ಞಾನಿಗಳ ವಾಣಿ ನವರಸಾಲಂಕಾರಭರಿತ ಮಹಾ ಪ್ರೌಢ ಕಾವ್ಯ ಪ್ರತಿ ಪದ್ಯದಲ್ಲಿ ಅನೇಕ ಅಲಂಕಾರ ಅರ್ಥಗರ್ಭ ಭಾವಗರ್ಭವನ್ನಿಟ್ಟಿದ್ದಾರೆ.

ಪ್ರಸ್ತುತ ೩ ಹಳೆಯ ಪ್ರತಿಗಳು ದೊರೆತವೆ ಅವುಗಳ ಮೇಲಿಂದ ಶುದ್ಧ ವಾಗಿ ಸಂಶೋಧಿಸಿ ಬುಡದಲ್ಲಿ ಕಠಿಣ ಶಬ್ದಾರ್ಥಗಳನ್ನು ತಿಳಿದಷ್ಟು ಕೊಡ ಲಾಗಿದೆ ಕಾವ್ಯಾಲಂಕಾರ ಛಂದಸ್ಸಾದಿ ವಿಭಾಗ ಹಿಂದಿನಿಂದ ಬರೆಯುವ ಶ್ರೀ ಜಗನ್ನಾಥದಾಸರ ಶ್ರೀ ಹರಿಕಥಾಮೃತಸಾರ ರುಚಿಸಿದ ನಂತರ ಅದರ ಮಹಿಮೆಯನ್ನರಿತು ಫಲಸ್ತುತಿ ಸಂಧಿ ರಚಿಸಿದ್ದಾರೆ ಅಚ್ಚಾಗಿದೆ. ಅಲ್ಲದೇ ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರೂ ಅಪರೋಕ್ಷಿ ಜ್ಞಾನಿಗಳಾದ ಶ್ರೀ ಪ್ರಾಣೇಶ ವಿಠಲರು ಇವರು ರಚಿಸಿದ ಶ್ರೀ ಕೃಷ್ಣಜಯಂತಿ, ಮನ್ಮಥ ವಿಲಾಸ ತಾವು ಸ್ವತಃ ಬರೆದಿಟ್ಟಿದ್ದಾರೆಂದ ಮೇಲೆ ಇವರ ಕವನವು ಜ್ಞಾನಿ ಗಳಿಂದ ಮಾನ್ಯವೆಂದು ಬೇರೆ ಹೇಳುವ ಕಾರಣವಿಲ್ಲ ಕಾವ್ಯದ ಪ್ರತಿಯೊಂದು ವರ್ಣನೆ ಅತಿ ಚಮತ್ಕಾರ ಶ್ರಾವ್ಯವಾಗಿ ಮನೋಹರವಾಗಿ ಆದ ರಮಣೀಯ ವಾಗಿವೆ ಭಗವಂತನಲ್ಲಿಯ ಹೆಚ್ಚಿನ ಭಕ್ತಿ ತುಂಬಿ ತುಳುಕುತ್ತಿದೆ. ಪ್ರತಿ ಯೊಂದು ಅಲಂಕಾರಗಳು ಶ್ರೀ ಅನಂತನ ಶುಭಗುಣಾರ್ಣವನ್ನು ಪೊಂದಿದು ದಕ್ಕೆ ಕಾವ್ಯದ ಸೊಬಗು ಮತ್ತೂ ಮೇಲಾದುದು. ಇಂಥವು ಕಾವ್ಯಗಳು ಬೈಲಿಗೆ ಬರಬೇಕೆಂದು ಅನೇಕರ ಅಭಿಪ್ರಾಯದಂತೆ ಕ್ರಮವಾಗಿ ಪ್ರಕಟಿಸ ಲಾಗುತ್ತದೆ ಒಬ್ಬ ಮಹನೀಯರು ಈ ಕಾವ್ಯದಲ್ಲಿ ಶೈಥಿಲ್ಯವಿದೆ ಎಂದು ಸೂಚಿಸರುವರು ಏನು ಶೈಥಿಲ್ಯವೆಂಬುದು ಅವರಿಂದ ಹೇಳಲಿಕ್ಕಾಗದು ವಿವರ ಸೂಚಿಸಿದರೆ ಅವರ ಮನೋಶೈಥಿಲ್ಯವೆ ಹೊರಬೀಳುವದು. ಆಗಲಿ ಈಗ ಪೀಠಿಕಾ ಸಂಧಿ ನಕ್ಷತ್ರಮಾಲಿಕಾ ೨೭ ಷಟ್ಪದಿಗಳನ್ನು ಸಜ್ಜನರ ಮುಂದಿರಿಸಿದೆ ಈ ಕಾವ್ಯಾಮೃತಾಪಾನ ಮಾಡಿ ಆನಂದ ಪಡೆಯರೆಂದು ಬಿನ್ನೈಸುವೆ

—ಸಂಪಾದಕ

# ಕಾವ್ಯ ವಿಭಾಗ ೨

ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ

ಶ್ರೀ ಗುರುರಾಜೋ ವಿಜಯತೇ

ಶ್ರೀ ಮನೋಹರ ವಿಠಲ ವಿರಚಿತ

ಶ್ರೀ ಭವಿಷ್ಯೋತ್ತರ ಪುರಾಣೋಕ್ತ, ನವರಸಾಲಂಕಾರಯುತ ಕಾವ್ಯ

## ಶ್ರೀ ಅನಂತನ ಕಥಾ

ಶ್ರೀ ಗುರುಭ್ಯೋನಮಃ

**ವಾರ್ಧಿಕ ಷಟ್ಪದಿ ರಾಗ ಕಲ್ಯಾಣಿ**

ಶ್ರೀರಮಣಿ ಸುಸ್ತನಗಳೆಂಬ ೧ಕೋಕನಗಳಿಂ
ಸಾರ ಭಕ್ತಾವಳಿಯ ಹೃತ್ಕಮಲಸಂದಾಸ
ವಿಸಾರಿದಾನಂದದಿಂ ಸುಜನ ಭ್ರಮರಂ ಪಾಡೆ-
ದುರ್ಬುದ್ಧಿ ಕುಮುದ ಬಾಡೆ||
ಘೋರ ದುರಿತಗಳೆಂಬ ೨ಋಕ್ಷಗಳ ನಡಗಿಸುವ
ಮಾರಪಿತ ಶ್ರೀ ಮನೋಹರ ವಿಠ್ಠಲಂಘ್ರಿನಖ
೩ನೂರೆಲೆ ಗೆಳೆಯನೆನ್ನ ಕುಮತಿತಮ ಪರಿ-
ಹರಿಸಿ ಸುಮತಿದ್ಯುತಿಯಿಂದಲಿ ೧

**ಸೂಚನೆ**

ಶ್ರೀಮದ್ರಮಾರಮಣ ಸಕಲ ಸದ್ಗುಣ ಪೂರ್ಣ
ತಾಮರಸ ಭವಮರುತ ದ್ವಿಜ ಫಣಿಪ ಹರದಿವಿಜ
ಸ್ತೋಮವಂದಿತಚರಣ ಸರ್ವೇಶಭವಹರಣ-
ಸ್ಥಿತಿ ಲಯೋದಯ ಕಾರಣ||

---

೧ಕೆಂಪುಕಮಲ ೨ನಕ್ಷತ್ರಗಳ
೩ನೂರೆಲೆ—ಶತಪತ್ರ—ಕಮಲ ಗೆಳೆಯ—ಸೂರ್ಯ

ರೋಮ ರೋಮದೊಳಡಿದಜಾಂಡ ಕೋಟಿಗಳಿಹ ಮ
ಹಾಮಹಿಮನಾದ ಮನೋಹರ ವಿಟ್ಠಲನೆ ನಿಖಿಳ
ಕಾಮಿತಾರ್ಥಗಳಿತ್ತು ಸಲಹೊ ಶರಣರ ದಾತ-
ಶ್ರುತಿಗಾಧ ಲೋಕನಾಧ ೨

## ಶ್ರೀ ಲಕ್ಷ್ಮೀದೇವಿಯರ ಸ್ತೋತ್ರ

ಸಾಕ್ಷಾಜಗನ್ಮಾತೆ ಪಂಕಜ ಭವಾತೀತೆ
ರಾಕ್ಷಸಾರಿಯ ಪ್ರೀತೆ (ದಯಿತೆ) ನಿತ್ಯ ಸುಖಸಂಪೂರ್ತೆ
ಮೋಕ್ಷಪ್ರದಾತೆ ಮುಕ್ತಾಮುಕ್ತ ಗಣವಿನುತೆ
ಕ್ಷೀರಾಬ್ಧಿ ಜಾತೆ ಖ್ಯಾತೆ||
ಈ ಕ್ಷೋಣಿಯೊಳ್ ನಿನಗೆ ಪತಿಯಾಗಿ ಮೆರವ ಕಮ
ಲಾಕ್ಷನ ಚರಿತ್ರೆಯಂ ವಿರಚಿಸುವೆ ಭಕ್ತನಂ
ನೀಕ್ಷಿಸು ಕೃಪಾವ ಲೋಕನದಿಂದಲನುದಿನಂ ಜ್ಞಾನ
ಸಂಪದವನಿತ್ತು ೩

## ಶ್ರೀ ಬ್ರಹ್ಮದೇವರ ಸ್ತೋತ್ರ

ಸರಸಿಜಾಸನ ಸಕಲ ಸೃಷ್ಟಿಕಾರಣವಾಣಿ
ಯರಸ ವಿಸ್ಮಯಚರಿತ ಸತ್ವ ಗುಣಗಣಭರಿತ
ಪರಮ ಪಾವನರೂಪ ಸತ್ಯಲೋಕದಧಿಪ (ಭೂಪ)
ಪರಿಪೂರ್ಣ ಪ್ರತಾಪ||
ವರಚತುರ್ಮುಖ [1]ಶ್ರುತಿ ಕಲಾಪ [2]ಸ್ವರ್ಣೋದರನೆ
ಪುರುಷೊತ್ತಮನ ನಾಭಿವನಜ ಸಂಭವ ದಿವಿಜ
ಹರ ಪುರಂದರವಿನುತ ಪರಮೇಷ್ಠಿ ನಿತ್ಯಮಗೆ
ಜ್ಞಾನ ಸೌಭಾಗ್ಯ ಸುಖವ ೪

## ಶ್ರೀ ಪ್ರಾಣದೇವರ ಸ್ತೋತ್ರ

ಶ್ರೀವರನ ಚರಣಾರವಿಂದ ಮಕರಂದ ಮಂ
ಸೇವಿಸುವ ಭೃಂಗ ದೇವೋತ್ತುಂಗ ಖಳಭಂಗ

---

೧ ಸಂಶತವೇದ ಪಾರಾಯಣ ೨ ಹಿರಣ್ಯಗರ್ಭ = ಬ್ರಹ್ಮ

೧ ಭಾವಜಾಂತಕ ಕೋಟಿ ನಮುಘನತ್ರಾಣ
ಭಾರತಿ ರಮಣ ಸುಪ್ರವೀಣ॥
ದೇವ ತವ ಸಂಸ್ಮರಣ ಮಾತ್ರದಲಿ ಜೀವರ್ಗೆ
ಕೋವಿದತ್ವಾರೋಗ್ಯ ಬಲಧೈರ್ಯ ಸಿರಿಕೀಸೌ
ಖ್ಯಾವಳಿಗಳೊದಗಿ ಸನ್ಮತಿ ತಾಳ್ವರೆಂದು ತ್ವತ್ಪದಗಳಿ
ಗೆ ನಾನಮಿಸುವೆ ೫

## ಶ್ರೀ ಮಧ್ವಾಚಾರ್ಯರ ಸ್ತೋತ್ರ

ಮೇದಿನಿಯು ಮೇಲುದಿಸುತಚ್ಯುತನೆ ನಿತ್ಯಮಹ
ದಾದಿ ಕಾರಣ ಸಚ್ಚಿದಾನಂದ ಗುಣಪೂರ್ಣ
ವೇದ ಪ್ರತಿ ಪಾದ್ಯಬ್ಜ ಭವ ಭವಾಮರ ಮಧ್ಯ
ದೊಳಗೆ ಪರದೈವವೆಂದು॥
ಭೇದಜ್ಞಾನವನರುಹಿ ಸಿದ್ಧಾಂತ ಶಾಸ್ತ್ರದಿಂ
ವಾದಿಗಳ ತರಿದು ಸುಜನರ ರಕ್ಷಿಸಿದ ಪೂರ್ಣ
ಬೋಧ ಮುನಿರಾಯ ಮಧ್ವಾಚಾರ್ಯ ಗುರುವರ್ಯ
ಸತತೆನ್ನೆ ಸಲಹೋಜೀಯ ೬

## ಸರಸ್ವತೀದೇವಿಯರ ಸ್ತೋತ್ರ

ವಾಣಿ ಸಕಳಾಗಮ ೨ ಪ್ರವೀಣೆ ೩ ಕಿಸಲಯಪಾಣಿ
ಸ್ಥಾಣು ಗೀರ್ವಾಣ ಮುಖ್ಯರ ಸೇವೆಕೊಂಬ ಬ್ರ
ಹ್ಮಾಣಿ ಗುಣಪೂರ್ಣೆ ಕಲ್ಯಾಣಿ ೪ ಸುಶ್ರೋಣಿ ಫಣಿವೇಣಿ
ಶುಕವಾಣಿ ಜಾಣೆ॥
ಕ್ಷೋಣಿಯೊಳ್ ಕಾವ್ಯಮಂ ವಿರಚಿಸುವ ಕವಿಜನ
ಶ್ರೇಣಿ ಮೆಚ್ಚುವತೆರದ ಲೆನ್ನ ವದನಾಬ್ಜದೊಳು
ತ್ರಾಣಿ ನೀನೆಲಸಿ ಕರುಣಾಮೃತವಸಲೆ ಕುಡಿಸಿ
ಪಾಲಿಪದು ಮತಿಯನೂಸಿ ೭

---

೧ ಕಾಮಹರ = ಮಹರುದ್ರ
೨ ಸಕಲವೇದ ಬಲ್ಲವಳು
೩ ಎಳೆಕಮಲ (ತಳಿರು) ಪಿಡವಳು
೪ ಒಳ್ಳೇ (ಸಣ್ಣ) ಕಟಿವುಳ್ಳ

## ಶ್ರೀ ಭಾರತೀ ದೇವಿಯರ ಸ್ತೋತ್ರ

ಶ್ರೀಮದಷ್ಟೈಶ್ವರ್ಯ ಸಂಪನ್ನೆ ಗುಣರನ್ನೆ
ಸೋಮ ಸಮವದನೆ ಮಂಗಳಗಾತ್ರೆ ಸುರಸ್ತೋತ್ರೆ
ಕಾಮಜನಕನ ಪಾದಯುಗ ಭಕ್ತಿಯಾಸಕ್ತೆ ಈವ
ಭಾರತಿ ಶರಣರಾ||
ಪ್ರೇಮಿಯೆಂತೆಂಬ ವಾಣಿಯ ಕೇಳಿ ಮುದತಾಳಿ
ನಾಮನದಿ ತವ ಪದವ ನರ್ಚಿಸುತ ಮೆಚ್ಚಿಸುತ
ಕಾಮರಸನಯನಂ ನುತಿಗೈವೆ ವಾಗ್ದೇವಿ
ತಾ ಎನಗೆ ಮತಿಯೆ ತಾಯೆ ೮

## ಶ್ರೀ ಮಹರುದ್ರದೇವರ ಸ್ತುತಿ

೧ಗೂಢಪದದವನಿಂದ ಹರಣಂಮಂತೊರೆದವಗೆ
ರೂಢಿಯೊಳ್ ತತ್ವಮಂ ೨ಪೇಳ್ದವನ ಜನಕನಂ
ಬೇಡಿಕೊಂಡು ೩ತನಗೆ ತನುಜರಂ ಪಡೆದವನ
೪ಭ್ರಾತುನಾ ಹಿರಿಯ ಮಗನ||
ಕೂಡೆ ಮತ್ಸರ ಬೆಳಸಿ ಮದದಿಂದ ನೊಕ್ಕಿರ್ಪ
ಮೂಢಖಳನಂ ತರಿಸಿ ಭೂಭಾರವಿಳುಹಿಸಿದ
ಈಡಿಲ್ಲದ ಚ್ಯುತನ ಸರ್ವದಾ ಪೂಜಿಸುವ
ಗಿರಿಜೇಶ—ಬಿಡದೆ ಸಲಹೊ ೯

## ಶ್ರೀ ಗಣೇಶನ ಸ್ತೋತ್ರ

ಕರಿರಾಜನಾನ್ಯದಂತೊಪ್ಪುವ ಮುಖಾಬ್ಜದಿಂ
ಸುರರಾಜನಾಯುಧವ ಪೋಲ್ವದಂತಗಳಿಂ
ಹರಿರಾಜನೋಲ್ ಕಾಂತಿಯಿಂದ ರಂಜಿಸುತಿರ್ಪ
ಮುಕುಟ ಕುಂಡಲಗಳಿಂದ||

---

೧ ಸರ್ಪನಿಂದ
೨ ದೇಹಬಿಟ್ಟ ಪರೀಕ್ಷಿತಗೆ
೩ ಶುಕಜನಕ ವೇದವ್ಯಾಸ
೪ ಧೃತರಾಷ್ಟ್ರ ಪುತ್ರ ದುರ್ಯೋಧನ

ಪರಿಶೋಭಿಸುವ ಉ(ಪೊ)ಡೆಗೆವ್ಯಾಳನಂ ಬಿಗಿದಿರ್ದ
ಕರಚತುಷ್ಟಯ ವಿನಾಯಕ ದೇವ ನರಭುಜಗ
ವರದಾಯಕನೆ ತ್ವತ್ಪದಾಂಭೋಜಕೆರಗುವೆಂ
ನಿರ್ವಿಘ್ನವೀವುದೆಮಗೆ ೧೦

**ಗರುಡ ಶೇಷಾದಿ ಸಮಸ್ತ-ದೇವತೆಗಳ ಸ್ತೋತ್ರ**

೧ಪತ್ರೀಂದ್ರ ೨ಫಣಿರಾಜ ನಿರ್ಜರಾಧಿಪನೆನಿಪ
೩ಸುತ್ರಾಮ ರವಿಚಂದ್ರ ಶಿಖಿಕಾಲ ಮನು ವಸು ವಿ
ಚಿನ್ರ ತಪಗೈವ ಮುನಿಸಿದ್ಧ ಗಂಧರ್ವರ್ಗೆ—
ತಾರತಮ್ಯದಲಿ ನಮಿಸಿ
೪ಮಿತ್ರ ಶತಸಂಕಾಶನಾದ ನಂತನ ಸು ಚಾ
ರಿತ್ರಮಂ ವಿರಚಿಸುವೆ ಮೋಹದಿಂದನುದಿನಂ
ಪುತ್ರನಂ ಮಾತೆ ಪೊರವಂತೆನ್ನ ವಚನಗಳ-
ಪೋಷಿಸಿರಿ ದೋಷ ಕಳೆದು ೧೧

**ಶ್ರೀ ಜಯತೀರ್ಥರ ಸ್ತೋತ್ರ**

ಶ್ರೀಮಧ್ವರಾಯ ಗುರುವರ್ಯರ ಮತಾಂಬೋಧಿ
ಸೋಮನೆಂದೆನಿಸಿತತ್ಕೃತಿ ಶಾಸ್ತ್ರಸುಧಿಗೆ ಸು
ತ್ರಾಮನೆಂದೆನಿಸಿ ವೈಷ್ಣವ ಸುಸಿದ್ಧಾಂತ ಮತ
ಸ್ಥಾಪನಾಚಾರ್ಯನೆನಿಸಿ||
ಆ ಮಹಾನಿಖಿಳ ಗ್ರಂಥಕೆ ಟೀಕನುಂ ರಚಿಸಿ
ರಾಮ ಮೂರ್ತಿಯ ಭಜಿಸಿ ಶೇಷಾಂಶನೆಂದೆನಿಸಿ
ಕಾಮಗಳ ಜೈಸಿದ ಮಳಖೇಡ ಪುರವಾಸಿ
ಜಯರಾಯನಾನಮಿಪೆ ತುತಿಸಿ ೧೨

**ಶ್ರೀ ವ್ಯಾಸರಾಯರ ಸ್ತುತಿ**

ಧರಣಿಯೊಳು ವಿಬುಧರ್ಗೆ ಬಯಸಿದಿಷ್ಟವ ನೀವ
ಸುರಧೇನು ಕಲ್ಪತರು ಚಿಂತಾಮಣಿಗಳಂತೆ

---

ಗರುಡ ೨ಶೇಷ ೩ಇಂದ್ರ ೪ಕೋಟಿ ಸೂರ್ಯಪ್ರಭಾ

ಮೆರೆವನ್ಯಾಯಾಮೃತಂತರ್ಕ ತಾಂಡವ ಚಂದ್ರಿಕೆ
ಗಳಂದು ೧ಜಸ ಪಡೆಯಲು||
ಎರಡೊಂದು ಗ್ರಂಥಗಳ ನಿರ್ಮಿಸುತ ಕುಮತಗಳ
ಮುರಿದು ಜಸ ಪಡೆದ ಪ್ರಲ್ಹಾದಾಂಶನಾದ ಗುರು
ವರ ವ್ಯಾಸ ಮುನಿರಾಯ ಶ್ರೀಕೃಷ್ಣಗತಿ ಪ್ರೀಯ
ಸನ್ಮತಿಯ ಪಾಲಿಸಯ್ಯಾ ೧೩

## ಶ್ರೀ ಗುರು ರಾಘವೇಂದ್ರರ ಸ್ತೋತ್ರ

ಶ್ರೀಪೂರ್ಣ ಪ್ರಜ್ಞ ತೀರ್ಥರ ದಯಾಪಾಂಗದಿಂ
ತಾಪತ್ರಯಂ ಗೆಲ್ದು ತುರ್ಯಾಶ್ರಮಂ ತಾಳ್ದು
ಶಾಪವರಗಳ ನೀವ ಶಕ್ತಿಯಿಂಪಡೆದು ವರಯೋಗ
ಮಾರ್ಗವನೆ ಪಿಡಿದು||
ಕಾಪಾಡಿ ಬುಧಜನರ ಸಿದ್ಧಾಂತ ಶಾಸ್ತ್ರಗಳ
ಸ್ಥಾಪಿಸುತ ದುರ್ಮಾಯಿಗಳ ಮುರಿದು ಮೌನಿಕುಲ
ದೀಪಸದ್ಗುಣಸಾಂದ್ರ ಹರಿಮತಾಂಬುಧಿ ಚಂದ್ರ
ಪಾಹಿಗುರು ರಾಘವೇಂದ್ರ ೧೪

## ಶ್ರೀ ವಿಜಯದಾಸರ ಸ್ತೋತ್ರ

ದ್ವಿಜ ಕುಲದೊಳವತರಿಸಿ ತೀರ್ಥಯಾತ್ರೆಯ ಚರಿಸಿ
ತ್ರಿಜಗವಂದ್ಯನ ಭಜಿಸಿ ವಿಷಯಾದಿಗಳ ತ್ಯಜಿಸಿ
ಕುಜನ ಸಂಗವ ತೊರೆದು ವೈರಾಗ್ಯದಿಂ ಮೆರೆದು-
ಕಾಮಾದಿಗಳನು ಜರಿದು||
ರಜರಹಿತ ಕವನಗಳ ಪದ ಪದ್ಯಮಂ ಬಹಳ
ಸೃಜಿಸಿ ಶಿಷ್ಯರಿಗೊರದು ಕಾರುಣ್ಯದಿಂ ಪೊರೆದ
ವಿಜಯ ವಿಟ್ಠಲ ದಾಸರಂಘ್ರಿಸು ವಿಲಾಸದಿಂ-
ಸ್ಮರಿಸುತೀಕೃತಿಯ ಪೇಳ್ವೆ ೧೫

---

೧ಜಸ = ಯಶ = ಕೀರ್ತಿ

## ಶ್ರೀ ಗೋಪಾಲದಾಸ ಸ್ತುತಿ

ಭೂತ ಭವಿಷ್ಯ ದ್ವರ್ತಮಾನ ನಿಜಶಿಷ್ಯಾದಿ
ವ್ರಾತ ಕರುಹುತ ಹರಿಯ ಸದ್ಗುಣ ಮಹಾಮಹಿಮೆ
ಗೀತ ಪ್ರಬಂಧ ಕವಿತಾ ಚಮತ್ಕಾರದಿಂ ಪದ-
ಸುಳಾದಿಗಳಿಂದಲಿ||
ವಾತ ಜಾತನ ಮತವ ಪೊಂದಿಕೊಂಡಾಡುತಲೆ
ಖ್ಯಾತಿಯಾಗಿರ್ದ ಶ್ರೀ ಗೋಪಾಲ ವಿಟ್ಠಲನ
ಪ್ರೀತಿ ದಾಸರ ಪಾದ ಪಂಕಜವ ನನುದಿನಂ ಸ್ಮರಿಸು
ತೀ ಕಥೆ ಪೇಳ್ವೆನು ೧೬

## ತಂದೆ ತಿರುಮಲರಾಯನ ಸ್ತುತಿ

ರೂಪಗುಣ ಸುಜ್ಞಾನ ಧೃತಿ ಶಾಂತಿ ಕೀರ್ತಿ ಪ್ರ
ತಾಪ ಶಮದಮ ಪುತ್ರ ಸಂಪತ್ಕಳತ್ರದಿಂ
ಈ ಪೊಡವಿಯೊಳ್ ಜಸಂ ಬಡೆದವನ ದೆಶೆಯಿಂದ
ಲೆನ್ನ ತನು ಸಂಜನಿಸಿತು||
ಆ ಪುಣ್ಯ ಪುರುಷ ಮಜ್ಜನಕ ತಿರ್ಮಲರಾಯ
ನಾಪರಮ ಪಾವನಡಿದಾವರಿಯ ಧ್ಯಾನಂ ಸ
ದಾ ಪೊರೆಯಲೆನ್ನ ಹೃದ್ವನಜದೊಳಗಿರ್ದೆನಗೆ ಸನ್ಮಂಗ
ಳವ ನೀವುತ ೧೭

## ವಿದ್ವಜ್ಜನ ಸ್ತುತಿ

ಭೂವಲಯದೊಳಗುಳ್ಳ ವಿದ್ವಜ್ಜನಕೆ ದೈನ್ಯ
ಭಾವದಿಂದೆರಗುತಾನಂತನ ಕಥಾಸಾರ
ಸಾವಧಾನದಿ ಪೇಳ್ವೆ ಬುದ್ಧಿಯಿದ್ದ ನಿತದಿಂ (ರಿಂ)
ವಾರ್ಧಿಕ ಛಂದದಿಂದ
ಕೋವಿದರ್ನೋಡಿ ೧ವಡಿ ೨ ಪ್ರಾಸು ೩ ಲಕ್ಷಣ ೪ ಗಣಂ
ಭಾವರಸ ಶೃಂಗಾರ ಮಿಲ್ಲದಿರೆ ಸಂಗಡಿಸಿ (ಸಮ್ಮತಿಸಿ)

5) ೧ ರಿಂದ ೪ (ಮುಂದಿನ ಪುಟ ನೋಡಿ)

ಪಾವನಂಗೈದು ಮತ್ಸರ ತೊರೆದು ಕಿವಿದೆರವು
ತಾಲಿಪುದು ರಸಿಕರೆಲ್ಲ ೧೮

೫ ಸ್ವಾತಿ ವರುಷದ ಬಿಂದು ಶುಕ್ತಿಯೊಳ್ ಬೀಳೆ ಪೊಸ
ಜಾತಿ ಮುತ್ತಾಗುವ ೬ ದಟವಿಜಾಳಿಯೊಳುರಳೆ
ನೂತನ ಸುಘನಸಾರ ವಾಗುವದು ನಿಶ್ಚಯಂ ತಿಳಿಯು
ಲಾಡಿವ್ಯವನಿಯು
ಭೂತಳದೊಳಹಿ ಮುಖವ ಸಾರೆ ವಿಷವಹುದು ವಿ
ಖ್ಯಾತ ವೃಷ್ಟಿಗೆ ನೋಡೆ ಕುಂದಹದೆ ಕವಿತೆಯುಂ
ಪಾತಕಿಗಳರಿಯದಲೆ ನಿಂದಿಸಿದರೇ ೭ ನೂಣೆ ವೇಳ್ದವಗೆ
–ಬುಧರಾಲಿಸಿ ೧೯

೮ ರಾಕೇಂದು ಬಿಂಬಮಂ ಚೋರ ದೂಷಿಸಿದಡಂ
೯ ಲೋಕಾಕ್ಷನಂ ಸ್ವೈರಿಸದೆ ಘೂಕ ಪಳಿದಡಂ
೧೦ ಕಾಕಾಳಿಗಳ್ಮಧುರ ತರವಾದ ಚೂತಫಲ
ನಿಂದಿಸಿಪದೇನಪ್ಪುದು||
ಶ್ರೀಕಾಂತಸಂತನ ಕಥಾ ರಸಾಯನಸ್ವಾದ
ವೀ ಕುಮತಿ ಮನುಜರೇನರಿವರೈ ನಾತ್ವಿ
ಕಾಕೇಕ ಚಿತ್ತದಿ ಶ್ರವಣವಂ ಗೈಯ್ಯುತಿಹ
ಪರಮೋಳತಿ ಸೌಖ್ಯಮಂ ಪಡೆವರು ೨೦

---

೧ ವಡಿ–ಶ್ಲೋಕದ ಪಾದ-ನಾಲ್ಕನೇ ಒಂದು ಭಾಗ. ಗಣ ಈ ಪ್ರತಿಗಣದ ಮೊದಲನೇ ಅಕ್ಷರ ಒಂದೇ ಯಾಗಿ ಬರುವುದು. ಇದು ಯತಿಯನ್ನು ಸೂಚಿಸುವದರಿಂದ ಇದು ಸತ್ಯ ಯತಿ ಎಂದು ಹೇಳುವರು.

೨ ಪ್ರಾಸು–ಆವೃತ್ತಿ ಇದು ವರ್ಣಗಳು ಮಾತ್ರ ಆವರ್ತವಾದರೆ ಪದಾಸು ಪ್ರಾಸವು ಎಂದು ಎರಡು ವಿಧ. ಪದ್ಯದ ಪ್ರತಿ ಪಾದದಲ್ಲಿಯೂ ೧–೨ ನೇ ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವದು. ಇದು ಸಿಂಹ ಮೊದಲಾದ— ಆರು ವಿಧ.

೩ ಲಕ್ಷಣ–ಕಾವ್ಯದ ರೀತಿ, ಲಕ್ಷಣ, ಪ್ರಕೃತಿ ಪ್ರತ್ಯಯ ವಿವರ, ವ್ಯಾಕರಣ ಸೂಚನೆ ಇತ್ಯಾದಿ.

ವಿಷವಮೃತ ವಾಕ್ಯಗಳಿಂದ ಲೇಸಾಹುದಾ
ವಿಷ ಪುಂಜನಾದ ಶೇಷನ ಮೇಲೆ ಮಲಗಿರ್ಪ
ಬಿಸಿಜಾಕ್ಷಗೆನ್ನ ವಿಷ ವಚನ ತಾಗುವದೆ ಪಿಯೂಷಮಂಸುರರಿಗಿತ್ತಾ
ಅಸಮಪಾಲ್ಗಡಲೊಡೆಯ ಗೆನ್ನ ಮಾಧುರ್ಯ ನುಡಿ
ಹಸನದಿಂದೇನಹುದು ಸುಖಪೂರ್ಣ ನಿರ್ದೋಷ
ವಸುದೇವಸುತ ತನ್ನ ನೆಂತಾದಡಂ ತುತಿಸೆ ಸಂತಸ
ದೊಳವರ ಪೊರೆವ ೨೧

ಲೇಸುಹೊಲ್ಲೆಗಳಾವು ದಾವಗಂ ಬಿಡದೆ ಸ
ರ್ವೇಶನ ಸುನಾಮ ಕೀರ್ತನೆ ಮಾಡು ತೊಲಿದು ಸುಖ
ಸೂಸುವ ಜನರ್ಗೆಲ್ಲಿ ವಿಷವಾಕ್ಯದಟ್ಟುಳಿಯು—
ಪಾಪಲೇಪಗಳಿಲ್ಲವೋ||
ಲೇಸಲ್ಲದಲಿ ಮತ್ತೆ ಕೇಡುಂಟೆ ಶ್ರೀಹರಿಯ
ದಾಸರಿಗೆ ಜಗದೊಳೆಂದೆಂದು ತನ್ನಂಸ್ತುತಿಸು
ವಾಸಜ್ಜನರ ವಚನ ದೋಷಗಳ ನೀಕ್ಷಿಸದೆ
ಸಲಹುವ ರಮಾರಮಣನು ೨೨

ಕುಕ್ಷಿತದ ಧ್ವನಗಳ ಸಮಸ್ತವನಂ ಮಾಳ್ಪ
ದುಶ್ಚೇಷ್ಟೆಯುಳ್ಳ ಮನುಜಗೆ ವಿಷವಚನ ಭಯ
ದುಶ್ಚಿತಗಳೆಲ್ಲ ಹೊದ್ದುವವು ದಿಟ ಸಂತತಾ ಹರಿ-
ಯಂಘ್ರಿ ಕಮಲದಲ್ಲಿ||

---

೪ ಗಣ-ವರ್ಣಗಣ ಮಾತ್ರಾಗಣ ಅಂಶಗಣ ಹೀಗ ಮೂರು ಅಕ್ಷರಗಳು. ಮಾತ್ರಾವೃತ್ತದಲ್ಲಿ ನಾಲ್ಕು ಮಾತ್ರೆಗಳು. ಕಲ ನಿಯಮಾನುಸಾರ ವಿಂಗಡಿಸಿದ ಅಕ್ಷರಗಳ ಗುಂಪು.

೫ಸ್ವಾತಿಮಳೆ ಹನಿ ಕಪ್ಪೆಚಿಪ್ಪಿನಲ್ಲಿ ಬಿದ್ದರೆಮುತ್ತಾಗುತ್ತದೆ. ಉತ್ತಮಅದೇ.

೬ ಸ್ವಾತಿಹನಿ ಅಟವಿಬಾಳೆಯಲ್ಲಿ ಬಿದ್ದರೆ ಘನಸಾರಕ ರ್ಪೂರವಾಗುತ್ತದೆ. ಮಧ್ಯಮ-ಅದೆ ಸ್ವಾತಿಮಳೆ ಹನಿ-ಅಹಿ-ಸರ್ಪದ ಮುಖದೊಳಗೆ ಬಿದ್ದರೆ ವಿಷವಾಗುತ್ತದೆ. ಆದರೆ ನಿರ್ದುಷ್ಟವಾದ ಸ್ವಾತಿಮಳೆ ಹನಿಗೆ ಏನಾದರೂ ಕುಂದು ಬರುವುದಿಲ್ಲ.

೭ ಊಣೆ-ನ್ಯೂನತೆ ಕೊರತೆ.

೮ ೯ ಂದ್ರಬಿಂಬ-ಚಂದ್ರಮಂಡಲ. ೯ ಸೂರ್ಯ. ೧೦ ಕಾಗೆಗಳ ಸಮೂಹ

ನಿಶ್ಚಯ ಜ್ಞಾನದಿಂ ಧೃಡಭಕ್ತಿ ಮಾಡುವ ವಿ
ಪಶ್ಚಿತರ ಕರುಣಾ ಕಟಾಕ್ಷಸುಬಲ್ಪಿಂದ
ನಿಶ್ಚಿಂತ ಶ್ರೀಮನೋಹರ ವಿಟ್ಠಲನ ತುತಿಸುವ-
ಗಿಲ್ಲ--ವಾಗ್ದೋಷವು ೨೩

ಧರೆಯೊಳತಿ ಮಾನದಿಂ ಮಾನವಿಯ ದೇಶ ಕುಲ
ಕರಣಿ ೧ಪೂರ್ವಾರ್ಧಶತ ಪಂಚ ಸಂವತ್ಸರಂ
ಪರಮ ಸುಖದಿಂ ಬಾಳ್ದು ಮರ್ತ್ಯಲೋಕವನುಳಿದು
ಸುರರ ದರುಶನಕೆ ದಿವಿಗೆ||

ವರಚಿತ್ರಭಾನು ಸಂವತ್ಸರದ ಕಾರ್ತಿಕ
೨ಕರಿಯ ಪಕ್ಷದ ಚತುರ್ದಶಿ ಭಾನುವಾರದಲಿ
ವರ ಕಾವ್ಯ ಪೇಳಿದಂ ಶ್ರೀಪದ್ಮನಾಭಯುತಿ
ಪುಣ್ಯದಿನಜ್ಯೋದ್ಯಮೆನಲು ೨೪

ಲೋಕಪ್ರಸಿದ್ಧ ಮಾನವಿ ದೇಶ ಕುಲಕರಣಿ
೩ನಾಕಾಧಿಪತಿಗೆ ಮುಳಿದವನ ಗೋತ್ರೋದ್ಭವಂ
ಶ್ರೀಕಾಂತ ಭಜಕ ತಿರ್ಮಲರಾಯನಾತ್ಮಜಂ
ನಾರಾಯಣಾಖ್ಯ ಕರುಣಾ||

೪ಕೋಕನದ ದಳನೇತ್ರನಂತನ ಮಹತ್ಮೆಯುವ
ನೀ ಕನಡ ಭಾಷಾಪ್ರಬಂಧದಿಂದಚ್ಚ ತನ
ನೇಕ ಚಿತ್ತದಿ ಭಜಿಸುವಾನಂದ ತೀರ್ಥ ಗುರುಗಳ-
ದಯದಿ ವಿರಚಿಸಿದನು ೨೫

೧ಐವತ್ತೈದು ವರುಷನಂತರ
೨ಕೃಷ್ಣಪಕ್ಷ
೩ಗೌತುಮ ಗೋತ್ರದಲ್ಲಿ ಹುಟ್ಟಿದ
೪ಕೆಂಪು ಕಮಲದಳದಂತೆ ಕಣ್ಣುಳ್ಳ

೧ಹರಣ ವೀಣೆಯು ವಿಶಿಷ್ಟ ರವನ ಮೆಟ್ಟಂ ಗೈದು
ವರಜಿಂಹ್ವೆಯುಂ ತಂತು ಪಂಕ್ತಿಗಳ ನೆರಮಾಡಿ
ಸ್ಥಿರಬುದ್ಧಿಯೆಂಬಗ್ಗ್ರ ಶ್ರುತಿರವನಂಬಲಿದೊತ್ತಿ
ಸುಜ್ಞಾನ ಸ್ವರಗೂಡಿಸಿ||
ಪರಮ ಕೋವಿದ ಮನೋಹರ ವಿರಲ ನಂತನ್ನ
ಕರುಣ ಪಾಣಿಗಳಿಂದ ಬಾಜಿ(ರಿ)ಸುತ್ತೀ ಕೃತಿಯ (ಕಥೆಯು)
ಒರೆದೆನಲ್ಲದೆ ವೆಗ್ಗಳಿಕೆ ಲೆನ್ನೊಳವಲ್ಲ
ನಜ್ಜನರ್ಕೇಳಿರೆಲ್ಲ ೨೬

ಪಾರಾಶರಿಯ ದಿವ್ಯನಿರ್ಮಲ ವಚನಪೆಂಬ
ನೀರಜಕೆ ಗೀತಾರ್ಥವೇ ಸುಗಂಧೋತ್ಕಟಂ
ಚಾರು ನಾನಾ ಖ್ಯಾನವೇಕೇಸರಂ ಪರಿಯ ಸತ್ಕಥಾ ದಿನಪನಿಂದ
ವಿೂರಿ ಮುಪದಿಂದರಳಿದರ ಮಧು ಸುಜನರೆಂ
ಬಾರಡಿಗಳುಂಡು ಕಲಿಮಲವ ಕಳದೀನುಹಾ
ಭಾರತ ಸರೋಜವೆನಗೀಯಲಿ ಸುಖವ ಮನೋ
ಹರ ವಿರಲನಾಜ್ಞೆಯಿಂದ ೨೭

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ ಶ್ರೀಮದ
ನಂತನ ಚರಿತ್ರೆಯ ಪೀಠಿಕಾ ರಚನೆ ಸಂಧಿ
(೧)ಕ್ಕೆ ನಕ್ಷತ್ರ ಸಂಖ್ಯಾ ಶ್ಲೋಕಗಳಿಗೆ ಸಮಾಪ್ತ ಮಂಗಳ ಮಹ
ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

---

೧ಇಪ್ಪತ್ತಾರನೇ ಶ್ಲೋಕಾಭಿಪ್ರಾಯ ದೇಹವೆ ವೀಣಾ ದಂತ ಹಲ್ಲುಗಳ ಸಾಲುಗಳೆ. ವೀಣಾ ತಂತಿಗಳ ಕೂಡಿಸಲು ಕೆಳಗಿನ ಮೆಟ್ಟಲು ನಾಲಿಗೆಯೇ ತಂತು ವೀಣಾ ತಂತಿಗಳು—ಸ್ಥಿರಬುದ್ಧಿ ಎಂಬುವದೇ ಶ್ರುತಿಗೂಡಿಸುವ ವೀಣಾ ಕಿವಿಗಳು—ಸ್ಥಿರ ಬುದ್ಧಿಯಿಂದ ಸುಜ್ಞಾನವೆಂಬ ಸ್ವರಗೂಡಿಸಿ ಶ್ರೀ ಹರಿಯ ಕರುಣಾಪಾಣಿಗಳಿಂದ ಬಾರಿಸುತ್ತ

ಮಾದರಿಗಾಗಿ (೨) ಪದ್ಯಗಳು ಅಲ್ಲಲ್ಲಿ ಹೀಗೆ ೧೦-೧೨ ಪದ್ಯಗಳಿರುವವು.

ಕನಕೋದರೋದ್ಭವನ ಮೊಮ್ಮಗನ ಮೊಮ್ಮಗನ
ತನುಜಂಗೆ ಕಥೆ ಪೇಳ್ದವನ ಪಿತನ ತತ್ಪಿತನ
ವನಿತೆಯುರಸನ ಮಗನ(ಳ) ಪಡಪಳ ನಿಜವನೆಯು ಸಖನಸುತನ
ಜನನಿಯು ಸುಗರ್ಭ ಸಂಜಾತನ್ನ ಜಾತನ್ನ
ವಿನಯು ನುಡಿ ಜರಿದವನ ಸಹಭವನ ಸಹಭವನ
ಘನಕರುಣದೋಳ್ ಪೊರೆದ ದೇವನಂ ಕಾವನಂ ಸ್ಮರಿಸಿ
ಮುಂಗಥೆ ಪೇಳ್ವೆನು

ಭೇರಿನಾಮದ ಖಳನ ಕೊಂದವನ ಕೊಂದವನ
ನಾರಿಯುಂಪಡದವಳ ತನುಭವನ ತನುಭವನ
ವಾರಣವ ತರಿದವನ ಸಂಭವನ ಸಂಭವನ
ಮಾತುಳನ ಮಾತುಳನನು
ಆರಜನಿಯೋಳ್ ಸೀಳ್ದವನಸತಿಯು ಪ್ರತಿವ್ರತೆಯು
ಚಾರು ಚರುಣಾಬ್ಜಮಂ ಭಕ್ತಿಯಿಂ ಮುಕ್ತಿಯಿಂ
ದಾರಾಧಿಸುತ ಸತತ ಸದ್ಗತಿಯು ಸನ್ಮತಿಯು ಸಿಕ್ಷೈಸುವೆನು
ಮನದೊಳು

೨ನೇ ಸಂಧಿಪ್ರಾರಂಭ

ಶ್ರೀ ಲಕ್ಷ್ಮೀವೆಂಕಟೇಶಾಯನಮಃ
ಶ್ರೀರಾಮದೂತ ಭೋಗಾಪುರೇಶಾಯನಮಃ
ಶ್ರೀ ಗುರು ರಾಘವೇಂದ್ರ ಪ್ರಸನ್ನ

**ರಾಗ ಸಾವೇರಿ ಅಥವಾ ತೋಡಿ**

ಸಂಧಿ ಸೂಚನೆ

ರಾಜೇಂದ್ರ ಧರ್ಮಜಂ ಪಿತನ ಸದ್ಗತಿಗತುಳ
ರಾಜಸೂಯಾಗ ಕೈಕೊಂಡು ಭೀಮಾರ್ಜುನರ
ರಾಜೀವದಳಲೋಚನನ ಕೂಡೆ ಕಳುಹಿದಂ
ಮಾಗಧನ ಗೆಲ್ವದಕ್ಕೆ

ಶ್ರೀ ಗುರುರಾಜೋವಿಜಯತೇ

॥ ಶ್ರೀ ಮನೋಹರ ವಿಠಲ ಕೃತ ॥

# ಶ್ರೀಮದನಂತನ ಕಥಾ

## ೨ ನೇ ಸಂಧಿ ಪ್ರಾರಂಭ

### ಮಂಗಲಾಚರಣೆ

ಶ್ರೀರಮಣಿ ಕುಚಕುಂಕುಮಾಂಕಿತ ಸುವಕ್ಷ ಕೇ ।
ಯೂರ ಕೌಸ್ತುಭ ಮಣಿಯು ವನಮಾಲ ವೈಜಯಂತಿ ।
ಹಾರರಂಜಿತ ಕಂಬುಕಂಧರ ಕಿರೀಟ ಕುಂಡಲ
ಮಂಡಿತಮಲಾನನಾ ॥
ಮಾರನಂ ಪಡೆದ ಸುಂದರ ಮೋಹನಾಕಾರ
ಸಾರಿದರೆ ಸಲಹೊ ಪರಮೋದಾರ ಕೋದಂಡ ।
ಧಾರ ಜಗದೋದ್ಧಾರ ಗುಣಸಾರ ರಘುವೀರ
ಭಕ್ತರಾಧಾರಧೀರ ॥ ೧ ॥

### ಹನುಮಂತ ದೇವರ ಸ್ತೋತ್ರ

ತರಣಿ ಕುಲತಿಲಕ ಸರಸಿಯ[೧]ಕಿತವದಿಂದ ದಶ ।
ಶಿರಸು ಕದ್ದೊಯಲ್ಕೆ ದಾಶರಥಿ ಕಪಿ [೨] ಕಟಕ ।
ನೆರಹಿ ಲಂಕಾನಗರವಂ ಮುತ್ತಿ ಕೊಂಡಸುರ
ರೋಳ್ಕಾದುತಿರೆ ನಿಶಿಯೊಳು
ದುರುಳ ಮೈರಾವಣಂ[೩]ಛದ್ಮದಿಂ ಮಲಗಿರ್ದ ।
ಹರಿಯ ಪರಿಯಂಕಮಂ ಕೊಂಡೊಯ್ಯೆ ಪಾತಾಳ ।
[೪]ಕರಿದು ಖಳನಂ ತರಿದು ರಘುರಾಯನೊಲ್ಮೆಯಂ
ಪಡೆದ ಹನುಮಂತ ಸಲಹೊ ॥ ೨ ॥

---

[೧] ಕಿತವ=ಕಪಟ, ಚೋರ [೨] ಕಟಕ=ಸಮೂಹ [೩] ಛದ್ಮದಿಂ=ಕಪಟದಿಂದ. [೪] ಅರಿದು=ತಿಳಿದು, ಇಳಿದು ಹೋಗಿ,

### ಶ್ರೀ ಸೂತರ ವರ್ಣನೆ

ತಾನಿರುವ ಸುಸ್ಥಳಕ್ಕತಿ ಪ್ರೈರಮಂ ತಾಳ್ದು ।
ಹೀನವಪುವಿನ ರಾಹುನಡೆತಂದು ಕಾಡುನಂ ।
ಸ್ನಾನ ಮುಗುಳೊಂದು ಪಸ್ಸರಸಿ ನಿಲ್ಲುವೆನೆನುತ
ಗಗನದಿಂದಿಳಿದುಶಶಿಯು ॥

ಈನೈಮಿಷ ಕ್ಷೇತ್ರ ಸಾರ್ದನೆಸ ಸೂತಮುನಿ ।
ಸಾನುರಾಗದಲಿರಲ್ ಋಕ್ಷಗಣವಂದು ಬಹು ।
ಮಾನವಂಗೈದು ಕರಮೊಯ್ಯಲ್ಕೆ ಬಂದಪ್ರೋಲ್
ಶೌನಕರು ಪ್ರೋಗಿ ನಮಿಸಿ ॥ ೩ ॥

### ಶೌನಕಾದಿಗಳ ಪ್ರಶ್ನೆ

ಕರಪುಟಾಂಜಲಿಗಳಿಂ ಭಕ್ತಿಯಿಂ ಬಿನ್ನವಿಸಿ ।
ಪರಮ ಪಾವನವಾದನಂತನ ಚರಿತ್ರೆಯಂ ।
ಕರುಣದಿಂ ಪೇಳಿಮ್ಮ ಧನ್ಯರಂ ಮಾಡೆಂದು ದ್ವಿಜವರನ
ಸೂತ ು ಪೇ ್ದರು ಬೇಡಿಕೊಳಲು ॥
ಹರುಷ *ನಿರ್ಭರನಾಗುತವರನುಡಿ ವಹಿನುತಿಂ । (ವಹಿಲದಿಂ)
ನ್ನೊರೆವೆನೆಲೆ ಋಷಿಗಳಿರ್ಯಾ ಚಿತ್ರತರ ಸತ್ಕಥಯ ।
ಪರಿಯನೆಲ್ಲವನೇಕ ಚಿತ್ತದಿಂ †ಬೆಸಸುಯೆನು
ಹರಿಲೀಲೆ ಕೇಳೆಂದನು ॥ ೪ ॥

### ಮೇರು ಪರ್ವತದ ವರ್ಣನೆ

ನವಖಂಡ ಸಪ್ತಾಬ್ಧಿ ದ್ವೀಪ ನದ ನದಿಗಳಿಂ ।
ದವನಿ ಶತ (ಕ) ಪೋಳರ್ಧಕೋಟಿ ಯೋಜನದಿಂ ಮೆ- ।
ರೆವ ಕಮಲಜಾಂಡ ಮಂಡಲ ಭಾಗದೊಳ್
ಸರ್ವಗೀರ್ವಾಣರೆಲ್ಲ ತಮ್ಮ ॥

ಯುವತಿಯರಿಗಾಭರಣ ನಿರ್ಮಿಸಲ್ ವರಹೇಮ ।
ನಿವಹ ತಂದೊಟ್ಟಿದರೂ ಮೇಣ್ ಧರಣಿ ತಳವೆಂಬ ॥

---

*ನಿರ್ಭರ=ತುಂಬಿದ, † ಬೆಸಸುಯೆನ=ಹೇಳುವೆನು.

ನವ §ಕೊಳವನೊಗೆದ (ಕುಳನೊಳಗೆ) ಹೊಂದಾವರೆ-
ಯ ಮುಕುಟಮೆನೆ ಮೇರುಗಿರಿ ರಾಜಿಸಿದುದು || ೫ ||

ಇಂದ್ರಪ್ರಸ್ಥಪುರಿ ವರ್ಣನೆ

ಆ ಮೇರುಪರ್ವತದ ದಕ್ಷಣದ ರಾಷ್ಟ್ರದೊಳು ।
ಭೂಮಿ ಭಾಮಿನಿ ಶಿರದ ಭೂಷಣದ ಮಣಿ ಮಯದಿ ।
ಹೇಮಖಚಿತದ ಕೋಟೆ ಪ್ರಾಸಾದ ದ್ವಾರದಿಂ
ಗೋಪುರದ ಪಂಙ್ತಿಯಿಂದ ||
ವ್ಯೋಮದಗ್ರಕೆ ಸುೞಿವ ಧ್ವಜ ಪತಾಕೆಗಳಿಂದ ।
ಸಾಮಜ ತುರಂಗ ಶಂದನಗಳಿಂ ಮೆರೆವ ‡ಸು ।
ತ್ರಾಮ ಪ್ರಸ್ಥಂ ಸಕಳ ಸೌಭಾಗ್ಯದೊಡಲೆನಿಸಿ ಖ್ಯಾ-
ತಮಾಗಿರುತಿರ್ದುದು || ೬ ||

ಭಕ್ತ ಧರ್ಮರಾಜನ ರಾಜ್ಯ ವರ್ಣನೆ (೪) ಶ್ಲೋಕದಲ್ಲಿ

ಆ ನಗರವಾಕ್ಷ್ವ ಪಾಂಡವ ಪುತ್ರ ಧರ್ಮಜಂ ।
ಮಾನಿನಿಧಿ ಭೀಮ ನರ ನಕುಲ ಸಹದೇವರಿಂ ।
ಮಾನಿನೀಮಣಿ ದ್ರುಪದ ಸುತೆ ಸಹಿತ ಧರ್ಮಜಂ
ರಾಜ್ಯಮಂ ಪಾಲಿಸುತ್ತ ||
ಭೂನಾಥರಿಂದ ಸೇವೆಯ ಕೊಳುತಲನುದಿನಂ ।
ದಾನವಧ್ವಂಸಿ ಶ್ರೀಕೃಷ್ಣನ ಪದಾಬ್ಜಮಂ ।
ಸಾನುರಾಗದಿ ಭಕ್ತಿಯಿಂ ಪೂಜಿಸುತಿರ್ದ (ರ್ಪ)
ಕೀರ್ತಿಸಂಪನ್ನನಾಗಿ || ೭ ||
ಕ್ಷೀರಾಬ್ಧಿಯೆಂತಾದವೆಲ್ಲ ಶರಧಿಗಳ್ ನಿತ್ಯ ।
ವಾರಣಗಳಾದ ವೈರಾವತದ ತೆರದಿ ತ್ರಿಪು ।
ರಾರಿಯಂತಾದರೆಲ್ಲಾ ಸುರಕ್ಕೈಲಾಸದಂತಾದವೆಲ್ಲ ನಗವು ||
ವಾರುಣೀಶನ ಬಗೆಯೋಲಾದವೆಲ್ಲಾಹಿಗಳ್ ।
ವೀರ ಧರ್ಮಜನ ಸತ್ಕೀರ್ತಿ ಬಿಳಪಿನಲಿ ವಿ ।

---

§ ಕೊಳನೊಗೆದ=ಪುಷ್ಕರಣಿ, ಅಥವಾ ಸರೋವರದಲ್ಲಿ ಹುಟ್ಟಿದ ಹೊಸ್ಸಿನ ಕಮಲ. ‡ ಇಂದ್ರಪ್ರಸ್ಥ ಧರ್ಮರಾಜನ ರಾಜಧಾನಿ

ಸ್ತಾರ ಜಗವೆಲ್ಲ ನಿರ್ಮಲ ವಾಗಿ ಕಣ್ಗೆಸೆದ ವೇಂ ವೇಳ್ದಿನ
ಚ್ಚರಿಯುನು ॥ ೮ ॥

ಸೋಮಕುಲ ನೃಪಯುಧಿಷ್ಠರನಾಳ್ವ ರಾಷ್ಟ್ರದೊಳ್ ।
ತಾಮಸರ್ ನಿಂದಕ ದುರಾಚಾರ ಕುಹಿಕಿಗಳ್ ।
ಪಾಮರರ್* ಕಲ್ಮಷರ್+ ಕರ್ಬುರರ್ ಕಪಟಿಗಳ್
ಪರಹಿಂಸರಪ್ರೌಢರು ॥
ಪ್ರೇಮಹೀನಭಾಗ್ಯ ವರ್ಜಿತರ್ಗರ್ವಿತ ।
ನ್ನೇಮಶೂನ್ಯಜಾತಿ ಸಂಕರರ್ ನಿರ್ಗುಗಣ ।
ಕಾಮುಕರ ರೋರ್ವರಂ ಕಾಣೆ ನಾ ನರಸಲ್ಕೆ ಸಾತ್ವೀ
ಕರೆಲ್ಲ ಜನರು ॥ ೯ ॥

ರವಿಯಂತೆ ಕಾಂತಿಯಲಿ ಶಶಿಯಂತೆ ಶಾಂತಿಯಲಿ ।
ಭವನಂತೆ ವೀರ್ಯದಲಿ ಹರಿಯಂತೆ ವಿಭವದಲಿ ।
ಧ್ರುವನಂತೆ ಭಕ್ತಿಯಲಿ ಸತ್ಯದಿ ಹರಿಶ್ಚಂದ್ರನಂತೆ
ಶೋಭಿಸುತಲಿರುವ ॥
ಅವನಿಪಾಲಕ ಶಿರೋಮಣಿ ಧರ್ಮರಾಜಂಗೆ ।
ಭುವನದೋಳ್ ಸರಿಯಿಲ್ಲವೆಂದು ಸುರನರ ಭುಜಗ ।
ನಿವಹ ಕೊಂಡಾಡುತಿರಲುರ್ವಿಯಂ ಪಾಲಿಸಿದ ನೀತಿ ಪಥ
ದಿಂದ ಬಳಿಕ ॥ ೧೦ ॥

ಧರ್ಮನೆಡೆಗೆ ನಾರದರ ಆಗಮನ

ನಾನಾ ಸುಕರ್ಮಗಳನಾಚರಿಸಿ ಧರ್ಮದಿಂ ।
ತಾನು (ಆ) ಬಾಳುತಲಿರ್ಪಜಾತಶತ್ರುನ ಝುಸವ ।
ನ್ಯೂನವಿಲ್ಲದೆ ಕೇಳಿ ದಿನಕರ ಪರೀಕ್ಷಿಸಲ್ ಕ್ಷಿತಿಗಿಳಿದ
ನೆಂಬವೋಲು ॥
ಗಾನಗೈವುತ ವೀಣೆ ನುಡಿಸುತ್ತ ಶ್ರೀ ಹರಿಯ ।
ಧ್ಯಾನಪರನಾಗಿ ನರ್ತಿಸುತ ಲತಿ ತೇಜದಿಂ ।

---

* ಕಲ್ಮಷರ್=ಪಾಪಿಗಳು + ಕರ್ಬುರರ್=ರಾಕ್ಷಸೀ ಗುಣದವರು.

ಮೌನಿಕುಲ ಮಣಿನಾರದನು ನಭದಿಂದಿಳಿದು ಶಕ್ರ ಪ್ರಸ್ಥವ
ಸಾರ್ದನು ॥ ೧೧ ॥

ನಾರದಋುಷಿಗಳ ಪೂಜಾ

ಬಂದ ಮುನಿನಾಥನಂ ಕಂಡು ಭೂಪಾಲಕಂ ।
ಛಂದದಿಂ ಪದಕೆರಗುತನುಜರಿಂದೊಡಗೂಡಿ ।
ತಂದು ಸಭೆಗಾತನಂ ಮಣಿಖಚಿತದ *ಕಾಂಚನ
ಸಿಂಹವಿಷ್ಟರದೊಳಿರಿಸಿ ॥
ಗಂಧ ಮಧುಪರ್ಕಾದಿಯಿಂದ ಪೂಜಿಸಿ ನುತಿಸು ।
ತೊಂದಿಸುತ ಮಗುಳೆ ಭಯಭಕ್ತಿಯಿಂ ನಿಮ್ಮಡಿಯ ।
ಸಂದರುಶನದಲಾಭ ವೆನಗಾಯ್ತು ಲೋಕದೋಳ್-
ಕೃತಕೃತ್ಯರಾವೆಂದನು ॥ ೧೨ ॥

ಧರ್ಮನೃಪನ ನಾರದರಿಗೆ ಪ್ರಶ್ನೆ

ವಿನಯದಿಂ ಮತ್ತೆ ನಸುನಗೆವೆರಸಿ ಭೂವರಂ ।
ಮುನಿವರನ ೧ಬೆಸಗೊಂಡ ನಿಮ್ಮ ಬರವೆಲ್ಲಿಂದ ।
ಘನ ಪ್ರಯೋಜನವೆನ್ನೊಳೇನುಂಟು ಪೇಳ್ವದೆನೆ ಸಂತೋಷ
ದಿಂದ ಋುಷಿಯು॥
ಜನಪಕೇಳ್ ನಾಸ್ವರ್ಗಲೋಕ ದಿಂದೈತಂದೆ ।
ನಿನಿತು ಗುಣವುಳ್ಳತವ ಸತ್ಕೀರ್ತಿಗೆ ಕೊರತೆ ।
ಯನು ಕಂಡು ತತ್ಕಾರ್ಯ ವರುಹಿಪ್ರೋದಪೆ
ನದರ ವಿವರವಂ ಕೇಳೆಂದನು ॥ ೧೩ ॥

ಧರ್ಮನಿಗೆ ನಾರದರ ಉತ್ತರ

ಕಾಮಧೇನು ಸುಕಲ್ಪವೃಕ್ಷ ಚಿಂತಾಮಣಿ ಸ ।
ನಾಮ ಸುರ ಗಂಧರ್ವ ಯಕ್ಷ ಕಿನ್ನರರಿಂದ ।
ಹೇಮ ಮಾಣಿಕ ವಜ್ರ ನವರತ್ನದಿಂ ಮೆರೆವ
೨ಶಕ್ರನಾ ಸ್ಥಾನದೊಳಗೆ ॥
ಸೋಮ ಕುಲ ನೃಪ ಮಾಂಧಾತ ಸಿಬಿ ಸಗರ ।

---

* ಕಾಂಚನಸಿಂಹವಿಷ್ಟರ=ಸಿಂಹಯುಕ್ತ ಬಂಗಾರದ ಗದ್ದುಗೆ.
೧ ಬೆಸಗೊಂಡ=ಕೇಳಿದನು ೨ ಶಕ್ರನಾಸ್ಥಾನ=ಸ್ವರ್ಗ

ಭೂಮೀಶ ನಳ ನಹುಷ ದಶರಥ ದಿಲೀಪ ರು ।
ದ್ದಾಮಶ್ವಮೇಧ ವರ ರಾಜಸೂಯಾದಿ ಮಖವಂ
ಮಾಡಿ ಪೂಜ್ಯರಾಗಿ ॥ ೧೪ ॥
ಇರುತಿರ್ಪರಿಂದ್ರನ ಸಮೀಪದೋಳ್ ನಿಮ್ಮಯ್ಯ ।
ಧರೆಯೊಳಗೆ ಕೃತುಗಳಂ ಮಾಡಲಿಲ್ಲದರಿಂದ ।
ಸುರರಾಜ ನೋಲಗದ ಸಭೆಗೆ ದೂರಾಗಿರ್ಪ ನೀವು
ತ್ರೈಲೋಕದೊಳಗೆ ॥
ಉರುತರ ಪರಾಕ್ರಮಿಗಳತುಳ ಭಾಗ್ಯಾನ್ವಿತರ್ ।
ಭರತಾ೧ನ್ವಯದ ನೃಪರ ಮೌಳಿನೀವೈವರಿರ ।
ಲರಿದಾವುದಾ ರಾಜಸೂಯಾಗಮುಂಗೈದು ಪಿತಗೆದಿವಿಯಂ
ನೀವುದು ॥ ೧೫ ॥
ರಾಜಸೂಯು ಯಾಗವಿಚಾರ
ಎಂಬ ನಾರದನ ವಾಕ್ಯದ ಬಲಿಗೆ ಶಿಲ್ಕಿ ೨ ತೌ ॥
ದುಂಬರಾತ್ಮಜನ ಚೈತನಾಖ್ಯ ವ್ಯಗ ಸುಖದ ।
ಹಂಬಲವ ತೊರೆದು ದಾತನ ೩ವಚೋವರುಷದಲಿ ನೆನದವಾ
ಕರಣಚಯವೂ ॥
ತುಂಬಿರ್ದ ಶೋಕದಲಿ ಧಕುಜನುಮ ವೆಂದೆನುತ ।
ಕಂಬನಿಯ ಸಾಲಿನಿಂದುರೆ ನೊಂದು ಹಾಯೆಂದು ।
೪ಧ(ತ)ಂಬಿಸುತ ಮಗುಳೆ ನೆನೆನೆನೆದು ಮಖದುದ್ಯೋಗ
ಪರನಾದ ನಾಮಹೀಶ ॥ ೧೬ ॥
ಬಳಿಕ ಮುನಿಪುಂಗವಂ ಸರಿದ ನಾಗಸದೆಡೆಯೊ ।
ಳಿಳಿದು ದಂತಸ್ತಾಪಸಿಖಿ ಯುರಸ ನುದರದೊಳ್ ।
ಕಳವಳಿಸಿ ಚಿಂತಿಸುತಲಧ್ವರದ ನೆನಹಿನಲಿ ಕಳೆಗುಂದಿಕೈಗಲ್ಲದಿ ॥
ವೊಲದೊಲದು ಮಸ್ತಕವ ಮತ್ತ್ನ ದ್ವಿಪವಂದದಿಂ ।

---

೧ ಅನ್ವಯ=ವಂಶ ೨ ಔದುಂಬರಾತ್ಮಜ=ಯುಮಧರ್ಮನ ಮಗ ಧರ್ಮರಾಜ. ೩ ವಚೋವರುಷ=ಮಾತೆಂಬಮಳೆ ೪ ಥಂಭಿಸುತ= ಸ್ತಂಭಿಸು=ತಡೆದು ೫ ಶಿಖಿ=ಬೆಂಕಿ

ಸುಲಭವಲ್ಲದ ೧ ಕಜ್ಜ ಮೆಂತಾಹುದೆನಗೆನುತ ।
ಪಲವೆಣಿಕೆಯಿಂದಲಾಲೋಚನೆಗೆ ಕರಸಿದಂ ಪ್ರಮುಖಾಪ್ತ
ಮಂತ್ರಿಗಳನು ॥ ೧೭ ॥

ಆಲಿಸೆಲೆ ಋಷಿಗಳಿರ್ಯಾ ರಾಯನಾ ಸ್ಥಾನಕ್ಕೆ ।
ನೀಲಮಣಿ ಮೌಕ್ತಿಕದ ಪದಕ ಹಿರಾವಳಿಯ ।
ಕಾಲಸರಪಳಿ ಬಿರಿದಿನು* ಘ್ಘುಡದ ಝಣರವದ-
ಕ್ಕೈದುಗಳ ಝುಗಿಝುಗಿಸುವಾ ॥

ಮೌಳಿಮಂಡಿತ ದ್ರುಪದ ತನುಜ ಕೈಕೇಯ ವಾಂ।
ಚಾಲರಾತ್ಮಜರ್ಕೈವರತುಳ ಭುಜಬಲ ಭೂಮಿ ।
ಪಾಲಕರತಿರಥ ಮಹಾರಥಸ್ತ್ರ ಶಸ್ತ್ರಜ್ಞ-
ಕೋಪಿದರ್ನಡೆ ತಂದರು ॥ ೧೮ ॥

ನರನಾಥನಂ ಕಾಣುತಡಿಗೆರಗಿ ಬಸಸಿದ ।
ರ್ಸುರ ಮುನಿಪ ನಿಮಗೊರಪ ಪದನವುಂ ವೇಳ್ವೆನ ।
ಲ್ಮರಗುತ ಮಹೀಶ್ವರಂ ನುಡಿದ ಸಕಳೈ-
ಶ್ವರ್ಯವೀರ್ಯಗಾಂಭೀರ್ಯದಲ್ಲಿ ॥
ಸರಿಯಿಲ್ಲ ಧರ್ಮಜಗೆ ನಹುಷಾದಿ ನೃಪರಂದು ।
ಧರೆಜನರ್ಮೊಗಳುವರ್ನಮ್ಮಯ್ಯ ಪಾಂಡುವಿನ ।
ಸಿರಿಯ ಕೊರತೆಯನೇನು ಬಣ್ಣಿಸುವನೆಂದೆನುತ-
ಬಿಸಸುಯ್ದು ನವನೀಶನು ॥ ೧೯ ॥

ವಾಸವನ ಸಭೆಯೊಳಗೆ ಜನಕನವನಾನ್ಯಗಡ ।
ವೀಸುವೈಭವ ನಶ್ವವಿರ್ದೇನು ಫಲವೆಮಗೆ ।
ಭೂಷಣವೆನಾಪ್ಪೆವರಾತಂಗೆ ಸದ್ಗತಿಯ
ನೀವ್ರುದಕೆ ರಾಜಸೂಯ ॥

---

೧ ಕಜ್ಜ=ಕಾರ್ಯ.

*ಉಘ್ಘುಡ=ಹೆಚ್ಚಿನ, ಅತಿಶಯ, ‡ ಬಿಸಸುಯ್ದು=ಹಾಯೆಂದು ಉಸಿರು ಬಿಡುತ್ತ

ಭೂಸುರರ ಮುಖದಿಂಡ ಮಾಳ್ಪೆನಾ ಜಗವರಿಯೆ ।
ಲೇಸಾದ ಸ್ವರ್ಗವಹುದದರಸಂಗತೆಂಬ ಕ ।
ಟ್ವಾಸೆಯಲಿ ದುರ್ಲಭದ ತದ್ಯಾಗ ಕ್ರೈ-
ಕೊಂಡೆನಿದಕೇನುಪಾಯೆಂದನು ॥ ೨೦ ॥

**ಶ್ರೀ ಕೃಷ್ಣ ಸಮ್ಮತಿಯಿಂದ ಯಜ್ಞಮಾಡಲು ಪಾರ್ಥನ ಬಿನ್ನಹ**

ಆಗಲಿದಕೇನರಸ ನದ್ಮಖಕ್ಕೆಜಮಾನ ।
ನಾಗುದೀಕ್ಷಿತವ್ರತದೊಳಖಿಳ ಭೂಮಂಡಲವ ।
ನೀಗಜ್ಜೈಸುತ ಧನವನಪರಿಮಿತ ಧರಣಿಪರ-
*ಸದದೆಳೆದು ತಾಹೆವೆಂದು ॥

§ಆಗರುವರುಬ್ಬೆದ್ದು ತಮತಮಗೆ ಘರ್ಜಿಸುತ ।
ಸಾಗಲ್ಕೆ ಸ್ಥೈರಿಸುವದಚ್ಯುತನ ಸನ್ಮತದಿ ।
ತೂಗಿ ನೋಡುವನಿದರ ತೂಕವಂ ನಾವೆನುತ-
ನುಡಿದನಾ ಕಲಿಪಾರ್ಥನು ॥ ೨೧ ॥

**ಪಾರ್ಥನ ವಚನದಂತೆ ಶ್ರೀಕೃಷ್ಣನಲ್ಲಿಗೆ ಸೂತನಂ ಕಳುಹಿಸುವಿಕೆ.**

ಶ್ವೇತವಾಹನನ ಸಮ್ಮತ (ಸನ್ಮತ) ಮಾತಿಗೊಪ್ಪಿದಂ ।
ಭೂತಳಾಧಿಪ ಧೌಮ್ಯ ಮೊದಲಾದ ಮಂತ್ರಿಗಳ್ ।
ನೀತಿಯಹುದೆಂದುಲಿದು (ಜೊಲಿದು) ಹರಿಯ—
ಬಿಜಯಂಗೈಸಿ ತಂದರೆ ನಿಮ್ಮ ಮನದ ॥

ಪ್ರೀತಿಯೆಪ್ಪುವದೆನಲ್ಕಿಂದ್ರಸೇನಕನೆಂಬ ।
ಸೂತನಂ ಕರೆವುತೆಮ್ಮಯ ಸ್ಯಂದನವಕೊಂಡು ।
ನೀತೆರಳು ದ್ವಾರಕಾವತಿಗೆ ಶೀಘ್ರದೊಳೆಂದು-
ಭೂಪಾಲ ನೇಮಿಸಿದನು ॥೨೨॥

**ಇಂದ್ರಸೇನ ಸೂತಗೆ ಕೃಷ್ಣ ಸಂದರ್ಶನೋತ್ಸುಕತೆ**

ಭೂಮಿಶನಾಜ್ಞಾಪಿಸಿದ ವಾಕ್ಯಮಂ ಕೇಳ್ದು ।
ರೋಮಾಂಚಗಳುಬ್ಬುತೆದ್ದು ಕೈ ಮುಗಿದು ಮುಖ ।

---

*ಸದದೆಳೆದು=ಹೆಡಮುರಿಗಿ ಕಟ್ಟಿ ಎಳತಂದು. § ಆಗರುವರುಬ್ಬೆದ್ದು= ಹೆಮ್ಮೆಯಿಂದ ಉಬ್ಬಿ ಎದ್ದೆದ್ದು.

*ತಾಮರಸ ವರಳಿಸುತ್ರ– ತೋಷಾಶ್ರು ಕಣಗಳಿಂ ಜೀಯ
ಹಾ ಸಾಧುವೆನುತ ||
ರಾಮಣೀಯಕ ಸುಧಾ ಕಲಶ ಕೈಸಾರ್ದ ಸು |
ತ್ರಾಮನೋಲ್ಪೋಳಿವ ಮುಚ್ಕೋದರದಿ ಪೊರಮುಟ್ಟ |
ಕಾಮನಂ ಕಂಡು ಹರುಷಿಸಿದ ರತಿದೇವಿಯೆಂತಿಂದ್ರ
ನೇನಂ ನಲಿದನು || ೨೩ ||

ಆಂಧನಕ್ಷಿಯ ಪಡೆದವೊಲು ಮೌನೀಶ ಸುರ |
ಸಿಂಧುವಂ ಕಂಡಂತೆ ಬಂಜೆಃಸಾಗಿರ್ದ ಸತಿ |
ನಂದನನ ಪೆತ್ತಂತೆ ದಾರಿದ್ರ್ಯದಿಂ ಬಳಲುವರ್ಗೆ
ನಿಧಿ ದೊರಕಿದಂತೆ ||
ಮಂದಮತಿಗಳ್ ಗುರುಗಳಡಿಯ ಕಾಣ್ಬಂತಬ್ಜ |
ವೃಂದಕಿನನುದಯವಾದಂತೆ ಮನದೊಳ್ ಸೂತ |
ನಿಂದಿರೇಶನ ಚರಣಕಮಲವಂನೋಳ್ಪೆನೆಂಬಮಿತ
ಹರುಷವ ತಾಳ್ದನು || ೨೪ ||

ಅವನನ ಪದ ಪದ್ಮಯುಗ್ಮಮಂ ನಕಲ ವೇ |
ದಾವಳಿಗಳರಿಯವಾ ಬ್ರಹ್ಮ ರುದ್ರೇಂದ್ರಾದಿ |
ದೇವತತಿ ಸನಕಾದಿ ಯೋಗಿಗಳಿಗೊಶನಲ್ಲ
ದಾಮಹಾಮಹಿಮನಿಂದು ||
ಜೀವಸಖನಾಗಿ ಪಾಂಡವರಿಗೊಲಿದರ್ಪ ನಿ |
ವನ್ಮಾಜನ್ಮಾಂತರದ (ಜನ್ಮಾರ್ಜಿತದ) ಪುಣ್ಯ ಪ್ರಭಾವವೊ |
ದೇವದೇವೆಶನಂ ಕಣ್ಣಾರೆ ನಾ ಕಾಣ್ಬೆನೆಂದು ಪುಳುಕಿತ
ನಾದನು || ೨೫ ||

---

* ಮುಖತಾಮರಸ=ಮುಖ ಕಮಲ + ಆನಂದಾಶ್ರುಬಿಂದುಗಳಿಂ= ಹೆಚ್ಚಿನ ಸಂತೋಷದಿಂದ ಕಣ್ಗೊಳಗೆ ನೀರು ಹನಿಗಳು ಬರುವಿಕೆ.

* ಕಾಣ್ಬೆ=ಕಾಣ್ಬೆ, ಕಾಣುವೆ. × ಪೊರೆಗೆ=ಪೊರೆಯುವವಗೆ

ತರುಳಧ್ರುವನೇನ್ವಯೋವೃದ್ಧನೆ ನಾಗೇಂದ್ರ ।
ವರಸು ವಿದ್ಯಾವಂತನೆ ವಿದುರ ಕುಲಜನೇ ।
ತರುಣಿ ಕುಬ್ಜೆಯು ರೂಪವತಿಯೆ ವಾಲ್ಮಿಕೀನಾಚಾರ
ಸಂಪನ್ನನ ॥

ಉರುವಿಕ್ರಮನೆ ಉಗ್ರಸೇನನೇಂ ಧನಯುಕ್ತ ।
ನರ ಸುಧಾಮನೆ ಧನಿಕ ನಿವರೂಳ್ ಗುಣವೀಕ್ಷಿಸದೆ ।
ಪರಮುಭಕ್ತಿಗೆ ಮೆಚ್ಚಿ ವೊಲಿದ×ನನಿಬ೦ಗೆಲ್ಲ ದೇವಭಕ್ತ
ಪ್ರೀಯನೂ ॥ ೨೬ ॥

ಸೂತಕುಲದೂಳ್ಪುಟ್ಟಿದವ ನೀಚನೆಂದೆನ್ನ ।
ಜಾತಿಯನ್ನೋಡುವನೆ ಪತಿತಪಾವನ ವೊರೆಗೆ ।
ಪ್ರೀತಿಯಿಂ ಕರದಿಂದು ಮನ್ನಿಸದೆ ಮಾಣ್ದಪನೆ ಪಾಂಡವರ
ದಾಸನೆಂದು ॥

ಯಾತಕೀ ಸಂದೇಹ ಜನ್ಮ ಜನ್ಮಾಂತರದ ।
ಪಾತಕವ ಕಳಕೊಂಬೆನೆದುಕುಲ ಶಿರೋಮಣಿಯ ।
ನೂತನ ಸು ವಿಗ್ರಹವ ಕಂಡೆಪೆನಲಾಯೆನುತ ಮನದೊ೪ು
ತ್ಸವ ತಾಳ್ದನು ॥ ೨೭ ॥

### ಸೂತಕೃತ ಶ್ರೀಕೃಷ್ಣನನಂತಮಹಿಮಾ ಸ್ತೋತ್ರ

೧ ಆಪಯೋಜಾಸನಾದಿಗಳ ಸೇವೆಯಕೊಳುತ ।
ಲಾಪುಣ್ಯ (ಪರಮ) ವೈಕುಂಠನಂತಾಸನಶ್ವೇತ ।
ದ್ವೀಪದೊಳ್ ಸಂತತ ರಮಾರಮಣನಾಗಿರ್ದ
ಸಚ್ಚಿದಾನಂದಾತ್ಮನು ॥

ಈ ಪೊಡವಿ ಮೇಲೆ ಪ್ರಾಕೃತರ ವೇಷವ ತಾಳು ।
ಶ್ರೀಪಾಂಡುವರ ಪ್ರೀಯನಾದುದಚ್ಚರಿಯಲಾ ।
ಶ್ರೀ ಪತಿಯು ಲೀಲೆಗೆ ನಮೋ ನಮೋ ಎಂದುಬ್ಬಿ ೨ ಹರುಷದಿ
ನಿರ್ಭರನಾದನು ॥ ೨೮ ॥

---

ಅರ್ಥ ಮುಂದಿನ ಪುಟಕ್ಕೆ

೩ ಜಗದ ಜೀವರತಂಡೆಯೆಂದೆನಿಸುವಪ್ರತಿಮ ।
ಮಗನ ಪಡೆದಂ ನಾಭಿಕಮಲದಿಂ ಬಳಿಕ ನಸು ।
೪ ನಗೆಯಲೋರ್ವ-ಳ ಪೆತ್ತನಖಿಳ ಭುವನ ಮೋಹೀಸುವ
ಮಾಯಯೆಂಬವಳನು ॥
ಮಗುಳೆ ಸೃಜಿಸಿದ ಲೋಕಪಾವನಂಗೈಸುತಿಹ ।
ಮಗಳ ಕಾಲ್ಪುದಿಯಿಂದಲೀ ಪರಿಯ ಮಹಿಮ ತಾ ।
ಮಗುವಾಗಿತೋರ್ದ ದದ್ಭುತವಲಾಯೆನುತವಂ ಮನದಿನೈ
ಬೆರಗಾದನು ॥ ೨೯ ॥

ದೇವನಂ ಭಸವನಧಿ ನಾವನಂ ಭಕ್ತ ಸಂ ।
ಜೀವನಂ ದುರಿತವನ ಪಾವನಂ ಶ್ರೀವಾಸು ।
ದೇವನಂ ಪಾಂಡವರ ಭಾವನಂ ನೆನೆವರರ ಕಾವನಂ
ತ್ರೈಲೋಕಪಾವನ್ನಂ ॥
ಮಾವನಂ ಮುರಿದು ಘನಪಾಪಿನಂ ತುಳಿದು ವಸು ।
ದೇವನಂ ಪೊರೆದ ಸುರದೇವನಂ ಸದ್ಗತಿಯ ।
ನೀವನಂ ಗಿರಿನೆಗಪಿ ಗೋವನಂ ಕಾವನಂ ಮನದಣಿಯ
ನೀಕ್ಷಿಸುವೆನು ॥ ೩೦ ॥

ಪೊಳೆವಧ್ವಜ ವಜ್ರಾಂಕುಶದ• ರೇಖೆಯುಕ್ತ ನಿಜ ।
ನಳಿನಾಕ್ಷನಂಘ್ರಿಗಳನೇಕರವಿ ಕಾಂತಿಗಳ ।
ಪಳಿವನಖ ನಿಕರಗಳ ಕೋಟಿ ಮನ್ಮಥರ ಲಾವಣ್ಯಮಂ
ಧಿಕ್ಕರಿಸುವ ॥
ಚಲುವಿಕೆಯ ನಮಿತ ಚಂದ್ರರ ತಿರಸ್ಕರಿಸುತಿಹ ।
ತೊಳಪ ಸದ್ವದನನಂ ಮೋಹನದ ಸದನನಂ ।
ಸುಲಭದಿಂದ ಕಣ್ಣಾಣಿಯೆನೀಕ್ಷಿಪೆನೆಲಾಯೆನುತಮನದೊಳುತ್ಸವ
ತಾಳ್ದನು ॥ ೩೧ ॥

---

೩ ಜಗದ ಜೀವರ ತಂದೆ-ಪ್ರಾಣದೇವರ ತಂದೆ ೪ ನಗೆಯೊಳರ್ವಳ ಪೆತ್ತು—ಹೃದೀಂದಲಜ್ಞಾದೇವಿ.

[೧]ಸ್ವರಮಣಾನಂದಾತ್ಮ ನಿರ್ದೋಷ ನಿರ್ಲೇಪ ।
ಪರಿಪೂರ್ಣ ಕಾಮನೆಂದೆನಿಸುವಾ ವಿಷ್ಣು ನ (ಸ) ।
ಶ್ವರರಾದ ಷೋಡಶ ಸಹಸ್ರ ಶತನಾರಿಯರ ಸಂಗದೋಳ್
ಕ್ರೀಡಿಸುವದು ॥

ನರರಂತೆ ಜಾರ ಚೋರತ್ವಮಂ ಮಾಳ್ಪದಿದು ।
ಬರಿದೆ ಸೋಜಿಗವೆಲಾ ಬೇಡದು ಪುಟ್ಟಿದನೆಂದು ।
ಮರುಳುಗಳ್ ತಿಳಿದಿಪರ್ ನಿರ್ಗತಜರಾಮರಣ ಜನನಂ ಪೊಗಳ
ಲೊಶವೆ ॥ ೩೨ ॥

ಶ್ರೀ ರುಕ್ಮಿಣೀಕಾಂತನಂಘ್ರಿಗಳ ಭಜಿಸದವ ।
ದ್ವಾರಕೇಶನ ಚರಣದಲಿ ಭಕ್ತಿ ಮಾಡದವ ।
ಮಾರನೈಯ್ಯನ ನಾಮಕೀರ್ತನೆಯನೆಸಗದವ ಹರಿಕಥೆಯ
ಕೇಳದವನು ॥

ನೀರಜಾಕ್ಷನ ಸುಗುಣಮಹಿಮೆಯಂ ಸ್ತುತಿಸದವ ।
ನಾರಾಯಣನ ದಿವ್ಯ ಮೂರ್ತಿಯ ನೋಡದವ ।
ಕ್ರೂರನರನವನೇ ದುರಾತ್ಮನಿಹ ಪರಕವಂದೂರ ಭೂ
ಭಾರಕವನು ॥ ೩೩ ॥

ಹರಿಯ ನನವರತ ನೆನಸದಮನಂ ಮುರಹರನ ।
ಚರಣಾಬ್ಜ ಕೊಂಬಿಸದ ಶಿರ ಶ್ರದ್ಧೆಯಿಂದ ನರ ।
ಹರಿಯ ಪೂಜಿಸದ ಕೈ ವಿಷ್ಣುವಿನ ಕ್ಷೇತ್ರಗಳ ಚರಿಸದವ
ನಂಘ್ರಿ ಯುಗವೂ ॥

ಸಿರಿಧರನ ನೀಕ್ಷಿಸದ ನಯನಂಗಳಚ್ಯುತನ ।
ಸ್ಮರಣೆ ಮಾಡದ ಜಿಂಹ್ವೆ ಸರ್ವೋತ್ತಮನ ಚಿತ್ರ ।
ಚರಿತೆಯಂ ಕೇಳದಾ ಕಿವಿಗಳಿವು ಜೀವರ್ಗೆ ಪೂರ್ವ ವೈರಿ
ಗಳೆಂದನೂ ॥ ೩೪ ॥

**ಸೂತ ಶ್ರೀ ಕೃಷ್ಣನಂ ಕಾಣ್ವಮನದುಬ್ಬಳಿಕೆ**

ಆಡಲಚ್ಚರಿಯಲ್ಲವೇ ಯೆನ್ನ ಪುಣ್ಯ ಕೈ ।

---

೧ ತನ್ನ ವಿಜ್ಞಾನಮಯ ಸ್ತ್ರೀರೂಪದಲ್ಲೇ ತಾನು ರಮಿಸುವ.

ಗೂಢಿತರಿಂದ ಕೇಳಲಿ ಮನವೆ ಮತ್ಸರಣ ।
ವಾಡಿ ಬಲಿ ಮರ್ದನನ ಸಂದರುಶನಂ ಗೈವುತತಿ ಪವಿತ್ರ
ವಾಗುವೆವೆಲಾ ॥

ನೋಡುವೇಂ ಪಾಡುವೇಂ ಸಾಷ್ಟಾಂಗ ವಂದನೆಯ ।
ಮಾಡುವೇಂ ಬೇಡುವೇಂ ಸುಜ್ಞಾನ ಹರಿಯ ಕೊಂ ।
ಡಾಡುವೇಂ ಕೂಡುವೇಂ ನಾನೆನುತ ಲಿಂದ್ರಸೇನಂ ಭಕ್ತಿ ಪರ
ವಶನಾದನು ॥ ೩೫ ॥

ಎಲ್ಲರಂ ಬಿಟ್ಟನಗೆ ಸತ್ಕಾರ್ಯಮಂ ಧರಾ ।
ವಲ್ಲಭಂ ನೇಮಿಸಿದ ಲೇಸಾಯ್ತು ನಾ ಧನ್ಯ ।
ಬಲ್ಲಿದಂ ಸೂತಕುಲದೊಳಗೆನುತಲಾ ಇಂದ್ರಸೇನ ಸಾರಥಿ
ಮನೆಯೊಳು ॥

ನಿಲ್ಲದಲೆ। ವೇಗದಿಂ ರಥವೇರ್ದು ಚಿತ್ತದೊಳು। (ದೋಳ್)
*ಪುಲ್ಲಶರನೈಯನಂ ಕಾಣ್ಬ ಹರುಷದೊಳು ವೈ ।
†ಭುಲ್ಲವಿಸುತಡಿಗಡಿಗೆ ಪೊರಮಟ್ಟ ಮುನಿಗಳಿರ್ಯಾ ಕೇಳಿನ್ನು
ಮುಂಗಥೆಯನು ॥ ೩೬ ॥

**ಇಂದ್ರಸೇನ ಸೂತನ ದ್ವಾರಾವತಿಗೆ ಗಮನ ಸಮುದ್ರ ವರ್ಣನೆ.**

ಬಳಿಕ ಸಾರಥಿ ರಾಯನಾಜ್ಞೆಯಂ ಕೈಕೊಂಡು ।
೧ತಳರ್ದನತಿ ಗಮನದಿಂ ಹಲವು ಪೈಣಗಳಿಂದ ।
ನಲಿದು ಬರುತೆರೆ ಕಂಡ ಸುಳಿಸುಳಿಯ (ವ)೨ಸೀರ್ವನಿಯ೩ಬೊ
ಬ್ಬುಳಿಯ ೪ನೊರೆಗಳಿಂದ ॥

೫ಘುಳಿಘುಳಿಸಿ ಮುಳಿಗೇಳ್ವ ನೀರಾನೆ ೬ಕರ್ಕಟದಿ ।
ಸಲಿಲದಿಂ ಜೀವಿಸುವ ಜಂತುಗಂಡೂಪದದಿ ।

---

* ಪುಲ್ಲಶರನೈಯ್ಯ=ಕಾಮನೈಯ್ಯ † ಭುಲ್ಲವಿಸು=ಸಂತೋಷದಿಂದ ವೈಉಬ್ಬಿ
೧ ತಳರ್ದ=ತಳರ್=ಹೋಗು, ಹೊರಟನು. ೨ ಸೀರ್ವನೆಯ = ಸಣ್ಣ ಸಣ್ಣಹನಿ.
೩ ಬೊಬ್ಬುಳಿಯ=ನೀರುಗುರುಳಿ. ೪ ನೊರೆ=ನೀರ ಮೇಲಿನ ಬುರುಗು. ೫ ಘುಳಿ
ಘುಳಿಸಿ=ನೀರಿನ ಸಪ್ಪಳದಿಂದ ೬ ಕರ್ಕಟ=ಏಡಿಗಳ ಸಮೂಹ.

ಳಿವ ಮರಿ ಮೀನ್ಗಳಿಂ ಪೇರ್ವೆರೆಯ ಲಹರಿಯಿಂ [೭]ಘೂರ್ಮಿಸುವ
-ವಾರುಧಿಯನು ॥ ೩೭ ॥
[೮]ತಿಮಿತಿಮಿಂಗಿಳ [೯]ಝುಷದ ಕುಲದಿಂದ ಬಲದಿಂದ ।
[೧೦]ಕಮರ [೧೧]ಶಾಲೊ(ಲೂ)ರಗಳ ತತಿಯಿಂದ ಗ(ರ)ತಿಯಿಂದ ।
ಕ್ರಮದಿನಡೆವಾನಕ್ರರವದಿಂದ ಶರದಿಂದ ವಿದ್ರುಮದಲತೆಗಳಿಂದ।
ವಿಮಲ ರತ್ನದ [೧೨]ಸೂಕ್ತಿನಗದಿಂದ ಖಗದಿಂದ ।
ಲಮಿತ ಕುಜವ್ರಾತಗಳ ನೆಳಲಿಂದ ಮಳಲಿಂದ ।
ರಮಣೀಯ ಧರೆಗಳಾರ್ಭಟದಿಂದ ತಟದಿಂದ ಲಬ್ಧಿ ರಂಜಿಸು-
ತಿರ್ದುದೂ ॥ ೩೮ ॥

ಘನಕುಲಂ ಬಿಡದೆ ಜಲನೆಳೆಯಲೂಣೆನಗಿಲ್ಲ ।
ಮುನಿ[೧೩]ನೀಂಟೆ ಬಿಟ್ಟದಕೆ ಕೊರತೆ ತನಗಿಸಿತಿಲ್ಲ ।
ವನವರತ ತನ್ನೇಳ್ಗೆಯಂ ಪೆಚ್ಚಲೀಸದಿಹ ವಡಭಾನಳನ ವೇಧೆಗ ॥
[೧೪]ಕನಲಿ ಸೈರಿಸದೆ ರಕ್ಷಿಪ ಕರ್ತರನ್ನರಸ ।
ಲನಿತು ಲೋಕದಲಿ ಕಾಣಿಸದೆ ದ್ವಾರಕೆಗೆ ।
ತನುವ ನೆಡಗೆಡಹಿ ಕೃಷ್ಣಂಗೆ ಮೊರೆಯಿಡುವವ್ರೋಲ್ ಉದಧಿ-
ರವ ಗೈಯುವಂತೈ ಸದದು ॥ ೩೯ ॥

ದ್ವಾರಕಾಪುರಿ ವರ್ಣನೆ

ಇಂತೆಸೆವ ಶರಧಿಯಂ ಇಂದ್ರಸೇನನು ನೋಡಿ ।
ಸಂತೋಷಮಂ ತಾಳ್ದು ಮುಂದೆಳದು ದ್ವಾರಕಿಗೈದು ।
ಕಂತು ಪಿತನಂ ಕಾಣ್ಬ ತವಕದಿಂ ನಡೆತಂದು ನಗರಮಂ
ಪೊಕ್ಕು ಬರಲು ॥
ದಂತಿಹಯರಥಕೇತು ಸುಪತಾಕೆ ಪಟು ಭಟರ ।
ತಿಂಥಿಣಿಯ ಪರಿಪರಿಯ ಗುಡಿಕಳಸ ಕನ್ನಡಿ ವ ।

೭ ಘೂರ್ಮಿಸುವ=ಗಡಕಿಕ್ಕಿಸುವ ೮ ತಿಮಿ=ದೊಡ್ಡ ಮೀನು. ತಿಮಿಗಿಂತ ದೊಡ್ಡದು ತಿಮಿಂಗಿಲ. ೯ ಝುಷದ=ಮೀನುಗಳ. ೧೦ ಕಮರ=ತಾಂಬೆಲು. ೧೧ ಶಾಲೂರ=ಕಪ್ಪೆ. ೧೨ ಸೂಕ್ತಿ=ಸಮೂಹ. ೧೩ ನೀಂಟೆ=ಕುಡಿದು. ೧೪ ಕನಲಿ=ರೇಗಿ.

ಸಂತನೋಳ್ಕಿರವರಸುಮುಕ್ಕಳರ ಚಲ್ವಿಂದ ರಾಜಿಸಿತು
ರಾಜಬೀದಿ ‖ ೪೦ ‖

ಎಲ್ಲಿ ನೋಡಿದಡೆ ಮಣಿಖಚಿತ ಪ್ರಾಸಾದಮಯ ।
ಮೆಲ್ಲಿ ನೋಡಿದಡೆ ಗೋಪುರ ಚಿತ್ರ ಭುವನಮಯ ।
ಮೆಲ್ಲಿ ನೋಡಿದಡೆ ಸೌಂದರ್ಯವನುತೆಯರ ಮಯ ಸಕಳ
ಸೌಭಾಗ್ಯಮಯವೂ ‖

ಎಲ್ಲಿ ನೋಡಿದಡೆ ಪರಿಮಳ ಪುಷ್ಪ ಗಂಧಮಯ ।
ಮೆಲ್ಲಿನೋಡಿದಡೆ ಶಾಸ್ತ್ರಾಗಮದ ಘೋಷಮಯ ।
ಮೆಲ್ಲಿನೋಡಿದಡೆ ಮಂಗಳ ವಾದ್ಯ ನಿನದಮಯ ಗೋದ್ವಿಜಾದಿ
ಗಳಮಯವ್ದಿ ‖ ೪೧ ‖

**ಸೂತನು ಶ್ರೀ ಕೃಷ್ಣರಾಜಗೃಹ ನೋಡುವಿಕೆ**

ಠಾ (ಆ) ರಾಜಿಸುವ ಪುರದ ಸಿರಿಸೊಬಗ ನೀಕ್ಷಿಸುತ ।
ಸಾರಥಿಯು ಬರೆ ಮುಂದೆ ತನ್ನೊಳಿರುವಚ್ಯುತಂ ।
ಧಾರುಣಿಯೊಳವತಾರಮಂ ತಾಳ್ದನೇಂ ದ್ವಿತಿಯ ರೂಪದಿಂ
ವೈಕುಂಠವು ‖

ಭೂರಿ ಮಾಣಿಕ ವಜ್ರ ನವರತ್ನ ಭೂಷಣದಿ ।
ದ್ವಾರಕೆಯೊಳ್ಕೈತಂದು ನಿಂದುದೆನು ರಾಜಗ್ರಹ ।
ತೋರಣಾವಳಿಯು ಕರುವಾಡದಿಕ್ಕೆಲದಂದ ಕಂಗೊಳಿಸು
ತೀವೇಳ್ವೆನು ‖ ೪೨ ‖

ಶ್ರೀ ರುಕ್ಮಣೀಕಾಂತನರಮನೆಯ ವರ್ಣಿಪಡೆ ।
ನೀರಜೋದ್ಭವ ಭವವರಿಗಸದಳಂ ತನ್ನೊಶವೆ ।
ಪಾರಿಜಾತ ಪ್ರಸರ ಪರಿಮಳದ ಕಂಪಿನಿಂದೆಸೆವ ಹರಿ
ಮಂದಿರವನು ‖

**ಇಂದ್ರಸೇನಂಗೆ ಶ್ರೀಕೃಷ್ಣ ಸಂದರ್ಶನ**

ಧಾರುಣೀಶನ ಸೂತ ಕಂಡು ಪುಳಕೋತ್ಸವದಿ ।
ತೇರಿನಿಂದಿಳಿದು ವ್ಕೈಯಿಕ್ಕಿ ನುತಿಸುತ ಪೊಕ್ಕ ।
ದ್ವಾರಮಂ ಪಾಂಡವರ ಭಿಡೆಯೆನಿತೊ ಕೃಷ್ಣಂಗೆ ತಡೆಯರೋ-

೧ ಕಮಲಾಸನ=ಹರುಷನಿರ್ಭದ=ಬಹು ತುಂಬಿದ ಸಂತೋಷ.

( ತಡೆಯಲಿಲ್ಲೋರ್ವರೊಳಗೆ ) — ರ್ವಂತರದೊಳು ||೪೩||
ಕೇಳಿರೆಲೆ ಮುನಿಕುಲವೆ ವಜ್ರ ವೈಡೂರ್ಯಮಣಿ ।
ನೀಲಮೌಕ್ತಿಕ ಶಾತಕುಂಭದಿಂ ವಿರಚಿಸಿದ ।
ವಾಲಗದ ಶಾಲೆಯೋಳ್ ಸಿಂಹ ಪೀಠದ ಮ್ಯಾಲೆಕೋಟಿರವಿ
ಕಾಂತಿಯಿಂದ ||
ಶ್ರಿಲೀತಾಂಗಿಯರಮಣ ಕೃಷ್ಣರಾಯಂ ಬಂಧು ।
ಜಾಲದಿಂ ಕುಳಿತಿರಲ್ಕಂಡು ಸಾಷ್ಟಾಂಗದಿಂ ।
ಬಾಳಮುಂಚಾಚಿ ಪದಕೆರಗಿಕಾಣಿಕೆ ನಿತ್ತ ನೂತಭಯ
ಭಕ್ತಿಯಿಂದ || ೪೪ ||

ಇಂದ್ರಸೇನ ಸೂತನು ಶ್ರೀ ಕೃಷ್ಣನಿಗೆ ಧರ್ಮರಾಜನ ಬಿನ್ನೈಸುವಿಕೆ

ಅವಧರಿಸು ದೇವಯಾದವಕುಲ ಮಹಾಂಬುನಿಧಿ ।
೯ಕುವಲಯಾ ನಂದಕರ ಶ್ರೀನಾಥ ನಿಮ್ಮನಿಂ ।
ದವನಿಪತಿ ಧರ್ಮಸಂಭೂತ ಬಿಜಯಂಗೈಸಿತಹುದುದೆಂದು
ರಥವನಿತ್ತು ||
ತವಪಾದ ಪಂಕಜದ +ಪೊರೆಗೆನ್ನ ಕಳುಹಿದಂ ।
ತವಕ ಮಿಗಿಲೆನುತ ಬಿನ್ನವಿಸಿ ಕೈ ಮುಗಿಯೆ ।
ಭವಹರಂ ಕೃಪೆಯಿಂದ ಮನ್ನಿಸಿದನಾತನಂ ಮಧುರತರ ವಾಣಿ
ಯಿಂದ || ೪೫ ||

ಶ್ರೀ ಕೃಷ್ಣನಿಂತು ವಿಚಾರ ಗೈದುಂ

ತೀರ್ದನಲ್ಲಿಯು ರಾಜಕಾರ್ಯದನುವಂ ಬಳಿಕ ।
ನಳಿನನಾಭಂ ತನ್ನ ಮನದೊಳಗೆ ಶಿಶುಪಾಲ ।

---

೧ ಧ್ವನಿ ಕೂಗು ೨ ತನ್ನೊಳಿರುವಚ್ಯುತಂ=ತನ್ನಬಿಂಬ ನಾದರ್ಹರಿಯೋ ಶ್ರೀ ಕೃಷ್ಣನು ತನ್ನಿಂದ ಎಂದೂ ಅಗಲದಿದ್ದ ( ಈ ಶಬ್ದಪ್ರಯೋಗದಿಂದಲೇ ಈ ದಾಸರು ದೇವಾಂಶರೆಂದು ನಿಶ್ಚಯು ೩ ವೈಯಿಕ್ಕಿ = ದೇಹವನಿಕ್ಕಿ ಸಾಷ್ಟಾಂಗ ನಮನಮಾಡಿ ೪ ಶಾತಕುಂಭ=ಬಂಗಾರ ೫ ಬಾಳಮುಂಚಾಚಿ=ಬಾಳ=ಕತ್ತಿಖಡ್ಗ ತನ್ನ ಕಟಿಯಲ್ಲಿ ಸಿಲುಕಿದ್ದ ಕತ್ತಿ ಮುಂದಿಡು

ಖಳದಂತವಕ್ತ್ರ ಮಾಗಧ ಭೂಮಿ ಭಾರಕರ ಕೊಲ್ವದಕೆ
ಸಮಯವೆಂದು ||
ಸಲೆ ನಿಶ್ಚಯಂ ಮಾಡಿ ಸಂಭ್ರಮದೊಳಕ್ರೂರ |
ಬಲರಾಮವಸುದೇವ ಮುಖ್ಯರ್ಗೆ ಪ್ರುತಿಗೊಳಿಸು |
ತೊಲುವಿನಿಂ ಪಾಂಡುವರ ಊರಿಗೆ ಗಮಿಸುವನಾದಿಂದ್ರ
ಸೇನಕನ ಕೂಡೆ || ೪೬ ||

ಶ್ರೀ ಕೃಷ್ಣ ಇಂದ್ರಪ್ರಸ್ಥಕ್ಕೆ ಪೊರಡುವಿಕೆ

ಹೊರವಂಟ ನರಮನೆಯ ಮಣಿಖಚಿತ ಕಾಂಚನದ |
ವರರಥ ವಡೆದುರ್ಕೈವಾರಿಗಳಗಡಣದಿಂ |
ಪುರಜನರ ಭೂಸುರರ (ಮಹಿಸುರರ) ಜಯ ಜಯ ನಿನಾದದಿಂ
ಹರಿಯು ಮುಂದೆಸೆದು ತನ್ನ ||
ಶರಣರಂ ಕಾಣ್ಬಲವಲವಕೆಯೋಳ್ಪಥವಿಡಿದು |
ಹರಿಯು ವೇಗದಲಿಂದ್ರ ಪ್ರಸ್ಥನಗರ್ಕೈತರಲು |
ಲವಲವಿಯೋಳ್ ಚರರ್ಬಂತಂದು ಬಿನ್ನವಿಸೆ ರಾಜಂಗೆ
ಸಂತಸದೊಳು || ೪೭ ||

ಧರ್ಮನು ದೂತರಿಂ ಶ್ರೀಕೃಷ್ಣನಾಗಮನ ಕೇಳ್ದು ದರ್ಶನಮಾಡ್ದ

ಜೀಯ್ಯ ಚಿತ್ತೈಸುನವಿಸ್ಮಾಪ್ಪೂಳಲ ಪೊರಗಂಬು |
ಜಾಯತಾಕ್ಷಂ ಬಂದನೆನೆ ಕೇಳ್ದು ಹರುಷದಿಂ |
ದಾಯಮಜಂಘಳಿಲೆದ್ದು ಅವರಿಗುಚಿತವ ಕಂಠಮಾಲೆ
ಭೂಷಣವನಿತ್ತು ||
ವಾಯುಸಂಭವ ಧನಂಜಯ ಧೌಮ್ಯ ದ್ರುಪದ ಮಾ |
ದ್ರೇಯ ದೃಷ್ಟದ್ಯುಮ್ನ ನವನನುಜ ಸಂಚ ಕೈ |
ಕೇಯರಿಂದೊಡಗೂಡದಿರ್ಗೊಂಬ ತವಕದಿಂ
ಪೊರಮಟ್ಟನರ್ಥಿಯಿಂದ || ೪೮ ||

---

೧ ಅವಧರಿಸು=ಕೇಳಯ್ಯ ೨ ಕುವಲಯ=ಭೂಮಂಡಲಕ್ಕೆ ಆನಂದಕರ ಪೊರೆಗೆ=ಸಮೀಪಕ್ಕೆ ೪ ಕೈವಾರಿಗಳ=ಸ್ತೋತ್ರಮಾಡುವ ಕೊಂಡಾಡುವರ ಸಮೂಹದಿಂದ ೫ ಲವಲವಿಕೆ=ಔತ್ಸುಕ್ಯ, ಆತುರ ೬ ಘಳಿಲೆದ್ದು=ಚಕ್ಕನೇ ಎದ್ದು.

ಶ್ರೀ ಕೃಷ್ಣನಾದರಿಸಿ ಕುಶಲಪ್ರಶ್ನೆಗೈದುದು

ಗುಡಿ ಕಳಸ ಕನ್ನಡಿ ಪತಾಕೆ ತೋರಣದಿಂದ ।
ಸಡಗರದೊಳಾಪುರವ ಸಿಂಗರಿಸಿ ಪಾರಕರ (ವರ)
ಗಡಣದ ಮೊಗಳ್ಕೆಯಿಂ ವಾದ್ಯ ನಿರ್ಘೋಷದಿಂದ ಖಿಳ
ಚತುರಂಗದೊಡನೆ ॥

ನಡೆತಂದು ಭೂವರಂ ದಾಮೋದರನ ಕಾಣು ।
ತಡಿಗೆರಗೆ ಮುರಹರಂ ಮಣಿದೆತ್ತಿ ಬಿಗಿಯಪ್ಪಿ ।
ತೊಡನೆ ಭೀಮಾರ್ಜುನರ ತಕ್ಕೈಸಿ ಕರುಣದಿಂ ಪೆಮಳರಂ
ಮನ್ನಿಸಿದನು ॥ ೪೯ ॥

ಶ್ರೀವರಂ ವಂದಿಸುವ ದ್ರುಪದಾದಿ ನೃಪರ ಸಂ ।
ಭಾವನೋಕ್ತಿಗಳಿಂದಲುಪಚರಿಸುತರಮನೆಗೆ ।
ಭಾವ ಮೈದುನರೊಡನೆ ಕೈಗೊಟ್ಟು ನಡೆದು ಬರ
ಕೃಷ್ಣ ಕಮನೀಯ ಗಾತ್ರ ॥

ಶ್ರೀ ಕೃಷ್ಣಗೆ ದ್ರೌಪದಿ ನಮನಗೈದುದು

ದೇವಸರಸಿಜನೇತ್ರ ಬ್ರಹ್ಮ ಭವಸುರ ಸ್ತೋತ್ರ ।
ಪಾವನ ಚರಿತ್ರ ವಸುದೇವ ದೇವಕಿ ಪುತ್ರ ।
ಶ್ರೀ ವತ್ಸಧರ ಪ್ರಕಟ ಕಟಿಸೂತ್ರ ಸಲಹೆಂದು ನಮಿಸಿದಳ್ಪದಕೆ
ಬಂದು ॥ ೫೦ ॥

ವಂದಿಸಿದ ದ್ರೌಪದಿಯ ಸಿರಿಮುಡಿಯುದಯದಿಂದ ।
ದ್ವಂದ್ವಕರಕಮಲದಿಂ ಪಿಡಿದೆತ್ತಿ ಪರಸುತ್ತ ।
ಮಂದಿರಕೆ ಬೀಳ್ಕೊಟ್ಟು ಭದ್ರಮಂಟಪಶಾಲೆ ಗೈತಂದು ಕುಳಿತು
ನೆರದಾ ॥

ಸಂದಣಿಯ ಪೌರಜನ ಪರಿಜನರ ಮನ್ನಣೆಗ ।
ಳಿಂದ ಕಳುಹಿಸಿ ಬಳಿಕ ಮುರವೈರಿ ಭೂಪಂಗೆ ।
ಮಂದಸ್ಮಿತದೊಳೆಂದನೇಕಾಂತ ಭುವನದೋಳ್ಮಧುರತರ
ವಚನದಿಂದ ॥ ೫೧ ॥

ಶ್ರೀ ಕೃಷ್ಣ ಧರ್ಮರಾಜಂಗೆ ತನ್ನ ಕರಸಿದ ಬಗೆ ಕೇಳ್ದುದು

ಯಾಕೆ ಕರಸಿದಿರೆನ್ನ ಘನಪ್ರಯೋಜನವೇನು ।
ವ್ಯಾಕುಳ ಮದೇನು ದುರ್ಘಟವದೇ ನವಜಯುದ ।
ಲೋಕಸಂಕಟ ಬಂದ ಬಾಧೇನು ಕರ್ಬುರರ ಕೌರುವರ
ದೆಶೆಯುಲಿಂದ ॥

ಭೀಕರದದುಃಖ ಭಯುವೇನು ನಿಮಗಿಲ್ಲೆಲೇ ।
ಭೂಕಾಂತ ಹದನೇನು ಪೇಳೆನಲ್ ಶ್ರೀ ಹರಿಯೆ ।
ಲೋಕತ್ರಯು ಚರಾಚರ ವ್ಯಾಪ್ತ ನಿನಗೇನಗೋಚರವೆ
ಸರ್ವಜ್ಞನೆ ॥ ೫೨ ॥

ಧರ್ಮರಾಜನು ಶ್ರೀ ಕೃಷ್ಣಂಗೆ ಬಿನ್ನೈಸಿದನೆನೆ

ದನುಜಹರ ಚಿತ್ತೈಸು ದಾನವರ ಕೌರವರ ।
ರನುವರದ ಭಯುವೇನು ಭಾರವೇ ನಿಮ್ಮಂಘ್ರಿ ।
ವನಜ ಸೀಸಕ ವೈವರುತ್ತುಮಾಂಗದೊಳಿರಲು ೨ಪರಿಭವೆತ್ತ
ಣದು ತಮಗೆ ॥

ಮುನಿಪನಾರದನೊರದು ಬೊಪ್ಪನಮರೇಂದ್ರನಲಿ ।
ಘನಪೂಜ್ಯನಾಗಿಲ್ಲವೆಂದು ನಮ್ಮನಿಬರಿಂ (ನಮಗಿನಿಬರಿಂ) ।
ಗಿನಿತು ಸಾಮರ್ಥ್ಯ ವಿಭುವಿದ್ದುದಕೆ ಫಲವೇನು ತಾತಂಗೆ
ಗತಿಗೊಡದಿರೆ ॥೫೩॥

ಪಿತನ ಪರಮ ಪ್ರೀತಿ ಗುನ್ನತದ ಸದ್ಗತಿಗೆ ।
ಕೃತುರಾಜಸೂಯುವೇ ದಿವ್ಯ ಸಾಧನವೆಂದು ।
ಹಿತದಿಂದಲುಪದೇಶಿಸಿದ ನಮಗೆ ಸುರಮೌನಿಗುಣದಿಂದ-
ಧನವಧರಣೀ ॥

ಪತಿಗಳೀಯ್ಯೈರ್ಮಹಾ ದುರ್ಲಭದಯಾಗಮಂ ।
ಮತಿಮರೆದು ಕೈಕೊಂಡೆನೆಲೆ ಕೃಪಾನಿಧಿದೇವ ।
ವ್ರತದ ಸಂಕಲ್ಪವಾಯ್ತಿದಕೇನು ಹದನೆಂದು ಬಿನ್ನೈಸಿದಂ
ಭೂಪನು ॥ ೫೪ ॥

---

೧ ತಮ್ಮ ಪಾದಕಮಲದಯೆಂಬ ಸೀಸಕ=ಉಕ್ಕಿನ ಕುಲಾಯಿ, ಕಿರೀಟ. ೨ ಪರಿಭವ=ತಿರಸ್ಕಾರ, ಸೋಲು, ದುಃಖ ೩ ಬೊಪ್ಪ=ತಂದೆ, ಒಡೆಯ, ನಾಯಕ.

ಅರಿದರಿದ ಸತ್ಯ ನಾನುಡಿಯಲೀ ಸಂಕಲ್ಪ ।
ವಿರದೆಭ್ರಷ್ಟಾಗುವದು ಮೇಲೆ (ವ್ಯಾಲೆ) ಸುರಲೋಕದೋಳ್
ಪರಿಹಾಸ ಹರುಹುವಂ ಮುನಿಮೌಳಿ ನಾರದಂ ಜನಕಂಗೆ
ದಿವಿಯಾಗದು ॥

ಧರೆಯೊಳೀ ಪಾತಕಕೆ ಗುರಿಯಾದೆನೆಲೆಜೀಯ ।
ಶರಣಾಗತರ ವಜ್ರ ಪಂಜರನೆ ಶ್ರೀಕೃಷ್ಣ ।
ಕರುಣದಿಂದೆನ್ನ ಭವಸಾಗರವ ದಾಟಿಸೆಂದೆರಗಿದಂ ಪದಕೆನೃಪತಿ
॥ ೫೫ ॥

ಶ್ರೀಕೃಷ್ಣನು ದುರ್ಘಟವಾದ ರಾಜಸೂಯಾಗ ಕೈಕೊಂಡನೆ ?

ನಕ್ಕ ನಸುರಾರಿ ಭೂಪಾಲಕನ ಮಣಿದೆತ್ತಿ ।
ಲಿ (ತಿ) ಕ್ಕಿದನಲಾಯುಶಿಯು ಬಲೆಯು ನಕಟಕಟಹಾ ।
ಸಿಕ್ಕದೆಯೆಲಾ ವಿಚಾರಿಸದೆ ಕೈಕೊಂಡೆ ಲಾನಾಧ್ಯವಲ್ಲದ
ಕಾರ್ಯವಾ ॥

೧ಅಕ್ಕಜದಮುಖದೇಳ್ಗೆಯಂ ಕಂಡು ಪಗೆಯಾದ ।
ರಕ್ಕಸರ್ ಸೈರಿಪರೆ ವಿಘ್ನವಾಚರಿಸುವರ್ ।
ಮಕ್ಕಳಾಟಿಕೆಯಾಯಿತೆನುತೆನುತ ತೂಗಿದನವುಳ ಭೂಷಣದ
ಸಿರಿಮುಡಿಯನು ॥ ೫೬ ॥

ಕೆದರಿನವ್ಯಾಬ್ಧಿನವಖಂಡ ದ್ವೀಪಾಧಿಪರ ।
ಸದದು ಕಪ್ಪವ ತಂದು ಮಖರಚಿಸಿ ದ್ವೇಷಿಗಳ ।
ಬೆದರಿಗಂಗೈಸುವ ಪರಾಕ್ರಮದ ವೀರರಂ ಕಾಣೆ ಮಹಮಂಡಲ
ದೊಳು ॥

ಸುದತಿಯರ ಮುಂದುಬ್ಬಿನುಡಿಪೆಲಾ ಪೌರುಷವ ।
ಹದನರಿಯದಾಖುಷಿಯ ೨ಘಲ್ಲಣಿಗೆ ವ್ಯೆಗೊಟ್ಟು ।
ಮುದತೊರೆದು ಚಿಂತಿಸುವದರಿದೆಂದು ಸರಸದೊಳು ಹರಿ
ಭೂಪಗಿಂತೆಂದನು ॥ ೫೭ ॥

---

೧ ಅಕ್ಕಜದ=ಆಶ್ಚರ್ಯಕರವಾದ.

೨ ಘಲ್ಲಣಿಗೆ=ಜಗಳದಮಾತು

ಖೂಳರ್ಕೈ ಮೊದಲೆ ದುರ್ಯೋಧನಾದಿಗಳವ ।
ರ್ತಾಳುವರೆ ನಿಮ್ಮ ಭ್ಯುದಯುವನುರೆ ಕಂಡು ಬಹು ।
ಕಾಲದಿಂ ಬೆಳಸುವ ವೈರಮಂ ಶಕುನಿ ಸೈಂಧವ ಕರ್ಣದುರ್ಮ
ತಿಗಳು ॥

ಕಾಲಯುವ ಮುರ ಹಂಸ ಡಿಬಿಕ ದುರುದುಂಬಿ ಶಿಶು ।
ಪಾಲ ಪೌಂಡ್ರಿಕದಂತ ವಕ್ರ್ರಮಾಗಧ ನರಕ ।
ಸಾಲವ ಶೃಗಾಳ ಮೊದಲಾದ ಸುರನಾಯಕರ್ನಮ್ಮ
ಹಗೆತನವ ಬಳಸಿ ॥ ೫೮ ॥

ಕೆಲಬರಿದರೋಳ್ ಯುದ್ಧರಂಗದೊಳ್ನಮ್ಮಿಂದ ।
ಕೊಲಿಗೆ ಭಂಗಕೆ ಬಂದು ಬಿದ್ದು ಹರಣವತೊರೆದು ।
ರುಳಿದ ೧ಮಲವರಮಾರಿ ಮಾಗಧನಕೂಡೆಮಗೆ ಬಲವ
ದ್ವಿರೋಧ ಬೀಳೆ ॥

ಬಳಿಕವನ ಘನ ತೋಟಿಗಾರದತಿ ಭಯದಿಂದ ।
ಜಲಧಿಮಧ್ಯದೊಳೂರು ಕಟ್ಟಿದೆ ನಿದಲ್ಲದಿಂ ।
ನ್ನಳಿಯನಹ ನಾತಂಗೆ ಮಾವಕಂಸನನಂದು ತರಿಯುಲಾತನ
ಸತಿಯರು ॥ ೫೯ ॥

ದೂರಿದರ್ ಮಗಧಂಗೆ ಕೇಳುತತಿರೋಷದಿಂ ।
ಭೂರಿಬಲದೊಡನೆ ಮಧುರಾಪುರಕೆ ನಡೆತಂದು ।
ಘೋರತರಸಮರಂಗಮಂ ಮಾಡಿದೆನ್ನೊಳವನುಪಟಳವ
ಸೈರಿಸದಲೆ ॥

ಜಾರಿನಾನಾದುರ್ಗವಂ ತೊಳಲಿ ಬಳಲಿದೇಂ ।
ಕ್ರೂರಖಳನಿವನು ೨ ಬಲುಗೈಭಟನು ಮುಖವೈರಿ ।
ಮಾರಿಯುನು ಮುರಿಯು (ಉ) ವಾಯುವಕಾಣೆನೆಂದ-
( ಸುರಾರಿನುಡಿಯೆ, ನೃಪನಿಂತೆಂದುನು ) ಸುರರಿಪು ನುಡಿಯೆ,
ನೃಪನೆಂದನು ॥ ೬೦ ॥

---

೧ ಮಲವಲ ಮಾ॰= ೨ ಮಹಾಪರಾಕ್ರಮಿವೀರ.

ಧರ್ಮರಾಜನು ಹೇ ಕೃಷ್ಣ ಮಗಧನು ನಿಮಗಸಾಧ್ಯನೆ ?

ಈಸುದೈತ್ಯರ್ ನಿಮ್ಮ ಕೈಯಿಂದ ಹತರಾಗಿ ।
ವಾಸವಾದರ್ನಿರಯದೊಳಗೆ ಮಾಗಧನೊಬ್ಬ ।
ಮೊಸಲುಳಿದನುಗಡ ಮಹ ಕೌತುಕವ ಕೇಳ್ದೆವಿಂದು
ಮರೆಮೋಹಕವನು ॥

ದಾಸರೋಳ್ಬೇರುವರೆ ನಾಕದಂತಿರ ಲವನ ।
ಲೇಸಾಗಿ ೧ ಕೈವಾರಿಸುವಿರಸುರನದ್ಧಟನೊ ।
೨ಭೇಷಜವೋ ವರಬಲವೊ ಸಹಜವೂ ಮೇಣಾರು ಬೆಸಸೆಂದನಾ
ಮಹೀಶಾ ॥ ೬೧ ॥

ಶ್ರೀ ಕೃಷ್ಣನು ಜರಾಸಂಧನ ಉತ್ಪತ್ತಿ ಪೇಳ್ವನಿಂತೆನೆ (೧೦ ಪದ್ಯ)

ಧರಣೀಂದ್ರಕೇಳ್ ಬೃಹದ್ರಥಾಖ್ಯಂಬೋರ್ವ ।
ನರಸ ಮಾಗಧ ಮಹೀಮಂಡಲಕ ಗಿರಿವ್ರಜ ನ ।
ಗರಪಾಲಿಸುತಿರ್ದ ನಿಖಿಳ ಸೌಭಾಗ್ಯದಿಂದೀರ್ವರರಮಣಿಯರ
ಕೊಡೆ ॥

ಪರಿಪರಿಯ ಸುಖಗಳನು ಭೋಗಿಸುತ ಚಿಂತಿಸಿದ ।
ವರಕುವರ ತನಗೊಬ್ಬ (ಗೋರ್ವ) ನಿಲ್ಲೆಂದು ಮನದೊಳಗೆ ।
ಪರಮ ವೈಭವವೆನಗೆ ನಿಷ್ಫಲಂ ದಿವಿಯಿಲ್ಲವೆಂದು ನಿಶ್ಚೈಸಿ
ಬಳಿಕ ॥ ೬೨ ॥

ಅವನೀಶ ವೈರಾಗ್ಯದಿಂದ ರಾಜ್ಯವನುಳಿದು ।
ಯುವತಿಯರ ಸಹಿತ ವನದೊಳಗೆ ಕಾಯುವನಳಿವ ।
ಹಣವದೋಳ್ ಮಂದಿರವ ಪೊರಮಟ್ಟು ಪಟ್ಟಣದಬಾಹಿರಕೆ
ಬರಲು ಬುಧರ ॥

ನಿವಹದಿಂದೈತರುವ ಮುನಿಕೌಸಿಕನ ಕಂಡು ।
ಜವದೊಳಾತನ ಪಾದಕಭಿನಮಿಸಿ ಬೋಳೈಸಿ ।
ಸುವಿಲಾಸದಿಂಪರಸಿ ಮಂತ್ರಾಕ್ಷತೆಯನಿತ್ತು ಕೃಪೆಯಿಂದ
ಬೆಸಗೊಂಡನು ॥ ೬೩ ॥

---

೧ ಕೈವಾರಿಸುವಿರ = ಹೊಗಳಿಕೆ, ಪ್ರಶಂಶೆಸಾಕು. ೨ ಭೇಷಜವೋ = ಔಷಧವೊ=ಮದ್ದೋ.

ರಾಯನಿನಗೇನು ಬಂದಾಯಾಸ ಲಿಂದಿನಲಿ ।
ದಾಯಾದ್ಯರಿಲ್ಲ ಮಾರ್ವಲವ ಪರಮಂಡಲದ ।
ನಾಯಕರ ಬಾಧಿಲ್ಲ ಸಾಮ್ರಾಜ್ಯ ತೋಲಗಿಲ್ಲ ಕಂಟಕಗಳಾವುದಿಲ್ಲ॥
ಈ ಯುವತಿಯರ ಕೂಡಿಕೊಂಡು ವಿಪಿನಕವ್ಪೋಗು ।
ವೀಯವಸ್ಥೆಮುಗ (ನಗೆ) ಮಾಜದುಸುರೆಸೆ ಮಹಿಪ (ಭೂಪ) ।
ಹಾಯೆಂದು ಮರುಗಿ ಚಿತ್ತದಿಕ್ಲೇಶವಂ ಬಡುತ
ಬಿಸಸುಯ್ವುತಿಂತೆಂದನು ॥ ೬೪ ॥

ಮುನಿಪಚಿತ್ತೈಸು ನಿವ್ಮ್ಹೊ (ಲ್ಮ್ಹೆ) ಲುಮೆಗಳ ಬಲ್ಪಿನಿಂ ।
ದೆನಗಮಿತ ಸಿರಿಯಿಹ್ಯದು ವಂಶೋದ್ಧರಣೆಕೊಬ್ಬ । (ಕೋರ್ವ)
ತನುಜನಂ ಕಾಣದತಿ ವೃದ್ಧಾಪ್ಯನಾದೆ ನಿಹಪರ ಸುಖಗಳಿಲ್ಲ
ವೆಂದು ॥
ಮನದೊಳಗೆ ತಿಳಿದಖಿಳ ಭೋಗ ವಿಭವನು ಜರಿದು ।
ಮನವಾಸವಂ ಗೈದು ಸಲಿಲಪರ್ಣವ ನಲಿಸು ।
ತನುದಿನಂ ತಪದಿಂದ ಬಿಡುವೆ ಗಾತ್ರವನೆಂದು ಬರೆಕಂಡೆ
ತವಚರಣವ ॥ ೬೫ ॥

ಎಂದು ಬಿನ್ನಹವಾಳ್ಪ ಧರಣಿಪನ (ಹವಣಿಪನ) ಸಂತೈಸು ।
ತಂದು ಮುನಿನಾಥ ಮಂತ್ರವ ಜಪಿಸಲಾಕ್ಷಣಂ ।
ಬಂದೊದಗಿತೊಂದು ರಸಪೂರಿತದ ಚೂತ ಫಲಸೋಡಿ
ಭೂಪತಿಯಕರದು ॥
ದ್ವಂದ್ವಪಾಣಿಗಳಿಂದ ತಗದಿತ್ತು ಕೊಡು ನಿನ್ನ ।
ಇಂದು ಮುಖಿಯಳಿಗೆ ಸುತಲಾಭವಾಗುವದೆಸಲು ।
ವಂದಿಸುತ ಋಷಿಗೆ ಪರಿತೋಷದಿಂ ಬೀಳ್ಕೊಂಡು ಪುರಕೆ
ಮರಳಿದ ನೀನತ್ತಲು ॥ ೬೬ ॥

ಸರಿದಕೌಸಿಕ ಮುನಿಪ ತೀರ್ಥಯಾತ್ರೆಗೆ ಬಳಿಕ ।
ಧರಣೀಶನರಿಯದಾ ಪಣ್ಣಭಾಗವಮಾಡಿ ।
ತರುಣಿಯರ್ಗಿಯಲ್ಕೆ ಬಲಿಮುದವರಿಗೆ ಗರ್ಭ
ವೇನೆಂಬೆನಚ್ಚರಿಯನು ॥

ವರಮಂತ್ರ ಚೂತಫಲ ಶೀಳಿತ್ತು ಕಾರಣದೊ ।
ಳಿರದರ್ಧ ದೇಹ ಪೊಬ್ಬೊಬ್ಬರಲಿ ಸಂಜನಿಸ ।
ಲರಸಿಯರ್ ಕಂಡಕಟ ದುಷ್ಕೃತವ ಸುಡಲೆನುತ ಬಿಸುಟರಾ
ಪೋಳುಗಳನು ॥ ೬೭ ॥

ನಡುವಿರಳ್ ಜರೆಯೆಂಬ ರಕ್ಕಸಿಯು ಭಕ್ಷಣ ।
೧ ಕ್ಕಡಗು ನರಸುತ ಬರುತ ಕಂಡಳೀ ಪೋಳುಗಳ ।
ಜ್ಞುಡುಕಿಗನ್ನದಿ ಶಿಶುವ ಶೀಳ್ದು ಬೀದಿಗೆ ಬಿಸುಟ ಪಾಪಾತ್ಮ
ರಾರೊಯೆಂದು ॥

ಖಡ್ಗಬಲವನಾರೈದು ಜಿರಗಾಗಿ ಶೀಳಿರಡ ।
ಬಿಡದೆ ಪೊಂದಿಸಲಸುವ (ವು) ಪಸರಿಸಲ್ ಚೀರ್ದ ।
ಭರಶಿಡಿಲರವದಂತೆ ಖಳನಾರ್ಭಟೆಯು ಕೇಳಿ ಪುರಜನಂಗಜ
ಬಿಜನಲು ॥ ೬೮ ॥

ಏನಿದೆತ್ತಣದುಗ್ರ ರಭಸ ಮೂರೂಳಗೆನುತ ।
ಲಾನಗರ ಜನರ ಕೈದೀವಿಗೆಗಳೊಗ್ಗಿನಿಂ ।
ಭೂನಾಥನಡೆತರಲ್ಕಂಡನಾಗಳೆ ಹಸುಳ ದೈತ್ಯನೀರ್ವರ
ನಿದಿರಿಲಿ ॥

ಈ ನಿಶಿಯೊಳದ್ಭುತದ ಘರ್ಜನೆ ಇದೇನೆಮಗೆ ।
ದಾನವಿಯೆ ನಿರ್ಭಯದೊಳಗರುಹೆಂದು ಜಿನಗೊಳಲು । (ಲ್)
ಸಾನುರಾಗದೊಳೆಂದಳರಸಂಗೆ ತರಳನಂ ಶೀಳ್ದು ಬಿಸುಟಿರಲು
ನೋಡಿ ॥ ೬೯ ॥

ಜೋಡಿಸಿದೆನಂಗವಸುಪಸರಿಸಲ್ ಚೀರ್ದನಿವ
ರೂಢಿಯೋಳ್ ಸಲಹೆನ್ನನಾಮದಿಂ ಕರೆಸುತ್ತ ।
೨ ಬೀಡಿಂಗೆ ಕೊಂಡು ನಡೆಯೆಂದು ಜರೆ ಭೂಪತಿಗೆ
ಕೊಡಲಾಕೆಯಂ ಮನ್ನಿಸಿ ॥

ಮಾಡಿದಾನಂದದಿಂ ದ್ವಿಜ ವ್ರಜಕೆ ದಾನಮಂ ।

---

೧ ಅಡಗು = ಮಾಂಸ.

ದೀವಿಗೆಗಳೊಗ್ಗಿನಿಂ=ದೀಪಗಳ ಒಗ್ಗಿನಿಂ=ಸಮೂಹದಿಂದ. ೨ ಬೀಡಿಂಗೆ=ಮನೆಗೆ.

ಮಾಡಿ ಪೆಸರಿಟ್ಟ ಜರಾಸಂಧನೆಂದಸುರ ।
ಗೀಡಿಲ್ಲ ಜಗತಿಯೊಳ್ಗಲುಗ್ರೈಯ್ಯ ಭಟನೆಂದು ಪಾಲಿಸಿದ
ಮೋಹದಿಂದ ॥ ೭೦ ॥

ವಸುಸುತಿಯು ಕಾಂತಕೇಳ್ ಋಷಿಯು ವರಬಲದಿಂದ ।
ಅಸುರಸುರ ಮರ್ತ್ಯರ್ಗೆ ವಿಷಮಭಟನೆಂದೆನಿಸಿ ।
ದಸಮಸಾಹಸದ ಜೋಡೆಣೆಸುರದು ದವನಲ್ಲಿಯದರಿಂದ-
ಮಾಗಧನನು ॥

೧ ಕುಸುರಿದರಿವದ ಕುವಾಯುವಕಾಣೆನಾನೆಂದು ।
ಬಿಸಿಜದಳಲೋಚನಂ ಧರ್ಮಜನ ಮೊಗನೋಡಿ ।
ನಸುನಗುತ ನುಡಿಯಲಾ ಭೀಮಸೇನಂ ತನ್ನ ಪೌರುಷ ।
ದೊಳ್ತಂದನು ॥ ೭೧ ॥

ಭೀಮಸೇನಂ ಮಗಧಾದಿಗಳಂ ತರಿವ ಪ್ರತಿಜ್ಞೆ

ಮುರಮಥನ ಚಿತ್ತೈಸು ೨ ಮುರಕಿಸುವ ೩ ತರಿ(ರ) ಕಿಸುವ ।
ಧರಣೀಶರಂ ಮುರಿದು ತರಿಸುವೆಂ ಹರಿಸುವೆಂ ।
೨ರದ ಮೇಲೆಪರಿಮಿತ ಧನಗಳಂ (ಜನಗಳಂ) -
ಮುನಿಗಳಂ ಕರಿಸುವೆಗದಿ ಯಾಗದ ॥
೪ಹೊರಿಗೆ ತನ್ನದು ನಿಮಗೆ ಪಗೆಯಾದ ಬಗೆಯಾದ ।
ದುರುಳ ಮಾಗಧ ಚೈದ್ಯ ಘಾತಕರ ।
ತರಿದು ಬಿಸುಟುವೆ ಗದೆಯು ೫ಹುಯಿಲೊಳಗೆ ಹುಯಿಲೊಳಗೆ
ಬೆಸನಂದನಾ ಭೀಮನು ॥ ೭೨ ॥

ವೀರಪಾರ್ಥನ ಬಲ ವೀರ್ಯನದ್ಭುತ ಸಂಕಲ್ಪ

ಮಹಿಯೊಳಗೆ ಭುಜಬಲದ ಮನ್ನಯರ್ನುಖಿವ ಸಿ ।
ವರ್ಣಿಸಲೀ ಯರ್ಗಡ ಜರಾಸಂಧಖಳನು ಪಿ ।

೧ ಕುಸುರಿದರಿವದಕೆ = ಸಣ್ಣಾಗಿಚೂರು ಮಾಡು ಸಂಹರಿಸುವದಕೆ ೨ ಸ್ವೈಯಾರ ಮಾಡುವವರು ೩ ನಿಷ್ಠುರದ ಮಾತಾಡುವ ಕಠೋರ ಉಕ್ತಿಯುವದು ೪ ಮಾರ್ಗ, ಯಾಗಮಾಡಿಸುವ ಭಾರ. ೫ ಹುಯಿಲು = ಹೊಡದಾಟ ಹೊಯ್ದಾಟ = ಗರ್ಜನೆ.

ಗ್ರಹವೂಧಿಕನೆ ನಿಮಗೆ ಶತ್ರುಗಡ ನೃಪರಂಜಿ
ಕಪ್ಪವಂನೀಯುರು ಗಡ ||
ಅಹಿಪತಾಕಾದಿಗಳ್ಕಂಡು ಸ್ವೈರಿನರಿಗಡ ।
ಬಹುಚಿತ್ರಮಂ ಕೇಳ್ದಿ ನೆಲೆದೇವ ನಿಮ್ಮನು ।
ಗ್ರಹಕವಚ ತೊಟ್ಟಿರಲ್ಗಣ್ಯ ವೇನಧ್ವರಂ ತಮಗೆಂದನಾ-
ನಾರ್ಧನು || ೭೩ ||

ಯಾಕೆ ಗಾಂಡೀವಧನು ವಿಂಪ್ರಾಗ್ನಿ ವರುಣಾಸ್ತ್ರ ।
ವ್ಯಾಕೆನಗೆ ದಿವ್ಯರಥ ಸವ್ಯಸಾಚಿತ್ವ ಬಿರಿ ।
ವ್ಯಾಕೆ ಹರಿಧ್ವಜ ದೇವದತ್ತ ಶಂಖ ಶೌರ್ಯ ಧೈರ್ಯ
ಚಾತುರ್ಯವ್ಯಾಕೆ ||
ಲೋಕ ಶಿಕ್ಷಾರಕ್ಷಗಿಂತಿಲ್ಲದೇ ಬರಿದೆ ।
ನಾಕು ೧ ಹುಲುಮೂಂಡಳೀಕರಿವರನಂ ಸಮರದೊಳ್ ।
ನೂಕಲರಿಪೇನರಸ ಜಂಜಡಂ ನಿಮಗ್ಯಾಕೆ ಕೈಕೊಳಧ್ವರವೆಂದನು
|| ೭೪ ||

ನರಹು ೨ ಪಾರ್ವರ ಸಮ್ಮ ನಾಲ್ವರ ದಿಗಾಂತದೊಳ್ ।
ಪರುಹು ವಸ್ತುವಜ್ಯೈಸಿ ತರಲಿ ಸಂಶಯು ವ್ಯಾಕೆ।
ಧರಣಿಪತಿ ನೀಡೆಮ (ನ) ಗೆ ವೀಕ್ಷ್ಯಯುವ ನೋಡುವೆನು ಕದನ
ಕಾಮುಕರ ಬಲುಹಾ ||
ಧುರದೊಳ್ಜ ರಾನಂಧ ಮೊದಲಾದ ಕರ್ಬುರರ ।
ಮುರುಳು ಬಳಗಕೆ ಕಡಿವುತುಣಬಡಿಸುವೇಂಜೀಯ ।
ಕರಿ (ರೆ) ಸುಬಾಂಧವರ ಮುಖಶಾಲೆಯಂ ಮಾಡಿಸೇದಾ
ಧನಂ ಜಯ ನುಡಿದನು ||೭೫||

**ಭೀಮಾರ್ಜುನರ ನುಡಿಕೇಳಿ ಶ್ರೀಕೃಷ್ಣ ನಿಂತೆಂದನು.**

ಅಹುದು ಭೀಮಾರ್ಜುನರ ಪೌರುಷದ ವಾಣಿ ನಿ ।
ರ್ವಹಿಸು ವಡೆತಪ್ಪೇನು ವಿನಯ ವಿಕ್ರಮ ವಿದ್ಯ ।
ವಿಹಿತವೇನಿಜವಂಶ ವಿಖ್ಯಾತ ಪುರುಷಗೇ ರಾಜಸೂಯಾಗವೇನು||

---

೧ ಹುಲು= ಕ್ಷುಲ್ಲಕ, ಸಣ್ಣ ೨ ಪಾರ್ವರು= ಹಾರ್ವರು, ಬ್ರಾಹ್ಮಣರು

ಗಹನವೇ ನೀಗಂಡುಗಲಿಗಳಿರೆ ೧ ಮಾರ್ಮಲವ ।
ಮಹಿಪರಾರಲಿ ಧರ್ಮ ಸಂಭವನೆ ಸಂತಾಪ ।
ಮಹಿಗಗೋಚರಾಗದಲ ಮನವಮಾಡು ಸಿದ್ಧಿಸುವದೆಂದನಸುರಾರಿ
ನಗುತ ॥ ೨೬ ।

ಪುನಃ ಧರ್ಮರಾಜನು ಶ್ರೀ ಕೃಷ್ಣಂಗೆ ಬಿನ್ನೈಸುವಿಕೆ

ಪುರೆಯದ್ಭ್ರಾತಕ ದೇವ ರಾಜ ಸೂಯಾಧ್ವರದ ।
ಯೊರಿಗೆ ನಿಮ್ಮದು ತಮ್ಮ ಪಂಚಕರ ಧನಪ್ರಾಣ ।
ವರನಸಲ್ಲವೆ ೨ ಕೌಳಿಕವ ನರಿಯ ತವಪಾದ ಪಂಕಜವ
ನಂಬಿಹವೆಲ ॥

ಘುರದ ಜಯ ಪಪಜಯಂ ಕೂಡಿತ್ತೈ ನಿಮ್ಮಡಿಗೆ ।
ತರುಳರನುಜರ ಪಗೆಗಳತಿ ಬಲ್ಲಿದರ್ ಕೃಪೆಯ ॥
ಹರುಷಿಸಲಹೆಂದ ಸುರರಿಪುವಿನಂಘ್ರಿಗೆ ಹಣೆಯ ಚಾಚಿದನು
ಧರ್ಮಸೂನು ॥ ೨೭ ॥

ಶ್ರೀ ಕೃಷ್ಣನು ರಾಜಂಗೆ ರಾಜಸೂಯಾಧ್ವರನೆಸಗೆ ಪೂರ್ಣಾಶ್ವಾಸನ

ಭೂಮಿಪನಂತೆಗೆದು ತಕ್ಕೈಸಿಪ್ರೇಮದಿಂ ।
ನಾಮಾನ್ವಯದುಳೆಂಟ ನಿನ್ನಂದದರಸಿನ್ನು ।
ಈ ಮಹಿಪನಚ್ಚರಿಯ ನಿನಗಿಂದು ಕೈಕೊಳಲಿರ್ದು ನಡಸುವೆ
ನೀಕ್ಷಣ ॥

ಭೀಮಸೇನಾರ್ಜುನರ ನೀಡೆಮಗ ಮಾಗಧನ ।
ಭಾಮಿನಿಯ ಸೀಮಂತ ಮಣಿಗಳಂ ತರಿಸುವೆಂ ।
ನೇಮಿನಕ್ಷೋಹಿಣಿಯ ಸೈನ್ಯಕೆ ೩ ಮುಹುರ್ಧಿಕರ ಕರಿಸುತ್ವರಿತ
ದೊಳೆಂದನು ॥ ೨೮ ॥

ಸುತ್ತಣರಸರಿಗೋಲೆಯಂಬ ಧೃಡುಪುಗರಯ ।
ಸೀತ್ರೀಗ ಭೃತ್ಯರಂ (ಧೂತರಂ) ಕಳುಹು ದೀಕ್ಷಿತನಾಗು ।
ಉತ್ತಮಾಧ್ವರಕೆ ವಿಪ್ರೌಘಮಂ ಕರೆಸಖಿಳದ್ವೀಪಪಾಲಕರಜ್ಜೈಸಿ॥

೧ ಮಾರ್ಮಲವ= ಎದುರು, ಮಲೆತುನಿಲ್ಲು, ಕಾದುವಶೂರ.
೨ ಕೌಳಿಕವ=ಕಪಟವ ೩ ಮುಹುರ್ಧಿಕರ=ಸೈನ್ಯಕೆ ಮುಖ್ಯರು

ಪಿತ್ತಗ ೧ ವಮರಾಚಲದ (ನ) ಸರಿ ಪದಗಿಸುವೆವಿನ್ನು ।
ಚಿತ್ತದೊಳ್ ಸಂಶಯವ ಮಾಡದಿರು ಭೂಪನಿನ ।
ಗುತ್ತರೋತ್ತರ ಸಿದ್ಧಿ ಯಪ್ಪುದೆಂದ ಭಯವಂನೀಡಿದಂ
ರಾಕ್ಷಸಾರಿ ॥ ೭೯ ॥

ಶ್ರೀ ಕೃಷ್ಣನೊಡನೆ ಭೀಮಾರ್ಜುನರಂ ಮಾಗಧನಗೆಲಿಯೆ ಕಳುಹುವಿಕೆ

೨ ನಳಿನೋದರನ ವಚನಮಂ ಕೇಳ್ದು ಸಂತಸದ ।
ಜಲಧಿಯೊಳ್ಮುಳುಗ್ಯಾಡುತರಸ ಶುಭಲಗ್ನದೋಳ್ ।
ಫಲುಗುಣ ವೃಕೋದರಿಗಾಜ್ಞಯಂ ಕೊಡಲವರ್ ಭೂಪನಡಿ
ಯುಗಳಕರಗಿ ॥

ಸಲುವಿನಿಂ ಶ್ರೀ ಮನೋಹರ ವಿಠ್ಠಲನ ಕೂಡೆ ।
ಪ್ರಾಳಲ ಪೊರಮಟ್ಟರತಿ ಹರುಷದೋಳ್ ಚತುರಂಗ ।
ಬಲಸಹಿತಲುಲಿವ ಮಂಗಳವಾದ್ಯ ವಾದಕರ ಜಯ ಜಯ
ನಿನಾದದಿಂದ ॥ ೮೦ ॥

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ ಶ್ರೀಮದನಂತನ
ಕಥಾಸಂಧಿ ಪ್ರಸಂಗ ಅಂತುಸಂಧಿ ೨ ಕ್ಕೆ ಮಂಗಳಮಾಹ ।
ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ।

## ಶ್ರೀ ಅನಂತನ ಕಥಾ ಮೂರನೇ ಸಂಧಿ ಪ್ರಾರಂಭ

ರಾಗ ಮಾರವಿ **ಸಂಧಿಸೂಚನೆ** ಪಲ್ಲವಿ

ನಡೆದು ಭೀಮಾರ್ಜುನರ್ಮಾಗಧನ ಭೇರಿಗಳ ।
ನೊಡದು ಹರಿಸಹಿತಲಸುರನ ಸದನಮಂ ಪೊಕ್ಕು ।
ಬಡದವನ ಯುದ್ಧದೋಳ್ ತುರಿದು ವಿಜಯೋತ್ಸವದಿ-
ಹರಿಪ್ರಸ್ತ ಕೈತಂದರು ॥

---

೧ ಅಮರಾಚಲದ ಮೇರುಪರ್ವತ. ೨ ನಳಿನೋದರ=ಕೋಮಲವಾದ ಉದರ.

॥ ಶ್ರೀ ಮನೋಹರ ವಿರಲ ವಿರಚಿತ ॥

# ಅನಂತನ ಕಥಾ

## ೩ನೇ ಸಂಧಿ

**ಪದನು** **ವಾರ್ಧಿಕ–ಷಟ್ಪದಿ**

**ಮಂಗಳಾಚರಣೆ ಶ್ರೀ ಉಡುಪಿ ಕೃಷ್ಣ ಸ್ತುತಿ**

ನಂದ ನಂದನ ಮಂದಜಾಸನ ಫಣೀಂದ್ರ ಭವ ।
ವೃಂದಾರ ಕೇಂದ್ರ ಮುನಿವೃಂದ ವಂದಿತ ಪಾದ ।
ದ್ವಂದ್ವ ಗೋವಿಂದ ಜ್ಞಾನಾನಂದ ಗುಣಸಾಂದ್ರ
ಯದುಕುಲಾಂಬೋಧಿ ಚಂದ್ರ ॥
ಇಂದಿರಾ ರಮಣನೇ ಸರ್ವಜ್ಞ ಶ್ರೀಮುದಾ ।
ನಂದ ತೀರ್ಥರ ಪೂಜೆ ಕೈಕೊಂಡು ಮೆರೆದವರ ।
ಸುಂದರ ಸುರೂಪ ಉಡುಪಿನ ಮುದ್ದು ಶ್ರೀಕೃಷ್ಣರಾಯ
ಮಂಗಳವೀವುದು ॥ ೧ ॥

**ಶ್ರೀ ಭೀಮಸೇನ ದೇವರ ಸ್ತುತಿ**

ಶಶಿವಂಶದೊಳಗುದಿಸಿ ಕೀಚಕ ಹಿಡಿಂಬ ಬಕ ।
ನಸುರ ಮಣಿಮಾನ್ ಜರಾಸಂಧ ಕೀರ್ಮಿರಾದಿ ।
ವಸುಮತಿಯ ಭಾರಕರ ಸಂಹರಿಸಿ ಕೌರವರ
ಪೆಸರುಳಿಯದಂತೆ ಧುರದಿ ॥
ಕುಸರಿದರಿ ದಗ್ರಜಗೆ ಸಾಮ್ರಾಜ್ಯ ಪದವಿಯಂ ।
ಬಿಸಿಜಾಕ್ಷ ನೊಲಿಮೆಯಿಂದಿತ್ತು ಹಯಮೇಧಮಂ ।
ಪೊಸತೆನಲ್ (ಲ್ಪೂ) ಪೂರೈಸಿ ಜಗತಿಯೋಳ್ಮೆರೆದ
ಸದ್ಗುಣಭೌಮ ಭೀಮ ನಲಹೊ ॥ ೨ ॥

---

ವಸುಮತಿ = ಭೂಮಿ, ಕುಸರಿದರಿ = ಸಣ್ಣಾಗಿ ಚೂರು ಮಾಡಿ
ಪೊಸತೆನಲ್ = ವಿಚಿತ್ರತರದಿಂದ.

### ಶ್ರೀ ಮಹರುದ್ರದೇವರ ಸ್ತುತಿ

ಮನಸಿನಭಿಮಾನಿಯಂ ಮಾ ಪತಿಯ ಭಜಕನಂ ।
ಮಿನಗುವ ತ್ರಿನೇತ್ರನಂ ಮೀನಧ್ವಜಾರಿಯಂ ।
ಮುನಿ ಜನರ ಪೊರೆವನಂ ಮೂಜಗದಿ ಮೆರೆವನಂ
ಮೇರು ಚಾಪಂಗೈದನಾ ॥
ಘನವ್ಯೈಯ್ಯ ಸತಿಗಿತ್ತು ಮೋಹಿಸುತ ಮೌಳಿಯೊಳ್ ।
ವನಜರಿಪುವಂ ತಾಳ್ದನಂ ಸುಮಂಗಳನಾಮ ।
ನೆನಿಪ ಮಹದೇವನಂ ನೆವವರ ಕಾವನಂ ಸ್ಮರಿಸಿ
ಮುಂಗಧೆ ಪೇಳ್ವೆನು ॥ ೩ ॥

### ಶ್ರೀ ಮಂತ್ರಾಲಯ ರಾಯರ ಸ್ತುತಿ

ಕುಷ್ಟಾದಿ ರೋಗಗಳನಿಷ್ಟ ಬಹು ಕಷ್ಟಗಳ ।
ನಷ್ಟ ಮಾಡುತ ಬಯಸಿದಿಷ್ಟಾರ್ಥಮಂ ಕೊಡುತ ।
ತುಷ್ಟಿ ಬಿಡಿಸುತ ದಯಾದೃಷ್ಟಿಗಳ ಕರವುತಾ
ಶಿಷ್ಟಜನ ರಕ್ಷಿಸುತ್ತಾ ॥
ದುಷ್ಟರನು ಶಿಕ್ಷಿಸುತ ಲಂಧಕರಿಗೆ ದಿವ್ಯ ।
ದೃಷ್ಟಿಯಂ ಕರುಣಿಸುತ ಮಂತ್ರಾಲಯದೊಳಿರ್ದು ।
ಸೃಷ್ಟಿಯೊಳ್ ಜಸ ಪಡೆದ ಗುರು ರಾಘವೇಂದ್ರ
ರಂಘ್ರಿಗೆ ನಮಿಸಿ ಕೃತಿ ಪೇಳ್ವೆನು ॥ ೪ ॥

### ಶೌನಕರ ಪ್ರಶ್ನೆ

ರಾಕೇಂದು ಮಂಡಲೋದಯವಾಗಲುಬ್ಬಿ ರ ।
ತ್ನಾಕರಂ ಮಿಗೆ ಮೆರೆವರಿದುಕ್ಕುವಂದದಿಂ ।
ಲೋಕಲೋಚನನು ವೈದೋರಲ್ಕೆ ಸಂಭ್ರಮ
ದೋಳಿರಲ್ವ ರಾಜೀವದಂತೆ ॥

---

ಘನ ವ್ಯೈಯ್ಯ ಸತಿಗಿತ್ತು =
ವನಜರಿಪುವಂತಾಳ್ದ = ಚಂದ್ರನನ್ನು ಧರಿಸಿದ ರುದ್ರದೇವ
ಮೀನಧ್ವಜಾರಿಯಂ = ಮೀನವೇಧ್ವಜವುಳ್ಳ = ಕಾಮನ ವೈರಿ.

ಶ್ರೀಕಾಂತ ಚರಿತೆಯಂ ಕೇಳ್ದು ಸುಮ್ಯಾನ ತಾ ।
ಳ್ದೀಕಿವಿಗಳನವರತ ದಣಿದಪವೆ ಮುಂಗಧೆಯ ।
ನೀ ಕರುಣಿಸೆಲೆ ತಪೋಧನ ಸೂತಮುನಿಯೆಂದು
ಬೆಸಗೊಂಡರಾ ಋಷಿಗಳು ॥ ೫ ॥

ಸೂತರು ಹೇಳುತ್ತಾರೆ

ಕೇಳಿರೆಲೆ ಶೌನಕರೆ ನಿಮ್ಮ ಪರಿತೋಷ ಸುವಿ ।
ಶಾಲ ಕಲ್ಪದ್ರುಮ ಫಲಿಸುವಂದದಿ ಕರ್ನ ।
ದೋಳು ಸುಕಥಾಮೃತವ ನೊರವೆ ಭೀಮಾರ್ಜುನರ
ಪ್ರೈಣಗತಿಯಿಂದ ಲಕ್ಷ್ಮೀ ॥

ಶ್ರೀ ಕೃಷ್ಣ ಭೀಮಾರ್ಜುನರ ಮಗಧ ದೇಶಕ್ಕೆ ಪ್ರಯಾಣ

ಲೋಲನೊಡನಖಿಳ ಚಾತುರ್ಬಲದ ಸಹಿತ ಭೂ ।
ಪಾಲಕರ ಕಾಣಿಕಿಯ ಕೈಕೊಳುತ ಬರೆ (ನಡೆ) ಮುಂದೆ ।
ಲೀಲೆಯಿಂಪರಿವ ಸುರಗಂಗೆಯಂ ದಾಟಿ ಬಹು
ದೇಶಂಗಳಂ ನೋಡುತ ॥ ೬ ॥

ದೇಶವರ್ಣನೆ

ಬರುತ ಕಂಡರ್ ಕೆರೆಯ ಕಾಲುವೆಯ ತೆರಳಿಕೆಯ ।
ವರಕಳವು ರಸದಾಳಿ ಫನಸಾಂಭ್ರದ್ರಾಕ್ಷಿರಸ ।
ಭರಿತ ಜಂಬೂ ಕದಳಿ ಜಂಬೀರ ಖರ್ಜೂರ
ತೆಂಗು ನಾರಂಗು ಪೂಗಾ ॥

ಪರಿ ಪರಿಯ ತರುಗಳಿಂ ರತ್ನಮಯ ಧರೆಯಿಂದ ।
ವಿರಚಿತ ಪ್ರಪಾಶಾಲೆ ವಾಪೀಕೂಪಗಳಿಂದ।
ಪರಿಪಕ್ವ ಫಲಪುಷ್ಪ ವನದಿಂದ ಶೋಭಿಸುವ
ಮಾಗಧನ ಜನಪದವನು ॥ ೭ ॥

---

ವರಕಳವು = ಶ್ರೇಷ್ಠ ಭತ್ತದ ಗದ್ದೆ. ರಸದಾಳಿ = ರುಚಿಕರ ಕಬ್ಬು.
ಜಂಬೀರ = ನಿಂಬೆಗಿಡ, ಹಣ್ಣು. ಪ್ರಪಾಶಾಲೆ = ಅರವಂಟಿಗೆ
ಜನಪದವನು = ದೇಶ.

ಭೂದೇವಿಯ ಅಲಂಕಾರ ವರ್ಣನೆ

ಜಲದೊಳಗೆ ನಿಂದು ಬಹುಕಾಲದಿಂ ತಪದಿಂದ ।
ಹಲವು ದೈವಂಗಳರ್ಚಿಸಿ ಬೇಡಿಕೊಂಡಡಂ ।
ಪೊಳೆ ಪೊಳೆವುತಿಹ ಪಾಮರಿಯರ ಪ್ರೈಗಂಪ
ಸಮನಿಸಲಿಲ್ಲ ವೆಮಗೆನುತಾ ॥
ತಲೆವಾಗಿ ಲಜ್ಜೆಯಿಂ ವಾಲ್ಪೆನೆಗಳಿಂ ಶಾಲೆ ।
ಗಳ ಪೋಗಲಿಕ್ಕೆಲದಿ ಪೊಂಬಣ್ಣದಿಂದ ಭೂ ।
ಲಲನೆಯು ಹರಿದ್ರಲೇಪನ ಗೈದಳೆಂಬಂತೆ
ರಾಜಿಸಿದ ವಾಧರೆಯೊಳು ॥ ೮ ॥

ವನವರ್ಣನೆ

ಕೀರ ಮುಖದಿಂ ಚೂತಫಲದ ಸ್ತೋತ್ರಂ ಕೇಳಿ ।
ನಾರಿಕೇಳಂ ಕದಳಿ ಜಂಬು ದ್ರಾಕ್ಷೀ ಫನಸು ।
ಚಾರುದಾಡಿಮುಗಳ್ಪರರ ಸುಗುಣಂಗಳಿಗೆ ನಾಚಿ
ಕಡು ಮಾತ್ಸರ್ಯದಿ ॥
ವಾರಿಯುದರದಿ ತಾಳ್ದು ಶಿರಬಾಗಿ ಕಪ್ಪಾಗಿ ।
ತೋರಿ ಕ್ಷುದ್ರತ್ವ ಕಂಟಕ ಧರಿಸಿ ಪೈಬಿರಿದು ।
ಕ್ರೂರ ಮಾಗಧನಾಳ್ವ ಭೂತಳದ ವನದೊಳಗೆ
ಕಣ್ಗೆಸೆದ ವೇಂ ಪೇಳ್ವೆನು ॥ ೯ ॥

ಗಿಳಿ ಮುಖದಿಂದ ಮಾವಿನ ಹಂಣಿನ ಸ್ತುತಿ ಕೇಳಿ ತೆಂಗು ಹೊಟ್ಟೆಲಿ ನೀರು ಧರಿಸಿತು. ಕದಳಿ = ಬಾಳೆ ಶಿರಬಾಗಿತು ಜಂಬು = ನೀರಲ ಕಪ್ಪಾಯಿತು ದ್ರಾಕ್ಷಿ ಸಣ್ಣಾಯಿತು, ಹಲಸು ಮೈಮೇಲೆ ಮುಳ್ಳು ಧರಿಸಿತು, ದಾಳಿಂಬ ಮೈಬಿರಿದಿತು ಇದು ಅಲಂಕಾರ ವರ್ಣನೆ.

ಅರವಂಟಿಗೆ ದಾರಿಕಾರರ ನೀರು ಕುಡಿಯುವಿಕೆ

ಅರವಂಟಿಗೆಯೊಳಿರ್ದು ನೀರೆರವ ನೀರೆಯರ ।
ವರ ಮೇಲುದಿನೊಳೆಸವ ಗುರುಕುಚದ ದ್ವಯುವನೌಂ ।
ದರ ಭರಿತ ದೆಳೆನಗೆಯೊಳೊಪ್ಪುವ ಮುಖಾಬ್ಜಮಂ
ಬಿಂಬಫಲದಂತೆ ಪೊಳೆವ ॥

---

ಪಾಮರಿಯರ ಪೈಗಂಪು = ಹೊಲಕಾಯುವವರ ಮೈ ಸುವಾಸನೆ.
ಕೀರ = ಗಿಳಿಗಳ. ಚೂತಫಲ = ಮಾವಿನಹಂಣು ಸಮನಿಸು = ಒದಗು, ಉಂಟಾಗು

ಅರುಣಾಧರವ ಮೆರೆವ ಮಧ್ಯನುಣ್ಪೊಡೆಗಳಿಂ ।
ಹರುಷದಿಂದ ಧ್ವಿಗರ್ನಿರೀಕ್ಷಿಸುತ ಮೊಗಮೆತ್ತಿ ।
ಬರಿದೆ ತೃಷಿಯಿಂದ ಜಲವೀಂಟುವೋಲ್ ಪಥಾ
ಶ್ರಮವ ಕಳೆವುತಿಹರಾನಾಡೊಳು ॥ ೧೦ ॥

ವನದ ಭೃಂಗಗಳಿರುವಿಕೆ

ಪರಮೆ ವಿಂಡುಗಳಬ್ಜ ಸುಮನಸದ ವನದೆಡೆಗೆ ।
ತ್ವರಿತದಿಂದ್ಯೈತರುತ ಲಧ್ವದೋಳ್ ಕೇತಕಿಯ ।
ಸುರಭಿದೋರಲ್ಕೆ ಭುಂಜಿಸಪೋಗೆ ನಯನದೋಳ್ಮ
ಕರಂದ ಮುಸುಕೆ ಜೆದರಿ ॥

ಮರುಳೆದ್ದು ಸಾಗುವೆವೆ ಕಂಟಕಗಳೂರುತಿರೆ (ವೆ)
ಇರಲಂಧ ಕಾರಕ್ಷಿಗಡರಿ ದೆಶೆಗೆಡಿಸುತಿದೆ ।
ಪರಮೆಡರ ಹರಿಸೆಂದು ಹರಿಗೆ ಮೊರೆಇಡುವ
ವೋಲ್ ಝೇಂಕಾರ ಗೈತಿರ್ದವು ॥ ೧೧ ॥

ಪಿಕಶುಕಾದಿಗಳಿರುವಿಕೆ

ನಿಚ್ಚಳದ ತಿಳಿಗೊಳನ ತಡೆಯಲುರೆ ಬೆಳೆದಪೊಸ ।
ಪೊಚ್ಚಪೊಂದಾವರೆಯ ಮಕರಂದ ಸವಿವಂತೆ ।
ನಿಚ್ಚ ಮಲ್ಲಿಗೆ ವಿವಿಧ ಕುಸುಮಗಳ ಖಂಡನಾ ಸ್ವಾ
ದಿಸುವತೆರದಿ ಮುದದಿ ॥

ಮೆಚ್ಚಿ ಪರಿಮಳವ ಮೆಲವಾಸೆಯಿಂ ಪೋಗಬ್ಯಾ ।
ಡಚ್ಚ ಸಂಪಿಗೆಯ ಬಳಿಗಳಿವಿರೆಂದಳಿಬಳಗ ।
ಕೆಚ್ಚರಿಸಿ ಬುದ್ಧಿ ಪೇಳ್ವಂತೆ ಪಿಕ ಶುಕ ಶಿಖಿಗಳಿಂ
ಚರವ ಗೈತಿರ್ದವು ॥ ೧೨ ॥

---

ಅಧ್ವಿಗರ್ = ದಾರಿಕಾರರು. ಪರಮೆ = ಗುಂಗಿಹುಳ, ಭೃಂಗ ನಿಚ್ಚಳ = ನಿರ್ಮಲ. ತಿಳಿಗೊಳ = ನಿರ್ಮಲವಾದ ಕೆರೆಯಲ್ಲಿ ಹೊಸದಾಗಿ ಪುಟ್ಟಿದಕಮಲ ರಸಸವಿಯಲು. ಅಳಿಬಳಗಕೆ = ಭೃಂಗಗಳ ಸಮೂಹಕೆ.

ಮಯೂರ ಚಲ್ವಿಕೆ ಬಣ್ಣನೆ

ಎಲೆ ಮಯೂರವೆ ನಮ್ಮ ಬಿಡಬ್ಯಾಡವೆಂದಂದು ।
ತಿಳಿಯಲಾಪರೆ ಸಹಸ್ರಾಕ್ಷನೆಂಬರ್ ನಿನಗೆ ।
ಚಲುವಂತ ನಾಗಿರ್ಪೆ ನೋಡು ನಮ್ಮನು ಬಿಡಲು
ಶ್ರೀಹರಿಯ ಶಿರದೋಳಾಡಿ ॥

ಬಲುಮಾನದಿಂದವನಿಪರ ಮೇಲೆ ವೊಲಿದಾತಿ ।
ಕಳೆವಂತರಾಗಿಹವು ನಿನ್ನಂಗ ಶೃಂಗಾರ ।
ಕಳೆವದನುಚಿತವೆಂದು ಬುದ್ಧಿಯಂ ಪೇಳ್ವನ್ತೋಲ್
ನವಿಲ ಬೆಂಗೊಂಡು ಗರಿಗಳಿಹವು ॥ ೧೨ ॥

ವನಗತ ನಾನಾ ಪಕ್ಷಿಗಳ ರವ

ಆವಲ್ಲಿ ರವಗೈವ ಪಿಕದಿಂದ ಶುಕದಿಂದ ।
ಲಾವಲ್ಲಿ ಪರಿಮಳದ ಕಂಪಿಂದ ತಂಪಿಂದ ।
ಲಾವಲ್ಲಿ ಸಂಚರಿಪ ಕರಿಯಿಂದ ಹರಿಯಿಂದ
ಧನಧಾನ್ಯ ಬೆಳೆಗಳಿಂದ ॥

ಆವಲ್ಲಿ ಜನರ ಕಳಕಳೆಯಿಂದ (ಕಳದಿಂದ) ಕೊಳದಿಂದ ।
ಲಾವಲ್ಲಿ ಗೋಮಹಿಷ ಕುಲದಿಂದ ಪೊಲದಿಂದ ।
ಲಾವಲ್ಲಿ ಮಣಿಕೃತಕ ಗಿರಿಯಿಂದ ಸಿರಿಯಿಂದ
ಲಾರಾಪ್ಪು ಕಣ್ಗೆಸದದು ॥ ೧೪ ॥

ಈಸು ಚಲ್ವಿಕೆಯಿಂದ ಲೊಪ್ಪುತಿಹ ಮಾಗಧನ ।
ದೇಶಮಂ ನೋಡುತ್ತೈತಂದು ಖಗಮೃಗ ರನ್ನ ।
ವಾಸರೆಗಳಿಂದ ಶಶಿಕಾಂತ ಶಿಲೆಗಳ ಕಂದರಗಳಿಂ ವೃಕ್ಷದಿಂದಾ ॥

---

ಸಹಸ್ರಾಕ್ಷ = ಇಂದ್ರ, ಬೆಂಗೊಂಡು = ಹಿಂಬಾಲಿಸು ಅಥವಾ ಸೋಲಿಸು.
ಕಂಪಿಂದ = ಸುವಾಸನೆಯಿಂದ ವಾಸರೆ = ಹಾಸುಗಲ್ಲುಗಳು

### ಶ್ರೀಕೃಷ್ಣ ಭೀಮಾರ್ಜುನರು ಮಾಗಧನ ನಗಶಿಖರವೇರಿ ಭೇರಿ ಬಾರಿಸಿ ಕೆಳಗೆ ಕೆಡುಹುವಿಕೆ

ಭಾಸಿಸುವ ಗಿರಿವ್ರಜದ ತಪ್ಪಲೊಳ್ ಸಕಲ ಸೇ ।
ನಾ ಸಮೂಹವ ಬಿಡಿಸುತಾಕ್ಷಣದೊಳಚ್ಯುತಂ ।
ವಾಸವಾತ್ಮಜ ಪವನ ತನಯರಂ ಕೂಡಿಕೊಂಡೇರ್ದ
ನಾ ನಗಶಿಖರವ ॥ ೧೫ ॥

ಅಸುರ ಚರ್ಮನಿಬದ್ಧ ಭೇರಿತ್ರಯಗಳಲ್ಲಿ ।
ಕುಸುಮ ಗಂಧಾಕ್ಷತೆಯ ಸಂಪನ್ನ ಪೂಜೆಯಿಂ ।
ದೆಸವುತಿರಲಸುರಾರಿ ಭೀಮಸೇನಾರ್ಜುನರ್ನೋ
ಡುತವ ಹೊಯ್ಯೆರವವು ॥
ಮುಸಗೆ ಕೆಡಹಿದರು ಖಾತಿಯಲಿ ಶೈಲಾಗ್ರದಿಂ ।
ದಸಮಭುಜಬಲರಿಳಿಗೆ ನಡೆತಂದು ಮಾಗಧನ ।
ವಿಷಮನಗರದ ಕೋಟೆಯೊಡೆದು ಪೊಕ್ಕರ್ವಿಡಂ
ಬದ ವಿಪ್ರವೇಷದಿಂದ ॥ ೧೬ ॥

### ಭೇರಿ ಸಪ್ಪಳ ಕೇಳಿ ಮಾಗಧ ಆಶ್ಚರ್ಯಬಟ್ಟುದು

ಏನಿದದ್ಭುತವಕಟ ನಮ್ಮ ಜಯಭೇರಿಗಳ ।
ನೀನಗದಮೇಲೇರಿ ಧ್ವನಿಗೊಳಿಸಿ ಕದನಮುಖ ।
ಕಾನುವ ಸಮರ್ಥರಾರೆಂದು ನುಡಿವನಿತರೊಳ
ಗುತ್ಪಾತ ತಲೆದೋರಲು ॥
ದಾನವೇಂದ್ರಂ ಕಂಡು ತತ್‌ಶಾಂತಿಗಾಗಮವಿ ।
ಧಾನದಿಂ ವಿವಿಧಾಗ್ನಿ ಕಾರ್ಯವಂ ಮಾಡುತ್ತ ।
ಸ್ಥಾನದೊಳ್ಪಾರ್ವರ ಸಮಾಜದಿಂದಿರ್ದನತಿ ದುಗುಡ
ದೋಳ್ ಬಳಿಕಿತ್ತಲು ॥ ೧೭ ॥

---

ರವವು ಮುಸಗೆ = ಧ್ವನಿಹಬ್ಬಲು. ಖಾತಿಯಲಿ = ಸಿಟ್ಟಿನಿಂದ, ಕೋಪದಿಂದ.
ವಿಷಮ ನಗರದ = ಭೀಕರವಾದ ಮುಗಿಲೆತ್ತರವಿರುವ ಕಿಲ್ಲೆ.
ಅನುವು = ಅನುವಾಗಿ ಬರುವ. ಉತ್ಪಾತ = ಅಪಶಕುನ. ಪಾರುವ=ಬ್ರಾಹ್ಮಣ

ಶ್ರೀಕೃಷ್ಣಭೀಮಾರ್ಜುನರು ವಿಪ್ರವೇಷದಿಂದ ಜರಾಸಂಧನ ಮನೆಗೆ ಹೋದದ್ದು.

ಇವ ಮೂರ್ವರಾಖಳನ ಪೊಳಲೊಳಗೆ ಪೊಕ್ಕುಬಹು ।
ತವಕದಿಂದೈತರುತ ಕೇರಿಕೇರಿಯ ವಸ್ತು ।
ನವಹಮಂ ನುರಿ ಸೂರೆಗೊಳುತ ನಿರ್ಭಯದಿಂದ
ಹಾಯ್ದು ದಳದುಳವ ತಮಗೆ ॥
ತಿವಿದರು ಅಡ್ಡೈಸಿದ ಮಹಾ ದೈತ್ಯ ನಾಯಕರ ।
ಭುವನ ವೀರರ್ಗೆ ಸಮನಾರೆನಲ್ ಮಾಗಧನ ।
ಭವನವಂ ಸಾರಲ್ಕೆ ಕಂಡಸುರನಿದಿರೇಳುತಾದ
ರಿಸಿದಂ ಕುಶಲವ ॥ ೧೮ ॥

ಆವನ ಕುಶಲ ಪ್ರಶ್ನೆಗುತ್ತರ

ಕೇಳಿದಂ ನಸುನಗುತ ಕೃಷ್ಣ ಭೀಮಾರ್ಜುನ ।
ರ್ಪೇಳಿದರ್ ತಮ್ಮ ಕ್ಷೇಮಾಭ್ಯುದಯಗೋತ್ರನುವಿ ।
ಶಾಲ ಕುಲ ದೇಶಾಗಮವ ಬಳಿಕ ನೀಕ್ಷಿಸಿದ
ರಿವೆಯನಿಕ್ಕದಲೆ ಖಳನಾ ॥
ಖೂಳಮತಿ ಚಿಂತಿಸಿದ ತನ್ನ ಮನದೊಳು ಭೂಮಿ ।
ಪಾಲರಲ್ಲದೆ ವಿಪ್ರರಲ್ಲಿವರ್ಕರ್ಕಶದ ।
ತೋಳಹತ್ತುರ್ಶಸ್ತ್ರ ಶೇಕ್ಷಿತರ್ಧೀರರೆಂದೆಡೆ
ಗೆಡೆಗೆ ಬೆರಗಾದನವನು ॥ ೧೯ ॥

ಮಗಧನು ಚಕಿತನಾಗಿ ಮನದೋಳ್ ಯೋಚಿಸಿದನೆನೆ

ಆರಿವರ್ ನೋಡೆ ದೇವತ್ರಯರೊ ಜಂಭಾರಿ ।
ಮಾರುತ್ಯೆಮರೋ ಸೂರ್ಯ ರಜನೀಶ ಪಾವಕರೊ
ಭೇರಿ ಮೂರಂಜದೊಡೆ ಬಡಿದಿಲ್ಲಿಗೈತಂದ
ಕಪಟ ಸ್ನಾತಕವ್ರತಿಗಳೊ ॥

---

ದಳದುಳವ = ಬಲವಾದ ಸೂರೆ, ಲೂಟಿ. ಅಡ್ಡೈಸು = ಕವಿದುಬರು.
ಸ್ನಾತಕ = ವಿದ್ಯಾಭ್ಯಾಸ ಮುಗಿಸಿದ ಬ್ರಹ್ಮಚಾರಿ, ಲಗ್ನಕ್ಕೆ ಯೋಗ್ಯನಾದವ.

ಭೂರಮಣರೋಳ್ ಧಿಟ್ಟರಾರೊ ತನ್ನಂ ಗೆಲ್ವ ।
ವೀರರಂ ಕಾಣೆ ಗಂಹ್ವರಿ ವ್ಯಾಲಿ ಕಡುಚೋದ್ಯ ।
ತೋರಿತೆಂದೆನುತ ಲಾಲೋಚಿಸಿದ ಬಿಡದಂತರಂಗ
ದೋಳ್ ಮಗಧೇಂದ್ರನು ॥ ೨೦ ॥

ಈಗಳಿಳೆಯೊಳು ಶೌರ್ಯದಿಂ ಪೆಸರ್ಪಡೆದವಂ ।
ನಾಗ ನಗರವನಾಳ್ವ ಕೌರವರ್ನಮ್ಮಸಖ ।
ರಾಗಿಪರ್ಪಾಂಡುವಿನ ತನುಜಾತರ್ದೈವರನು ಸೂಯ
ರವರಲ್ಲ ತಿಳಿಯೆ ॥

ನಾಗರೂ ಪ್ರಾಂತದ ನರೇಂದ್ರರನುದಿನವೆನಗೆ ।
ಬಾಗುತಲೆ ಕಪ್ಪವಂ ತೆರುವರಿನ್ನಾಜಿಗನು ।
ವಾಗಿ ಬಂದಿರ್ದ ಪ್ರಚ್ಛನ್ನ ಧಾತ್ರೀಸುರರ
ಧೈರ್ಯಕೀಡಿಲ್ಲೆಂದನು ॥ ೨೧ ॥

ಯಾದವರ್ ಪಿಂತೆನ್ನಕೂಡೆ ಸಮರಂಗದೋಳ್ ।
ಕಾದಿ ಬಹುದುರ್ಗಮಂ ತೊಳಲುತ ಪಲಾಯನವ ।
ಸಾಧಿಸುತ ಶರಧಿಯೋಳ್ಮನೆ ಮಾಡಿ ಬದುಕಿದ
ರ್ಬಳಿಕ ತುರುಗಳನು ಕಾಯ್ವಾ ॥

ಮಾಧವನ ಮಾತೇನು ಕೆಚ್ಚೆದೆಯ ಮಾಂಡಲಿಕ ।
ರಾದವರ್ಕಪಟದೋಳ್ಕದನಮಂ ಬಯಸುವ ವಿ ।
ರೋಧ ಮುಖರಾದರೀ ಚಿತ್ರಮಂ ಕಂಡೆ (ನೋಡೆ)
ನೆಂದಸುರ ಬೆಸಗೊಂಡನಿವರ ॥ ೨೨ ॥

ಜರಾಸಂಧನು ಆ ಮೂವರಿಗೆ ನೀವಾರೆಂದು ಕೇಳಿದನೆನೆ

ಬವರಿಗನೀರ್ವಿಂದು ವಿಪ್ರ ವೇಷವನಾಂತು ।
ಜವದಿಂದ ಲವಘಡಿಸಿ ಪೊಳಲಕೋಟೆಯನೊಡೆದು ।
ಭವನಮಂ ಪೊಕ್ಕು ನಿಶ್ಯಂಕೆಯಿಂದೆಮ್ಮೆಡಿಗೆ
ನಡೆತಂದ ಕಜ್ಜವೇನು ॥

---

ಗಂಹ್ವರಿ = ಭೂಮಿ. ಅನಸೂಯರವರಲ್ಲ = ಹೊಟ್ಟೆಕಿಚ್ಚಿನವರಲ್ಲ.
ಆಜಿಗನುವಾಗಿ = ಯುದ್ಧಕ್ಕನುವಾಗಿ. ಕೆಚ್ಚೆದೆಯ = ಧೈರ್ಯವುಳ್ಳ, ಸೊಕ್ಕಿದ.

ವಿವರಿಸಿರಿ ಮಾಜದಲೆ ಕೃತ್ರಿಮವೊ ಸಹಜವೋ ।
ಹವಣ ಮತ್ತೇನುಂಟು ಪಗೆತನವ ಸಾಧಿಸುವ ।
ನೆವನಾವದೆಂದವಂ ಕೇಳಲ್ಕೆ ನಸುನಗುತ
ಮುರಮಥನನಿಂತೆಂದನು ॥ ೨೩ ॥

ಶ್ರೀಕೃಷ್ಣನ ಉತ್ತರ

ಮುರಿದು ನಾನಾದೇಶ ಪಾಲಕರ ಕೆ (ಪ)ಲಬರಂ ।
ನೆರೆಯೊಳಿಕ್ಕಿದೆ ರಾಜ ಮದದಿಂದ ಮಾನ್ಯರಂ ।
ಜರಿದು ನೂಕ್ಕಿದೆ ಧರ್ಮಮಂ ತೊರೆದು ನಿರಯವಂ
ಸಂಪಾದಿಸಿದೆ ಗರ್ವದಿ ॥

ಮರುಳಾಗದೀ ಸಕಲ ಧರಣಿಪರ ಬಿಡುಬ್ಯಾಗ ।
ಲರಿಯದೆಸಗಿರ್ದ ಪಾತಕಕೆ ಪ್ರಾಯಶ್ಚಿತ್ತ ।
ತ್ವರಿತದಿಂ ನಿನಗೀಯಲ್ಕೈತಂದ ವೇದಾಢ್ಯೋಪಾಧ್ಯರ್ರೈನಾವೆಂದನು ॥
(ಧರಿಸಿಕೋ ವೇದಾದ್ಯುಪಾದ್ಯರೆಮ್ಮಾಜ್ಞ
ಯಿಂದಲೆ ಕುಮತಿ ಕೇಳೆಂದನು) ॥ ೨೪ ॥

ಮಾಗಧನು ಪರಿಹಾಸ್ಯದಿಂ ಹೀಯಾಳಿಸುವಿಕೆ.

ಆ ನರೇಂದ್ರನ ಮಗನೊ ಮೊಮ್ಮಗ ಸಹೋದರನೊ ।
ನೀನವರ ಬಾಂಧವನೊ ಮೇಣ್ ಸಖನೊ ಸೇವಕನೊ।
ಏನಾಗಬೇಕೆನ್ನನಂಜಿಸುವೆ ಬಾಯ್ಬಡಕತನದಿಂದ
ಘರ್ಜಿಸುತ್ತ ॥

ಭೂನಾಥರಂ ಸೆರೆಯುಲಿಂದ ಬಿಡಿಸುವ ವೀರ ।
ನೀನೇವೊ ಮತ್ತೆ ಕೆಲ ದೋಳಿಹರೋ ಬರಿದ್ಯಾಕೆ
ಹೀನ ನುಡಿಗಳ ನುಡಿವೆ ದ್ವಿಜನೆಂದು ಸೈರಿಸಿದೆನೆಂದನಾ
ಸುರಕೋಪದಿ ॥ ೨೫ ॥

---

ಬವರಿಗರ್ = ಯುದ್ಧಮಾಡುವವರು. ಅವಘಡಿಸಿ =ಹೊಕ್ಕು, ಸೇರಿ,ಹೊಂದಿ, ಕಜ್ಜ = ಕಾರ್ಯ. ವೇದಾಢ್ಯ =ವೇದವನ್ನು ಹೆಚ್ಚಾಗಿಬಲ್ಲ. ಉಪಾಧ್ಯಾಯ = ಗುರು, ಅಧ್ಯಾಪಕ.

ಶ್ರೀ ಕೃಷ್ಣನ ಉತ್ತರ

ಎಲವೊ ದುರ್ಮತಿ ವ ಗಧಕೇಳ್ ಧರ್ಮವುಂ ಜರಿದ (ವ)
ಖಳರ ತಲೆಗಳನರಿದು ಚಂದಾಡುವೆವು ವಸುಧೆ ।
ಯೊಳಗೆ ಧರ್ಮವನೊಲಿದು ಕೊಂಡಾಡುವೆವು
ಬಿಡದೆ ಸಿಕ್ಷರಕ್ಷಾವ್ಯಸನವು ॥
ನೆಲೆ ಎನುಗೆ ನೀನರಿಯೆ ಸಾಕು ರಾಜ್ಯಾವಳಿಯು ।
ತಳುವ್ಯಾಕೆ ಬಿಡು ಭಂಡ ವಿದ್ಯಯುವ ಯುದ್ಧವನು ನವ್ಮೊಡನೆ ।
ಬಳಸದಿರ್ಲೇಸಲ್ಲವೆಂದು ಮಿಗೆ ಮೂದಲಿಸಿ
ದಾನವಧ್ವಂಸಿ ನುಡಿದಾ ॥ ೨೬ ॥

ಮಾಗಧನು ಪುನಃ ನಗುತ ಹೀಯಾಳಿಕೆ ಗೈದುದು

ಇವರು ಸಿಕ್ಷಾರಕ್ಷವ್ಯ್ಸನದೋಳ್ದೀಕ್ಷಿತ ।
ಭುವನದೋಳ್ಗಡ ಧರ್ಮವುಂ ಸ್ಥಾಪಿಸುವರುಗಡ ।
ವವನಿಪತಿಗಳ ಬಂಧನವ ಬಿಡಿಸುವ ವರುಗಡ
ಬಡಹಾರುವರುವರ್ಕೇಳಿರೈ ॥
ಅವಿವೇಕವಂ ನುಡಿವ ಭಂಡರಿವರೋ ನಾವೊ ।
ಬವರಗಲಿಗಳ್ಬಿಟ್ಟರೈ ನಿಮ್ಮ ನಿಜ ಕುರುಹು ।
ವಿವರಿಸುವದೆನಗಂಜದಲೆ ನಿಶ್ಚಯುವನೆಂದನಾ
ಜರಾಸಂಧ ಮಂದಾ ॥ ೨೭ ॥

ಶ್ರೀ ಕೃಷ್ಣನು ಮೂವರ ನಿಜಸ್ವರೂಪ ಪೇಳಿ ಯುದ್ಧ ಬಯಸುವಿಕೆ

ಕೇಳಿ ಮಾಡುವದೇನು? ನಾಂ ಕೃಷ್ಣನಹಿತ ಭೂ ।
ಪಾಲ ಚೌಪಟಮಲ್ಲ ಭೀಮನೀತಂ ಕಮಲ
ಮೌಳಿಯಂ ಸಾಮದೋಳ್ ಜೈಸುವ ಮಹಾವೀರ
ನೀತರ್ಜುನಂಕ್ಷಿಪ್ರದಿ ॥

---

ವ್ಯಸನ = ಭಾರ, ಚಿಂತೆ  ಅವಿದ್ಯಯುವ = ಅಜ್ಞಾನ, ಕಪಟ, ಮೋಸ
ಮೂದಲಿಸಿ=ಹಂಗಿಸಿ. ಚೌಪಟಮಲ್ಲ = ನಾಲ್ಕುಕಡೆಗೂ ಕಾದಾಡುವವೀರ.

ಕಾಳಗವ ಕೊಡುತೆವ್ಮೊಳೋರ್ವಗೆ ಕೆಂಗೆಡದ ।
ಲೇಳೆಂದು ನಿಜತನುವ ಹರಿದೋರಲಾ ಮಗಧ ।
ಘೋಳೆಂದು ಕೈಹೊಯ್ದು ಬಿರುನಗೆಯು ಕೆದರುತ್ತ
ತನ್ನವರ್ಗಿಂತೆಂದನು ॥ ೨೮ ॥

ಮಾಗಧನು ಪರಿಹಾಸ್ಯದಿಂ ಶ್ರೀಕೃಷ್ಣನನ್ನು ತುಚ್ಛೀಕರಿಸಿದ್ದು

ಈತನಾರೆಂದರಿವರ್ರೈ ನೀವು ನಮ್ಮಾತ ।
ನೀತ ನೆಮ್ಮಳಿಯ ಕಂಸಂಗೀತ ಜಾಮಾತ ।
ನೀತಮೊಮ್ಮಗನೆಮಗೆ ವಸುದೇವ ದೇವಕೀ ಗರ್ಭ
ಸಂಭೂತನೀತ ॥

ಈತ ಕಾಣಿರೊ ಹಿಂದೆ ನೋತು ಚೌರಾಸೀತಿ ।
ಖ್ಯಾತದುರ್ಗದಲೋಡಿ ಬದುಕಿದ ಮಹಾಶೂರ । (ವೀರ)
ನೀತ ಬಲುಗೈಬಂಟನೆಂದನಾ ಮಗಧಪತಿ ಪರಿಹಾಸ
ಮಂ ಮಾಡುತಾ॥ ೨೯ ॥

ಮಾಗಧನು ಶ್ರೀಕೃಷ್ಣನನ್ನು ನಿಂದಿಸಿದನು ೨ ಶ್ಲೋಕ

ಎಲವೊ ಗೋಪಾಲಲೋಗರ ಮನೆಗಳಂ ಪೊಕ್ಕು ।
ಕಳವಿನಲಿ ಬೆಣ್ಣೆ ಪಾಲ್ಗೆನೆಗಳಂ ಸವಿದು ಗೋ ।
ವಳರ ಮೇಳದಲಿ (ದಾ) ಕಲ್ಲಿಗಳ ಕೈಮುದ್ದೆಯಿಂ
ತೆಗದುಂಡು ಕೊಳಲನೂದಿ ॥

ಲಲನೆಯರ ಮೆಚ್ಚಿಸುತ ಸೌಖ್ಯದೋಳಲ್ಲಿರದೆ ।
ಕಲಹಮಂ ಬಯಸೆನ್ನ (ಎಸಗೆನ್ನ) ಬಳಿಗೆ ನೀನಡೆತಂದ ।
ಡುಳುಹುವೆನೆ ಮೂರ್ಖತೆಯೊಳರಿಯದೈತರಬಹುದೆ
ಪೋಗೆಂದನಾದೈತ್ಯನು ॥ ೩೦ ॥

---

ಘೋಳೆಂದು=ಹಾಸ್ಯದೊಡನೆ. ಚೌರಾಸೀತಿ=೮೪ ಸಲ. ಬಲುಗೈಬಂಟ=ಮಹಾ ಶೂರ, ಬಲವುಳ್ಳವ, ಶಸ್ತ್ರಬಾಣ ಬಿಡುವಲ್ಲಿ ಪರಾಕ್ರಮಿ.

ಹೋರಿ ಹೆಂಗಸು ಭಂಡಿಯುಂ ಮುರಿದ ಬಲ್ಪಿಂದ ।
ಕ್ರೂರಗಾರ್ಧಭ ಹಕ್ಕಿ ಹಾವ ಬಡಿ(ದ)ಧಟ್ಟಿಂದ ।
ಧಾರುಣೀ ಮಂಡಲದೊಳತಿ ಧೀರನಾನೆಂದು
ಬೆರತಿರ್ದು ತನ್ನಕೂಡೆ ॥

ಆರುಭಾಟೆಗಳಿಂದ ಸಮರದೋಳ್ ಕಾದಿದಡೆ ।
ಸಾರುವದೆ ಜಯನಿನಗೆ ಸಂಪಿಗೆಯು ಪರಿಮಳದ ।
ಸೂರೆಗಂಬಯಸಿ ಮರಿದುಂಬೆ ಬಂದಂತಾಯ್ತು
ನಿನ್ನಾಗಮವನೆಂದನು ॥ ೩೧ ॥

ಶ್ರೀ ಕೃಷ್ಣನು ಸಹಿಸಿ ಕಾಳಗಕೆ ಒದಗೆಂದನೆನೆ

ಇದು ಪಿತ್ತ (ಪ್ರೈತ್ಯ) ವಿಕಳವೊ ಮದ್ಯದ ವಿಕಾರವೋ ।
ಮದ ನೆತ್ತಿಗೇರಿದುದೊ ಸನ್ನೆ ಬಂದಡದರ್ದುದೋ ।
ಕದನಕೆ ಪರಾಕ್ರಮವೊ ಮಾತುಗಳೊ ಬರಿದ್ಯಾಕೆ
ಪೂರ್ವಪ್ರಸಂಗಮರುಳೆ ॥

ಸದನ (ರ) ನಿನ್ನದು ಸೂಳೆಯುರ್ಮುಂದೆ ಶ್ವಾನನೋಳ್ ।
ಒದರಿ ಫಲವೇನಿಂದು ಭಟನಾದ ನೆಮ್ಮೊಡನೆ ।
ಒದಗು ಕಾಳಗಕೆ ನಿನಗಳಿವು ತಪ್ಪದು ಸಿದ್ಧ
ವೆಂದನಸುರಾರಿನಗುತ ॥ ೩೨ ॥

ಮಾಗಧನು ಪುನಃ ಮುರವರನ್ನು ಹೀಯಾಳಿಸುವಿಕೆ.

ಎಲವೊ ಗೊಲ್ಲಾಧಮನೆ ತನ್ನಳಿಯ ಕಂಸನಾ ।
ಲಲನೆಯರ ವೈಧವ್ಯ ದುಃಖಾಗ್ನಿ ತವರಕ್ತ ।
ಜಲಧಾರೆಯಿಂ ನಂದಿಸುವೆನವನ ನಿನ್ನುದರದೊಳ
ಗಿಂದ ಸೆಳೆದು ನಿನ್ನ ॥

ಇಳಿಯ ಸಾಮ್ರಾಜ್ಯವನು ಭೋಗಿಸುವೆ ನೋಡಿನ್ನು ।
ಕಳಿ (ಳ) ಭ ಹರಿಯೋಳ್ ಶಣಿಸಿ ಜೀವಿಪುದೇನನಿನ್ನ ।

---

ಬಲ್ಪಿಂದ = ಬಲವಂತನೆಂಬ ಹಮ್ಮು, ಅಟ್ಟಿಂದ = ಅಟ್ಟಿದ್ದಕ್ಕಾಗಿ.
ಮರಿದುಂಬೆ=ಗುಂಗೆಹುಳಮರಿ. ಕಳಭ = ಆನೆಯ ಮರಿ.

ಬಲುಹನರಿದರಿದು ಬಂದೀಗ ಕೆಣಕಿದೆ ಕೆಟ್ಟೆ
ಪೋಗೆಂದನಾ ಮಗಧನು ॥ ೩೩ ॥

ಗೋವಳರ್ಯಾದವರ್ನಿಲಜ್ಜರಿಳಿಯೊಳಗೆ ।
ನೀವು ಗರುವರ್ರಾಜಪುತ್ರರರ್ಭಕರೀಗ ।
ಸಾವನಾಪೇಕ್ಷಿಸುವನೊಡನೆ ಬಂದಿರಿ ತಪ್ಪು
ಮಾಡಿದಿರಿ ನಿಮ್ಮ ಸ್ಥಳದಿ

ಕೋವಿದರ್ ಹಿರಿಯರಾರಿಲ್ಲಲಾ ಬುದ್ಧಿಯಂ ।
ತೀವಿ ಧರ್ಮಜ ಪೇಳಲಿಲ್ಲವೇ ವಿಧಿಯಿಂದು ।
ಗ್ರೀವಗಳನರಿಯಲ್ಕೆ ಕರತಂದುದೇಯೆಂದನಾ
ಭೀಮ ಫಲ್ಗುಣರ್ಗೆ ॥ ೩೪ ॥

ಶ್ರೀ ಭೀಮನು ಕೃಷ್ಣನಿಂದಾ ಸಹಿಸದೆ ಉತ್ತರ

ಸಾಕಿದ್ಯಾತಕೆ ಮಂದಮತಿ ಹೊಳ್ಳು ನುಡಿಗಳ ವಿ ।
ವೇಕಿಗಳು ಮೆಚ್ಚುವರೆ ಕೇಳ್ ಧಾತ್ರಿಯೊಳ್ ಯುದ್ಧ ।
ವ್ಯಾಕರಣ ಪಾಂಡಿತ್ಯಮುಂಟಾದುದೆಮ್ಮೊಡನೆ
ತೋರಿಸೆಲೆ ಘೂಕನಿಕರ ॥

ಲೋಕ ಲೋಚನನ ಸಿಂದಿಸಿದಡೇನಪ್ಪುದಿಂ ।
ದೀಕಮಲನೇತ್ರ ಕೃಷ್ಣಂಗೆ ಫಡಸರಿಯೆ ನಿ ।
ನ್ನಾಕೆ ವಾಳಿಕೆಯು ಜಗದೇಕ ದೈವದ ಕೂಡೆ
ಕೊಳದೆಂದನಾ ಭೀಮನು ॥ ೩೫ ॥

ಮಗಧನು ಭೀಮನನ್ನು ಹೀಯಾಳಿಸುವಿಕೆ

ಧಿಟ್ಟರ್ರೈ ನೀವೀರ್ವರಳಿವನರಿಯದೆ ಕೆಣಕಿ ।
ಕೆಟ್ಟಿರಕಟಾ ವೃಥಾ ಖೂಳಗೋಪಾಲಕನ ।
ಗೊಟ್ಟೆ ಯಾಟಕೆ ಗುರಿಗಳಾದಿರೆಲೆ ಬಳಿಕಿನ್ನು
ಜೈದಡೆಮಗೇನು ಫಲವು ॥

---

ತೀವಿ = ತುಂಬಿ, ಪ್ರೇರಿಸಿ ಗ್ರೀವಗಳನರಿಯಲ್ಕೆ = ಕೊರಳು ಕೊಯಿಸಿ ಕೊಳಲು. ವ್ಯಾಕರಣ ಪಾಂಡಿತ್ಯ=ಶಬ್ದಶಾಸ್ತ್ರ ಬಲ್ಲವ. ಫಡಸರಿಯೆ = ಶಹಬಾಸ ಭಲಾ. ವಾಳಿಕೆಯು = ವಾಳತನ, ಖುಲ್ಲ, ಕೆಟ್ಟತನ.

ಕಟ್ಟಾಳಲಾ ಮೂವರೊಂದಾಗುತೆವ್ಮೊಡನೆ ।
ಮುಟ್ಟೆ ಕಾದಿರಿ ನಿಲ್ವೆ ನಾ ನೊಬ್ಬನೆದಿರಾಗಿ ।
ಬೆಟ್ಟದೋಲ್ ಕೈದುಗಳ್ಳೇಕೆ ತರಿಸುವೆನೆಂದ
ನಾ ಖಳಂ ಘರ್ಜಿಸುತ್ತ ॥ ೩೬ ॥

ಶ್ರೀ ಕೃಷ್ಣನು ಜರಾಸಂಧನಿಗೆ ಹಂಗಿಸುವಿಕೆ

ಎಲವೊ ತಾಮಸ ಪಿಂತ ಗೋಮಂತ ಪರ್ವತದಿ ।
ಹಲಧರಂ ಹರಿಬದೋಳ್ ನಿನ್ನನು ಕೊಲ್ಲದಲೆ ।
ಸಲಹಿಬಿಟ್ಟಿದು ಮರದೆಲಾಸಿರಿಯು ಮದದಿಂದ-
ಲೆನ್ಮೊಡನೆ ಸರಿಗಟ್ಟುವ ॥
ಬಲಸಮನಿಸುದುಪೆಗಡ ಜಂಬುಕಂ ಪೆರ್ಬುಲಿಯು ।
ನಳುಕಿಸುವ ತೆರನಾಯ್ತು ತಲೆಯಾನೆಯುಂ ಬಿಟ್ಟು ।
ಕಲಹಕೆನ್ಮೊಳು ನೋರ್ವನನುಸರಿಸು ಶೀಘ್ರ
ದೋಳೆಂದನಾ ದಾನವಾರಿ ॥ ೩೭ ॥

ಪುನಃ ಮಾಗಧನು ಶ್ರೀ ಕೃಷ್ಣನನ್ನು ನಿಂದಿಸುವಿಕೆ

ಆಕಟ ಪೀನಮರ ವಾಪಸ್ಯಕವೆ ನಮಗೆ ।
ಪ್ರಕಟವಲ್ಲೀಖ್ಯಾತಿ ಲೋಕದೋಳ್ ನೆರದಿರ್ದ ।
ಸಕಲಜನರೆಲ್ಲಿರವು (ವರಿವು) ದೆನ್ನುತ್ತ ನೀಕ್ಷಿಸಿದ
ತನ್ನವರ ನಿಕ್ಕೆಲದೊಳು ॥
ಮುಕುರವ್ಯಾತಕೆ ಕಾಣಬಂದದಕೆ ಯುದ್ಧ ನಾ ।
ಟಕ ಪಲಾಯನ ನುಪಂಡಿತ ನೆಂಬುದಂಬಲ್ಗೆ ।
ಶಕುತಿವರ್ಜಿತಗೊಲ್ಲ ನೀನೆಮಗೆ ಪ್ರತಿಭಟನೆ
ಪೋಗೆಂಪನಾ ( ತೆಗೆಯುಂದನಾ ) ಮಗಧನು ॥೩೮॥

---

ಹರಿಬದೊಳ್=ಕಾಳಗದಲ್ಲಿ. ಮುಕುರ= ಕನ್ನಡಿ
ಪಲಾಯನ ಪಾಂಡಿತ್ಯ=ಯುದ್ಧದಲ್ಲಿ ರಣಹೇಡಿಯಾಗಿ ಬೆನ್ನು ತಿರುಹಿ ಓಡುವ ಜಾಣತನ, ಪಾಂಡಿತ್ಯ.

ಮಾಗಧನು ಭೀಮನೊಡನೆ ಯುದ್ಧಕ್ಕೆ ನಿಶ್ಚಯಿಸುವಿಕೆ

ಫಲ್ಗುಣಂ ತರಳ ನಿವನೊಡನೆ ಕಾದಿದಪೆಸಗೆ ।
ಇಳೆಯೊಳು ಸುಕೀರ್ತಿ ದೊರೆಯದು ಪರೀಕ್ಷಿಸಿ ಪಿಂತೆ।
ಕಲಿಬಕಾಸುರ ಹಿಡಿಂಬಾದಿ ರಾಕ್ಷಸತತಿಯು
ಗೆಲ್ದನೀ ಭೀಮನೇನ ॥
ಬಲವಂತ ವಪು ಪುಷ್ಟನಹ ನೀತಗಿತ್ತ ನಾಂ ।
ಸುಲಭಕಾಳಗ ದಾನ ಮುಂದು ಸೀವೀರ್ವರುಂ ।
ಚಲಿನ ದೀಕ್ಷಿಸಿರೆನ್ನ ಭುಜಬಲ ಪರಾಕ್ರಮವ
ನಂದನಾ ಖಳನು ಬಳಿಕ ॥ ೩೯ ॥

ಮಾಗಧನು ಯುದ್ಧಕವಚಾದಿ ಪರಿಮಳದ್ರವ್ಯ ತರಿಸಿಕೊಡುವಿಕೆ

ತರಸಿದಂ ಝಗಝಗಿಪ ವಜ್ರಾಂಗಿ ಸೀಸಕವ ।
ಪರಿಶೋಭಿಸುವ ದಿವ್ಯ ವಸನಂಗಳಂ ಕುಸುಮ ।
ಪರಿಪರಿಯ ಪರಿಮಳದ ಕಸ್ತೂರಿ ಘನಸಾರ
ಯಕ್ಷಕರ್ದಮಜವಾದೀ ॥
ವರಗಂಧ ತಾಂಬೂಲ ಪೂರಿತದ ಭರಣಿಗಳ ।
ಹರಿ ವೃಕೋದರ ಪಾರ್ಥರಿದಿರಿನೊಳಿಕ್ಕೆ ಸೂಕಲ್ಕ ।
ಕಿರುನಗೆಗಳಿಂದ ವಿಮಲಾಂಬರ ವಿಲೇಪನದಿ
ಸಿಂಗರಿಸಿದರ್ತಿಸುವನು ॥ ೪೦ ॥

ಮಾಗಧನು ಭೂಷಣಗಳಂ ಧರಿಸಿ ಯುದ್ಧಕನುವಾದ

ಮಣಿ ಭೂಷಣಾವಳಿಗಳಂ ತೊಟ್ಟು ಮಿನುಪ ಚ ।
ಲ್ಲಣವ ಪಗದುಟ್ಟು ಸಿರಿಗಂಪನುಪ್ಪೈಟ್ಟು ವರ ।
ಗಣಿಕೆಯರ್ತಳಿವ ಶಾಶಗಳಿತ್ತು ವಾರತಿಯ
ನಾದರಿಸಿ ಲೀಲೆಯಿಂದ ॥

---

ಸೀಸಕವ- ಉಕ್ಕಿನ ಕವಚ ಕಲಾಯಿ ಇತ್ಯಾದಿ

ಘನಸಾರ–ಕರ್ಪೂರ. ಯಕ್ಷಕರ್ದಮ- ಒಂದು ಬಗೆಯ ಸುಗಂಧ ಲೇಪನ ಕರ್ಪೂರ ಕೃಷ್ಣಾಗರು ಕಸ್ತೂರಿ ಚಂದನ ಕೇಸರ ಮಿಶ್ರ ಸುಗಂಧ ದ್ರವದ್ರವ್ಯ.

ಸಿರಿಗಂಪನುಪ್ಪಿಟ್ಟು = ಸಂಪತ್ಕರವಾದ ಪರಿಮಳ ಪೂಸಿ ಅಥವಾ ಲಲಿತತಿಲಕಾ.

ಗಣಿಕೆಯರ್ = ವಾರಾಂಗನೆ, ವೇಶ್ಯೆಯರು, ತಳಿವ= ಎತ್ತುವ. ಶಾಶೆಗಳ = ಆರುತಿ.

ರಣಭಯಂಕರ ಮಗಧಪತಿ ಸಮರ ಕನುವಾದ ।
ಝಣ ಝಣ ಝಣತ್ಕಾರ ಬಿರಿದನುಪ್ಪುಡದಿ ಫ ।
ಲ್ಗುಣ ಕೃಷ್ಣರಂ ನೋಡಿ ನಸುನಗುತ ಬಿಂಕದಿಂದನಿಲ
ಜಂಗಿಂತೆದನು ॥ ೪೧ ॥

ಮಗಧನು ಭೀಮಸಿಗೆ ನಿನಗಾವ ಶಸ್ತ್ರಬೇಕೆಂಬ ಪತ್ರಿ. ಆಯುಧಗಳ ವಿವರ.

ಧುರದೊಳಾವುದುಕ್ಕೈದು ಮುದ್ಗರವೊ ಖಡ್ಗವೋ ।
ಪರಶು ಮುಸಲವೊ ಕೊಂತ ಶೂಲವೋ ಡುಂಕಣಿಯೊ ।
ಪರಿಘ ಚಕ್ರವೊ ಗದೆಯೊ ತೋಮರವೊ ಪಟ್ಟಿಸವ
ಭಿಂಡಿವಾಳವೊ ಶಕ್ತಿಯೋ ॥
ಶರ ಧನುವೊ ಕಕ್ಕಡಿಯೊ ಮುಷ್ಟಿಯೋ ದಂಡವೊ ।
ವರಕರಾರಿಯೊ ದಾವದಿರಿತ ಕಭ್ಯಾಸವ ।
ವರಿನೆನ್ನನಂ ಕೆಣಿಕಿನೋಡು ಸತ್ವರವೆಂದನಾ
ಮಗಧ ಘರ್ಜಿಸುತ್ತ ॥ ೪೨ ॥

ಶ್ರೀ ಭೀಮನ ಹೇಳಿಕೆಯಂತೆ ಮಾಗಧನು ಎರಡು ಗದೆಗಳನ್ನು ತರಿಸಿದ

ಎಲವೊ ಡಂಬಕ ಮಗಧ ಕೇಳ್ ನಿನ್ನ ನೀಜಗದಿ ।
ಬಲು ಸಮರ್ಥನಂ ಗದಾಯುದ್ಧ ಮೋಳೆಂದು ಜನ ।
ರೂಲಿದು ಬಣ್ಣಿಸುವರಾ ಖಡಿ ಧಿಟವೊ ಮಾಯವೋ
ನೀಕ್ಷಿಸುವೆ ತೋರಿನೆನುತ ॥
ಕಲಿಭೀಮ ನುಡಿಯಲ್ಕೆ ತರಿಸಿದಂ ಮಣಿಕನಕ ।

---

ಡುಂಕಿಣಿ - ಸಬಳಬರ್ಚಿ, ಪರಿಘ - ಕಬ್ಬಿಣ ದೊಣ್ಣೆ = ಹಾರಿ ಚಕ್ರ= ದುಂಡಾಯುಧ ತೋಮರ = ಬೀಸುಗತ್ತಿ, ಪಟಿ ತಿರುಹುವದು. ಭಿಂಡಿ ವಾಳ = ಸಣ್ಣಬಿಲ್ಲು ಶಕ್ತಿ = ಬರ್ಚಿ, ಭಿಲ್ಲೆ, ಶರ = ಬಾಣ, ಧನಸ್ಸು. ಕಕ್ಕಡಿ = ಖಡ್ಗ, ಒಂದು ಬಗೆಯು ಆರಾಬ. ದಂಡ = ಡೊಣ್ಣೆ ಬಡಿಗೆ. ಕರಾರಿ = ತಿವಿಯುವ ಆಯುಧ. ಬಚಿ, ಅನೇಕ ಆಯುಧಗಳ ವಿವರಣೆ. ಉಗ್ಗಡ = ಪರಾಕು, ಹೆಚ್ಚಿನ ಹೊಗಳಿಕೆ ಕೈದು = ಕಾಳಗ, ಯುದ್ಧ. ಮುದ್ಗರ = ಗದೆ-ಗುದ್ದಿ ಖಡ್ಗ = ಕತ್ತಿ ಪರಶು = ಚಪ್ಪಕೊಡಲಿ- ಮುಸಲ= ಒನಿಕೆ ಕೊಂತ = ಈಟಿ, ಬರ್ಚಿ. ಶೂಲ = ಭಾಲೆ, ತ್ರಿಶೂಲ.

ಕುಲಿಶದಿಂದೊಪ್ಪುವ ಗದಾದಂಡ ಮೆರಡನಂ ।
ಬಳಿಕೀರ್ವರದ್ಭುತದ ಸಮರಮಂ ನೋಡ
ಲಮರರ್ ನೆರದರಂಬರದೊಳು ॥ ೪೩ ॥

ಶ್ರೀ ಭೀಮನು ಶ್ರೀಕೃಷ್ಣನಿಗೆ ನಮಿಸಿ ಯುದ್ಧಕ್ಕನುವಾಗುವಿಕೆ

ದುರಿತಾದ್ರಿ ವಜ್ರದಂಡನ ದುರಿತ ತಿಮಿರದಿನ ।
ಕರನ ದುರಿತಾಬ್ಧಿ ವಢಭಾನಳನ ದುರಿತಸಂ।
ಹರ ರುಗ್ಮಿಣಿ ಮನೋಹರ ಕೃಷ್ಣರಾಯನ ಪದಾಂ
ಭೋಜ ಯುಗ್ಮಗಳಿಗೆ ॥

ಮರುತಜಂ ನತನಾಗಿ ಪರಕೆಯಂ ಧರಿಸಿ ಬಹು ।
ಹರುಷದಿಂ ವಿಜಯನಂ ತಕ್ಕೈಸಿ ಕಣನ ಗೆ ।
ಲ್ದಾರು ಭುಜವ ಪೊಯ್ದಾ ದುರ್ಧುರಧೀರ ಘೋರತರ
ಗದೆಗೊಂಡು ತಿರುವುತಿರಲು ॥ ೪೪ ॥

ಮಾಗಧನು ದ್ವಿಜರಪರಕೆನಾಂತು ಯುದ್ಧಕ್ಕನುವಾದ

ಭುಜಹೊಯ್ದು ಮುಂಡೆಯುಂಬಲಿದು ಶೂಲಿಯ ಪದಾಂ।
ಬುಜನೆನೆದು ದ್ವಿಜರ ಪರಕೆಯನಾಂತು ಚಾರುಮಣಿ ।
ವ್ರಜಕನಕ ದಿಂದೆಸವ ಗದೆಯುಂ ಗೊಂಡು
ಬೊಬ್ಬಿರಿವುತ ಸುರೇಂದ್ರನು ॥

ನಿಜಸತ್ವದಿಂ ಖಳನು ಕೈಕೊಳಲ್ಕಂಡು ಪವ ।
ನಜನಾರ್ದದಮರಗಣ ವಾಕಂಪಿಸಿತು ಪಂ ।
ಕಜ ಭವಾಂಡಂ ನಡುಗುತಿರಲುಗ್ರ ಕೋಪಲತೆ
ಕುಡಿ ಇಟ್ಟ ದೇವೇಳ್ವೆನು ॥ ೪೫ ॥

ಶ್ರೀ ಭೀಮಜರಾಸಂಧರ ಯುದ್ಧ ಉಪಕ್ರಮ ವರ್ಣನೆ

(೧) ಉರುಪರಾಕ್ರಮ ಜಲಧಿ ಇತ್ತಡಿಯ ವಿದ್ರುಮಂ ।
ಕುರುಪಟಲ ದಂತಿರಲ್ಕರುಣ ಕಿರಣಪ್ರಭಾ ।
ಸ್ಫುರಿತನಯನದ ಮಹಾ ಭ್ರುಕುಟಿ ಬದ್ಧೋಧ್ಯತ
ದೃಷ್ಟಿಯುದ್ಧಂ ಗೈಯ್ಯುತಾ ॥

---

ಕುಲಿಶ = ವಜ್ರ. ಕಣ = ಯುದ್ಧರಂಗ ಭೂಮಿ.
ಭಯರ, ದೃಷ್ಟಿಯುದ್ಧದ ವರ್ಣನೆ. ಉಭಯಃ ಶೂರರೇ ಸಮುದ್ರದ= ಇತ್ತ

ಗೆರೆಮಂಡಲಂ ಬರೆದು ಗದೆಗಳಂ ತಿರುಹುತ್ತ ।
ಪರಿಪರಿಯ ಹೊಯಲು ಲಘು ವಿನ್ಯಾಸ ವಂಚನಂ ।
ಪರಿಭ್ರಮಣೆ ಕಟುವಚನ ಖಣಖಟಿಲ್ ಗರ್ಜನೆಗಳಿಂ
ದ ಕಾದಿದರು ಭಟರು ॥ ೪೬ ॥

ಉಭಯರ ಗದಾಯುದ್ಧದ ಗತಿಗಳ ವಿವರಣೆ

೧ ಹಳಚಿದರ್ ಸುಳಿಗಾಳಿಯಂತೆ ಗರ್ರನೆ ತಿರುಗಿ ।
ಸುಳಿದು ಖಗಪತಿಯಂತೆ ಹೊಯ್ದೆರಗಿದರ್ ಬಿಡದೆ ।
ಬಳಸಿ ತಿವಿದರ್ ಗದೆಯ ಮೊನೆಯಿಂದ ಲಡಿಗಡಿಗೆ
ಸಿಂಹನಾದಂ ಗೈವುತಾ ॥

೨ ಖಳವಳವ ತಳು ತವಕ ಝಂಕೆ ಯೆಂಕೆನಿಪ ದೃಢ ।
ಚಳಬಳಿಕೆ ಚಪ್ಪರಣೆ ಯಾರ್ಭೈಕೆ ಎಂಬಗತಿ ।
ಗಳನರಿದು ಪಲುತೆರದು ಬಿನ್ನಣವ ನುರೆಮೆರದು
ಹೊಯ್ದಾಡಿದರ್ ಸುಭಟರು ॥೪೭॥

---

ಡಿಯ=ಎರಡೂ ಕಡೆಯ ದಂಡೆಯ. ಉಭಯರ್ ಕಂಣ್ಣು ವಿದ್ರುಮ ಹವಳ ದಂತೆ ಕೆಂಪಾದ, ಕುರುಪಟಲ = ಸೂಕ್ಷ್ಮವಾದ ಕಣ್ಣುರೆಪ್ಪೆಯ ಮೇಲೆ ನೇತ್ರದ ಉದಿತ ಸೂರ್ಯ ಕಿರಣದಂತೆ ಪ್ರಕಾಶಮಾನವಾದ ಕಣ್ಣು ಹಾರಿಸು ವಿಕೆ. ಹುಬ್ಬುಗಂಟಿಕ್ಕಿದ ದೃಷ್ಟಿ ಯುದ್ಧವಾದುದು. ಎರಡನೇ ಯುದ್ಧ ಕೂಗ್ಯಾಟದದು. ಹೊಯಲು = ಕೂಗುಧ್ವನಿ, ವದರುವಿಕೆ, ಲಘುವಿನ್ಯಾಸ = ತ್ವರ ಅಲ್ಪವಾದ ಪದಚಲನೆ. ವಂಚನಂ = ಕಪಟ ಮರೆಮಾಡುವಿಕೆ. ಪರಿ ಭ್ರಮಣ = ಸುತ್ತುತಿರುಗುವಿಕೆ.

ಕಟುವಚನ = ಬಿರುನುಡಿ, ಪರಸ್ಪರಚುಚ್ಚುವ ಮಾತು, ಕ್ರೂರವಚನ. ಖಣಿ ಕಟಿಲ್ = ಖಣಿ-ಖಣಿ ಎಂಬ ಯುದ್ಧದಲ್ಲಿ ಸಪ್ಪಳ, ಧ್ವನಿ. ಮುಂತಾದ ಗರ್ಜನೆ ಧ್ವನಿಗಳಿಂದ ಕಾದಿದರು. ಭಟರು = ಶೂರರು. ದೃಷ್ಟಿಯುದ್ಧ= ಧ್ವನಿ ಗರ್ಜನೆ ಪರಾಕ್ರಮ ರೀತಿ ಯುದ್ಧ.

೧. ಹಳಚಿದರ್=ಗದೆಗದೆಗಳಿಗೆ ಹೊಡೆದರು ೨. ಖಳವಳವ ತಳುತವ ಇತ್ಯಾದಿ ೮ ಗದೆಗಳ ಗತಿವರ್ಣನೆ. ೩. ಬಿನ್ನಣವ=ಚಂದವನ್ನು. ೪.' ದ್ಯುತವಿದ್ಯುತ ಮುಂಕ್ಷಿಪ್ತ ಮಾಂಕ್ಷಿಪ್ತಾದಿ (೮) ಗದೆಗಳ ಪ್ರಹರ ವಿವರ. ಯುದ್ಧಕೌಶಲಕಾವ್ಯ ಚನ್ನಾಗಿ ತಿಳಿದವರಿಂದ ಅರಿಯಬೇಕು. ಕೇವಲ ಶಬ್ದಾರ್ಥದಿಂದ ಸರಿಯಾಗದು. ವಿವರಣೆ ಮುಂದೆ.

ಗದೆಯ ಪ್ರಹರದ ಸವಿಸ್ತರ ವಿವರಣೆ

ದ್ಯೂತ (ದ್ಯುತ) ವಿದ್ಯುತ ಮುಂಕ್ಷಿಪ್ತ ಮಾಂಕ್ಷಿಪ್ತ ಪ್ರ ।
ತಾಪಮುಂ ಪ್ರವಿಲಿಂಖಿತಂ ವಿಲಂಖಿತ ಮಹಾ ।
ಖಾತಮುಂ ಭ್ರಮಿತ ಮುದ್ಭ್ರಾಂತಮಿತ್ರಗಳೆಂಬೆಂಟು
ಘೋರ ಪ್ರಹಾರದಿಂದ ॥
ಭೂತಳಂ ಜಡಿಯೆ ನಭವಡಿಯು ಮಾರ್ಧ್ವನಿಗಳ ।
ದ್ಭೂತಮೆನೆ ದಿಕ್‌ತಟದೊಳಿಡಿಯ ರವಿಸಿಡಿಯಲು ।
ತ್ಪಾತ ಮಿಘಾತುಲ್ಕ ಪಾತಂಗಳೂಣ್ಮುತಿರೆ ।
ಕಾದುತಿರ್ದರ್ ಕಲಿಗಳು॥೪೮ ॥

ಘೋರತರ ನಾನಾವಿಧ ಯುದ್ಧವರ್ಣನೆ ೭೯ ಪದ್ಯದ ವರೆಗೆ

ಗದೆಗಳಂ ನೆಗಪಿ ತಿರುಪಿದೊಡೆ ಬಿರುಗಾಳಿಯಿಂ ।
ತ್ರಿದಶರ ವಿಮಾನಂಗಳ್ಕೆದೆ ಬಿಟ್ಟೋಡುತಿರ
ಲೊದರಿಗರ್ಜಿಸಿದಪಂತ್ತಾರವಂ ದಿಕ್ಕುಗಳ
ನಪ್ಪಳಿಸಿ ಘೋ (ಘೀ) ಳಿಡುತಿರೆ ॥
ಪದಘಾತದಿಂಧರಣಿ ತಗ್ಗುತಿರೆ ದಿಗ್ಗಜಂ ।
ಮದನಿದು ಮುಗ್ಗುತಿರೆ ಹೊಪದಾಡಿ (ಹೊಯ್ದಾಡಿ)ಪುಟನೆಗದ ।
ಡುದಧಿಗಳು ಗಗನಮಂ ಪೊಗಪೊಗದು
ಪ್ಪೇದುತಿರ ತಿವಿದಾಡಿದರ್ ವೀರರು ॥೪೯॥
ಸಿಡಿಲು ಚಲಕೆರಗಿ ಪೊಯ್ವಂತೆ ಮುಂದಪನಗಂ ।
ಕಡಲೊಳಗೆ ಬಿದ್ದಂತೆ ಹರಿಮುಚ್ಛರೂಪಮುಂ ।
ಪಡೆದಬ್ಧಿಯಂ ಮಹಾ ಪುಚ್ಛದಿಂಪಪ್ಪಳಿಸುವಂತೆ
ರತಿರೌದ್ರವಾಗಿ ॥
ಧಡಧಡಧಡಲ್ಪೊಪ್ಪ ಖಳಿಖಣಿ ಖಿಟಿಲಧಿಪ್ಪ ।
ಧುಡುಧುಮುಧುಡುಲ್ ಧೊಕ್ಕುಮೆನೆನೂಳು ಪಾಳಿನಿಂ ।
ಪೊಡೆವಗದೆಗಳ ಗಾಯದಿಂ ಭಟರ ಮೈಗಳಡಗೆಡೆದವಂ
ದಾಪದಮೊಳು ॥ ೫೦ ॥

---

ನೆಗಪಿ=ಮೇಲಕ್ಕೆತ್ತಿ ಪೊಗಮೊಗದು=ಸಮೀಪಿಸು

ಸೂಳುಪಾಳಿನಿಂ=ಸತಿಯಿಂದ ಸಾಲಾಗಿ ಮೈಗಳಡಗೆಡದವಂ=ಮೈಗಳ ಕೆಡವದೆ ಬೀಳದೆ.

ಭೀಮ ಮಗಧರ ಮೈಅರುಣಾಂಬು ವರ್ಣನೆ.

ಉನ್ಮೀಳಿಸಿ ಮುಗುಳ ಪ್ರೋಯ್ಯ ಸ್ಫುರಿಸು ತಪ್ಪೀನ ।
ಲಿಮೈಗಳೋಳ್ ಪೊಗುವ ಬಿರಿಸಿನಾಯುಧಗಾಯ ।
ಘುಮ್ಮ ಘಂಘಿಣಿಲು ಘಣವೆಂಬ ಘರ್ಘರರವಂ
ತೀವಿತು ಜಗತ್ರಯವನು ॥
ಸಮ್ಮುಖದೊಳೀರ್ವರಂ ಮೂದಲಿಸಿ ತಳ್ತಿರಿಯೆ ।
ರ್ಘೂಮ್ಮ ನುತಲರುಣಾಂಬು ಸೂಸೆಗುಂಜಾಭರಣ ।
ಮುಮ್ಮುಡಿದು ಮೆರನಾ ಪುಳಿಂದರಾಕಾರದಂತೆ
ನಡವಾ ಭಟರಂಗವು ॥ ೫೧ ॥

ಉಭಯರು ಮತ್ತೆ ರಾಗ ಒಪ್ಪಿದರೆಂದೆನೆ

ಚೂತಪಲ್ಲವದಂತೆ ಕೆಂಪಬ್ಬಿಪೋಲ್ ತಪ್ತ ।
ಜಾತರೂಪ ಪ್ರತಿಮೆಯೆಂ ತ್ಯಶೋಕಾ ಮಹೀ ।
ಜಾತ ತಳಿರಂತನೆವ ವಿದ್ರುಮಫಲತೆಯಂತೆ ।
ದಾನವಣದರಳಿನಂತೆ ॥
ಪೋತಕಿಂಶುಕದಂತೆ ಪ್ರೊಳೆವರುಣ ಮಣಿರುಚೀ ।
ವ್ರಾತದಿಂ ಸಮೆದಂತೆ ಪಟುಭಟರ ಮೈಗದಾ ।
ಘಾತದಿಂ ರಕ್ತಮಯವಾಗೆ ಬಳಿಕ ಸುರೇಂದ್ರ ।
ಪವನಜಂಗಿಂತೆಂದನು ॥ ೫೨ ॥

ಮಗಧನ ಹೀಯಾಳಿಕೆಗ ಭೀಮನ ಉತ್ತರ

ಯಾಕೆಲವೊ ಕಾಳಗಕೆ ಮರುಳಾಗಿ ಬಂದನಿ ।
ನೇಕ ಚಕ್ರದೊಳ್ಪಿದೆ ಭಿಕ್ಷವುಂ ತಿಂದು ಬಂ ।
ದಾಕೂಳ ನೊಕ್ಕು ತಲೆಗೇರಿದನೆ ಮೂಢಕೇಳಾ
ಬಂದುದಂ ಪೇಳ್ವೆನು ॥

---

ಉನ್ಮೀಳಿಸಿ= ಕಳನಳಗೂಂಡು ಸೂಸೆ= ಜಸಿಜಸಿಯಾಗಿಬೀಳು
ಗುಂಜಾಭರಣ= ಗುಲಗುಂಜಿ ಸರ, ಧರಿಸಿದ ಪುಳಿಂದಬೇಡರಂತೆ
ಜಾತರೂಪ= ಬಂಗಾರ. ಪೋತಕಿಂಶುಕ= ಮುತ್ತಲಗಿಡದ ಹೂವಿನಂತೆ.

ನಾಕಜರಿಗಿಲ್ಲದ ರಸಾಯನವನುಂಡು ಬೆಳ ।
ದೀ ಕೊಬ್ಬಿದಂಗದೋಳ್ ನುಣ್ಪುಪರ್ನು ಪಸುತೀರ್ಪನಿ ।
ನ್ನೀ ಕಾಳಿಜವನೆ ತಿಂದಾ ಕೂಳ ರೋಚಕವ
ನಾಕಳೆವೆ ನೋಡೆಂದನು ॥ ೫೩ ॥

ಭೀಮ ಮಾಗಧರ ಪರಪರಗದಾ ಪ್ರಹರ

ಅದು ಕೇಳು ತುರಿಯ ನುಗುಳುತ ಕೋಪದಿಂ ನೆಲ ।
ನೊದದು ಪುಟನೆಗೆದು ಬೊಬ್ಬಿರಿದಾರ್ದು ಭುಜಹೊಯ್ದು ।
ಗದೆಯ ತಿರುಹುತ್ತಿದೆಯ ಹೊದ್ದನಾ ಭೀಮನಂ
ಸುರರೆಲ್ಲ ಬೆರಗಾಗಲೂ ॥

ಆಘಟುಮಿಗೆ ವಜ್ರಮುನ್ನಂ ನಗವ ನೆರಗಿದಂ ।
ತದುಭೂತ ಪ್ರಹರದಿಂ ಅನಿಲಜಂ ರೋಷದಿಂ ।
ಮದಮುಖನ ನುರವನಪ್ಪಳಿಸಲ್ಕೆ ಧರಧರನೆ
ಕಂಪಿಸಿಸುತಲಿಂತೆಂದನು ॥ ೫೪ ॥

ಮಗಧನು ಭೀಮನ ಗದೆಯು ಹೊಡೆತಕ್ಕೆ ಭಲಾಎಂದು ಪುನ ಎದೆಗೆ ಗಧೆಬಗೆಯೆ
ಭೀಮನು ಶಿರದಲ್ಲಿ ಪ್ರಹರಗೈದ

ಆರರೆ ಮಜಭಾಪು ಪೂತುರೆ ಭಲಾ ಕುರುಮಹೇ ।
ಶ್ವರರ ಕುಲದವನಹ ಸಮರ್ಥನೈ ನೋಡೆನು ।
ತ್ತುರುಗದಾ ಘಾತಮಂ ಬಗೆಯದೆ ಭುಜೋದ್ದಂಡ
ಮಂನೆಗಹಿ ಗದೆಯ ತಿರುಹಿ ॥

ಮರುತಜನ ಪ್ರೊಯ್ಯಲಾ ಘಾಯಮಂ ತಪ್ಪಿಸುತ ।
ಘುರಿಘುರಿನೆ ಪಲ್ಮುರಿವೆ ತಾರ್ದು ಮಗಧೀಶ್ವರನ ।
ಶಿರವ ನಪ್ಪಳಿಸಿದಡೆ ಪರ್ವತಾಗ್ರದ ಮೇಲೆ
ಸಿಡಿಲೆರಗಿದಂತಾದದು ॥ ೫೫ ॥

ಭೀಮನ ಮಗಧನ ಶಿರಕೆ ಪ್ರಹರಿಸಲು ಕಿರೀಟ ಮುರಿದದು.

ಪ್ರಳಿಯ ಪವನ ಪ್ರಹರ ದೊಳಿಳಿಗೆ ತಾರಕಾ ।
ವಳಿ ಸೂಸುವಂತೆ ವೀಂದ್ರನ ಹುಯಲಿನಿಂದಷ್ಟ ।
ಕುಲನಾಗಗಳ ಪೆಡೆಯ ವರರತ್ನರಾಜಿ
ಯುಗದಂತೆಸೆವ ಮುಕುಟ ಮುರಿದು ॥

ಪೊಳೆವ ಮೌಕ್ತಿಕ ಮಣಿ ಸಮೂಹಂಗಳುದುರೆ ತಲೆ |
ಯುಳಿಯುತೇ ಸಾಕೆನುತ ಹೊಳದು ಹೋಹವಸನ |
ಪ್ಪಗೆಸಿದಡೆ ಹೊರಕ್ಕೈಯ್ಯಲಾ ಘಾಯಮಂ ಕಳೆಯೆ
ಮತ್ತೆ ಮಾರುತಿ ಪೋಯ್ದನು || ೫೬ ||

ಉಭಯರ ಗದಾಯುದ್ಧದಿಂದ ಬ್ರಹ್ಮಾಂಡ ಘೀಳುಡುತಿರ್ದುದು

ಖರಸಿಡಿಲು ಸಿಡಿಲನಪ್ಪಳಿಸಿದಂತಾಯುಧದ |
ಬಿರಸಿನ ಛಟತ್ಕಾರಕಂಬರಂ ತುಂಬಿಡಲು |
ಮಿರುಪ ಮಿಂಚಿನ ಮಳೆಯು ಕರೆವ ಬಲುಗದೆಯ
ಚಳುಬಳಿಕೆಗೆ ದಿನೇಶಬಿಂಬ ||

ತೆರಹರಿಸುತಿರಲೊದದು ಪುಟನೆಗದಡಹಿಪ ನೆದ |
ಮುರಿಯೆ ಧಿಕ್ಕರಿಕುಸಿಯೆ ಕೂರ್ಮನಳವಳಿಯೆ ಬೊ |
ಬ್ಬಿರಿದಡಬ್ಜಭವಾಂಡ ವಂದೆರಡು ಘಳಿಗೆ ಘೀಳಿ—
ಡುತಿರ್ದುದು || ೫೭ ||

ಕಡೆ ಭೀಮನು ಮಾಗಧನ ಮಸ್ತಕ ಹೊಯ್ದನು.

ಇಂತು ರಣಕೇಳಿಯಂ ಮಾಡುತ ಗದಾದಂಡ |
ಮಂತಿರುಹುತನಿಲಜಂ ರೋಷತಾಮ್ರಾಕ್ಷದಿಂ |
ಕಂತುಪಿತ ಫಲ್ಗುಣರ್ ಬೆರಗಾಗಿ ಪೊಯ್ದನಾ
ಮಾಗಧನ ಮಸ್ತಕವನು ||

ಅಂತಕನ ಕೋಪ ಭೈರವನ ಪ್ರತಾಪ ಕಾ |
ಮಾಂತಕನ ಭೀಷಣ ಕಲಾಪವಿಂತಿದು ನೋಡೆ |
ಕುಂತಿಸುತ ನೊಳದೆ (ನುಳಿದೆ) ಧಿಟ್ಟನುತಮರ
ತತಿ ನಡುಗೆ ಮತ್ತೆರಗಿದಂ ಖತಿಯೊಳು || ೫೮ ||

---

ಚಳುಬಳಿಕೆ=ಚಮತ್ಕಾರ
ಅಂತಕನಕೋಪ=ಯಮದೇವರ ಸಿಟ್ಟು
ಭೈರವನಪ್ರತಾಪ=ಮಹಾರುದ್ರನ ಅವತಾರನಾದ ಭೈರವನಸಂತಾಪ-ಶೌರ್ಯ

## ಅಲಂಕಾರ ವರ್ಣನೆ

ಭೀಮನ ಗದಾಪ್ರಹಾರದಿಂದ ಸರ್ವಾಂಗ ಜರ್ಜರಿತನಾದ

ಅರರೆ ಪವನಾತ್ಮಜಂ ನಿಜಸಾಹಸದೊಳಮುಮು ।
ಕುರುಬ ಮಾಗಧನಂಗ ಭಿತ್ತಿಯೊಳ್ ಚಿತ್ರಮಂ ।
ಬರೆದನೋ ಮೇಣ್ವೀರ ಲಕ್ಷ್ಮೀಸಖ ರೇಖೆಯಾ
ವಳಿಗಳೋ ಪೇಳೆಂದೆನೆ ॥
ಉರುಭಾಳ ಗಂಡ ಮಂಡಲ ಮುಡುಹು ಮುಂಗೈ ಗ ।
ಳುರು ಕಂಠಕಕ್ಷ ಮೊದಲಾದೆಡೆಗಳಲ್ಲಿ ಭೀ ।
ಕರ ಗದಾ ಘಾತದಿಂ ಜರ್ಜರಿತನಾಗಿ ಖಳ-
ನಳವಳಿದನಾಕ್ಷಣದೊಳು ॥ ೫೯ ॥

ಮಾಗಧನು ರಕ್ತಕಾರಿ ಭೂಮಿಯಲ್ಲಿ ಬಿದ್ದ ಕೈಗದಾ ಕಳಚಿತು

ಬಾಯೊಳುಕ್ಕದುರುಧಿರ ಕಂಪಿಸುತ ಶತಕೋಟಿ ।
ಘಾಯಕೆ ಮಹಾನಗಂ ಸಿಡಿದಿಳೆಗೆ ಬೀಳ್ವಂತೆ ।
ವಾಯುನಂದನನ ಪ್ರಹಾರದಿಂ ಬಿದ್ದನವ-
ಕೈಯ್ಯ ಗದೆ ಕಳಚಿ ನೆಲಕೆ ॥
ಹಾಯೆನುತಲಸುರ ಜನ ಡೆಂಡಿಣಿಸುತಿರಲಂಬು ।
ಜಾಯತಾಂಬಕ ಕಿರೀಟಿಗಳಾರ್ದು ಸಂತೋಷ ।
ತೋಯ ನಿಧಿಯೊಳ್ಮುಳುಗಿ ಭೀಮನಂ-
ಕೊಂಡಾಡುತಿರೆ ದೈತ್ಯ ಚೇತರಿಸಿದ ॥ ೬೦ ॥

ಮಾಗಧನು ಚೇತರಿಸಿ ಗದೆ ಪಿಡಿದು ಭೀಮುಸಿಲ್ಲೆನುತ ಮೇಲೇರಿ ಹೋದುದು.

ಬಡುಬಡಿಸಿ ಧಾರಿಡುವ ಶೋಣಿತದ ಧೂಳಿಯಂ ।
ತೊಡತೊಡದು ನೆರಗಿನಲಿ ಶ್ರೀಗಂಧ ಕರ್ದಮುವ ।

---

ಕುರುಬ=ಕುರಿಕಾಯ್ವವ, ದಡ್ಡ, ಯುದ್ಧದಲ ಅಕುಶಲ.
ಅಥವಾ ಕುರುಬ=ಸೇಚನಾಯಿ, ಅಥವಾ ಚಿರತೆಯಂತೆ ಕ್ರೂರಸ್ವಭಾವವುಳ್ಳವ.-
ಡೆಂಡಣಿಸು=ಭೀತಿಗೂಳ್ಳು.
ಶ್ರೀಗಂಧಕರ್ದಮವ=ಮೃಗೆಪೂಸಿದ ಶ್ರೀಗಂಧವಂಬ ಕೆಸರಿಸಿಂದ
ಗಾಯದ ಹೋರು ಮೇತ್ರಿ

ಬಿಡಬಿಡದೆ ಮೆತ್ತಿದಂತನು ಘಾಯ ಪ್ರೋಗ್ರ್ಗಳಂ
ಕರ್ಪೂರದ ಕವಳಗೊಳುತಾ ||
ಘುಡಿಘುಡಿಸಿ ರೋಷದಿಂದಾಲಿಗಳ್ ಕೆಂಪಡರೆ ।
ಕಿಡಿಕಿಡಿಗಳುರಿಯನುಗುಳುತ ಭ್ರುಕುಟಿ ಬದ್ಧದಿಂ ।
ಫಡಫಡಲೆ ಭೀಮ ನಿಲ್ಲೆನುತೆದ್ದನಾಗ ಗದೆಗೆ
ಕೈನೀಡಿ ಬೊಬ್ಬಿರಿವುತಾ || ೬೧ ||

ಮಾಗಧನು ಅತಿಕೋಪದಿಂ ಇಂತೆಂದನೆ.

ಹಾನಿ ಎಮಗಾಯ್ತೆಂದು ಕಂಡಿಂದು ಬಹಳ ಸು ।
ಮ್ಮಾನಮಯ ರಾದಿರರೆ ಘಳಿಗಿಯೋಳ್ ನೋಡಿದು ।
ಮ್ಮಾನ ಜಲಧಿಯೋಳದ್ದಿ ಮುಳುಗಿಸುವೆ ನಿಮ್ಮೀರ್ವ
ರಂ ಬಿಂಕ ಮುರುಕಗಳನು ||
ಈ ನಗೆಯ ಈ ಬಗೆಯ ನೀಬೊಬ್ಬೆ ಗರ್ವ ವಿಜ ।
ಯಾನುರಾಗವ ನಿಲಿಸುವೇಂ ನೃರಿಸಿನ್ನೆನುತ ।
ಲಾನರ ಮುರಾರಿಗಳ ಖಳಜರಿಯೆ ಬಕವೈರಿ
ಕೃದ್ಧನಾಗಿಂತೆಂದನು || ೬೨ ||

ಭೀಮನು ಮಾಗಧನಿಗೆ ನಿನ್ನ ಪೌರುಷವಾದರೂ ತೋರೆಂದು
ಅವನ ಮಸ್ತಕ ಅಪ್ಪಳಿಸಿದ

ಹೊಯ್ದು ತೋರೆಲೆ ಮರುಳೆ ಬಂಜೆ ನುಡಿಯೋಳ್ಪರಿದೆ ।
ಬಯ್ದಡಧಿಕನೆ ಶೌರ್ಯದಿಂ ತಿಳಿಯೆ ಜಾತಿಯೋ ।
ಕೈದೆ ನೀನಾರು ಬಾಹುಜನೊ ಮೇಣ್ಮುಖಜನೋ
ಬಾಯ್ಬಡಕ ತನದಿಂದಲಿ ||

ಮೈದೆಗೆಯ ದಿರ್ ನಿಲ್ಲು ಕಲಿಯಾಗಿ ಸಮರದೋ ||
ಳೈದು ಮೊಗನಂ ಕರೆ ಸಹಾಯಕೆಂದನು ತಾರ್ದು ।

---

ಕರ್ಪೂರದ ಕವಳಗೊಳುತ=ಶ್ರೀಗಂಧ ಕರ್ಪೂರದಿಂದ ಗಾಯಗಳನ್ನು ತುಂಬುತ್ತ
ಆಲಿಗಳ್=ಕಣ್ಣುಗುಡ್ಡೆ.
ಮೈದೆಗೆಯದಿರ್=ಓಡಿಹೋಗದೆ.

ಕೈದಣಿಯ ಲಪ್ಪಳಿಸಿದಂ ಭೀಮ ಗದೆಯಿಂದ
ಮಾಗಧನ ಮಸ್ತಕವನು || ೬೩ |

ಮಾಗಧನು ಭೀಮನ ಗದೆ ತಪ್ಪಿಸಿ, ಭೀಮನ ವಕ್ಷ ಸ್ಥಳಕ್ಕೆ ಹೊಡೆದ ಪರಸ್ಪರ ಯುದ್ಧ

ಎಡದ ದಂಡೆಯ ನೋಡಿ ಘೋರತರ ಹೊಯಲುಗಳ |
ಕಡುಹು ತಪ್ಪಿಸಿ ವೃಕೋದರನ ವಕ್ಷಸ್ಥಳವ |
ಪೊಡೆಯಲಾ ಘಾಯವಂ ಹೊರಕೈಯ್ಯಲಿಂ
ಕಳೆದು ಮತ್ತೆ ಮಾರುತಿ ಹೊಯ್ಯಲು ||

ತಡೆದನಾ ಮಗಧೀಶನ ತುಳ ಪ್ರಹಾರವಂ |
ಬಿಡದೆ ತಿವಿದಂ ಹಿಡಿಂಬಾಂತಕಂ ಸತ್ವದೊಳ್ |
ಕಡುಚಮತ್ಕಾರದಿಂ ಕಾದಿದರ್ ಬೇಸರದೆ
ಮೂಜಗಂ ಬೆರಗಾಗಲು || ೬೪ ||

ಘೋರತರ ಯುದ್ಧವರ್ಣನೆ

ಕಡಲ ಧ್ವನಿಯಿಂ ಯುಗಾಂತದ ಮೇಘಕೋಟಿಗಳ |
ಘುಡುಘುಡು ನಿನಾದವುಂ ಕೇಸರಿಯ ಘೋಷವುಂ |
ಸಿಡಿಲುಗಳ ಗರ್ಜನೆಳಂತಿಬ್ಬರಬ್ಬರದ ಬೊಬ್ಬೆ
ಕೇಳಲ್ಕಾದದು |

ಕಡೆಗಾಲದೊಳ್ ಮೃಡನ ಪಣೆಗಣ್ಣಿನಿಂ ಸುರಿವ |
ಕಿಡಿಗಳುಂತುಭಯ ವೀರರ ಗದಾ ದಂಡದಿಂ |
ಸಿಡಿವ ಸ್ಫುಲಿಂಗಗಳ್ ತ್ರಿಪುರದಹನಂಗಾರ
ಶೇಷದೊಲ್ ಕಣ್ಗೆಸೆದದು || ೬೫ |

ಬಳಿಕನಿಲಸಂಭವಂಗಾಜರಾಸಂಧ ಖಳ |
ಗಳವಿಯೋಳ್ಕಾಳಗಂ ಪೂಣ್ದುದು ಕಠೋರ ತರ |

---

ಸತ್ವದೊಳು=ಬಹುಶಕ್ತಿಬಲದಿಂದ.

ನಿನಾದ=ಶಬ್ದಧ್ವನಿ. ಕೇಸರಿಯ ಘೋಷ–ಸಿಂಹನಾದ. ಸ್ಫುಲಿಂಗಗಳ=ಕಿಡಿಗಳು.

ಪೂಣ್ದುದು=ಹೂಣ್ದುದು ಯತ್ನಿಸಿ =ನಿಶ್ಚೈಸಿ.

ಮುಳಿಸಿಂಗೆ ಮುಳಿಸು ಘಾಯಕೆ-ಘಾಯ ಗತಿಗೆಗತಿ
ಹತಿಗೆ ಹತಿ–ಸರಿಬರಿಯನೆ ॥
ನೆಳನೊಡನೆ ಪೋರ್ವಂತೆ ಭರಸಿಡಿಲು ಸಿಡಿಲಿನೋ ।
ಳ್ಪಳಚುವಂತಿರೆ ಪಳಚಿ ಗೆಲಲೋರ್ವರೋರ್ವರುಂ ।
ಬಳಲಿ ವಿದ್ಯಾಧರೋತ್ಕರಣದಿಂ ಗಗನಕ್ಕೆ ಜಿಗಿದ ।
। ನಾಮಗಧೇಂದ್ರನೂ ॥ ೬೬ ॥

ಮಾಗಧನು ಆಕಾಶದಿಂದಿಳಿದು ಭೀಮನ ಮಸ್ತಕಕ್ಕೆ ಮಹಾಗದಾ ಪ್ರಹರಿಸಲು
ಇಳೆಗೆ ಮೂರ್ಛೆಗೈದು ಚೇತರಿಸಿದ

ಇಡಿದ ಘನಕೋಟಿಗಳ ನೊಡೆದು ಪೊರಮಡವ ಭರ ।
ಸಿಡಿಲಂತೆ ಬಂದು ಭೀಮನ ಮಸ್ತಕವನೆರಗಿ ।
ಹೊಡದಡಾ ಘಾಯದಿಂ ಬಸವಳಿದು ನೀಲಾಚಲಂ
ಧರಿಗೆ ಬೀಳ್ವಂದದಿ ॥ (ತಿಳಿದೆದ್ದು)
ಕೆಡದು ಮೂರ್ಛೆಯನ್ನೈದೆ ನಿಮಿಷದೋಳ್ ಚೇತರಿಸಿ ।
ಘುಡಿಘುಡಿಸಿ ಖಾತಿಯಿಂದವನುರವನಪ್ಪಳಿಸಿ ।
ದಡೆ ಮತ್ತೆ ವ್ಯೆಮರದು ಬಿದ್ದೊಡನೆ ಚೇತರಿ
ಸು ತಾಹವಕ್ಕನುವಾದನು ॥ ೬೭ ॥

ಪುನಃ ಭೀಮಮಾಗಧರ ಚಮತ್ಕಾರ ಯುದ್ಧಬಂಣನೆ

ಹೊಳದು ಚಿಗಿವರ್ ತನುವಡಗಿ ಪರ್ಮುನೆಯನುಣ ।
ದೊಳ ಪೊಗುವರಪ್ಪಳಿಸಿ ವಾಯ್ವೆರವದಾನ ವಿಡಿ ।
ದಳವಿಯೋಳ್ ನಿಲ್ವರತಿ ಬಿರುಬಿನಿಂದೆರಗುವರ
ಮೋಘವೆನಲಪ್ಪಳಿಸುವಾ ॥
ಬಲವನುರೆ ಮೆರೆವರೊದವಿದ ಬುದ್ಧಿಯಂ ಕಳಚಿ ।
ಕಲಿಯಾಗಿ ಹಳಚಿ ಹೊಯ್ದಾಡಿದರಿವೆಲ್ಲ ಮಂ ।
ಕಲಿತರ್ದುಶಾವತಾರದೋಳೆನಲ್ ಮಾಗಧ
ವೃಕೋದರ ಮಹಾವೀರರು ॥ ೬೮ ॥

---

**ವಿದ್ಯಾಧರೋತ್ಕರಣದಿಂ** = ವಿದ್ಯಾಧರ ವಿದ್ಯಮಾಯಾದಿಂದ ಮೇಲಿರು.
**ಅಳವಿಯೋಳ್** = ಪರಾಕ್ರಮದಿಂದ. ಬಸವಳಿದು= ದಣಿದು-ಬಾಡಿ.

ಗದೆಯಿಂದ ನಡುಗಿದ ಮಾಗಧನು ಬಲಶಾಲಿಗಳಿಗೆ ಮಲ್ಲಯುದ್ಧ ಮುಖ್ಯವೆಂದನು

ಈ ತೆರದಳೋರ್ವರಂ ಜೈಸುವಾತುರದಿ ।
ಚಾತುರ್ಯದಿಂ ಶಣಿಸುತಿರೆ ಬಳಿಕಮಗಧೀಶ ।
ವಾತಸುತಗೆಂದನೆಲೆ ಸತ್ವಪ್ರಸಿದ್ಧರಿಗೆ ಶಸ್ತ್ರ
ದಿಂದಿರಿದಾಡಲು ॥
ಖ್ಯಾತಿಯೇ ಸಾಕಿನ್ನು ಮಲ್ಲಯುದ್ಧಕೆ ಕೆಣಕಿ ।
ನೀತೋರು ನಾಗಾಯುತ ತ್ರಾಣ ಬಲುಹನೆನೆ ।
ಪೂತು ದಾನವನೆಂದೊಡಂ ಬಟ್ಟು ಗದೆಬಿಟ್ಟು
ತೆಕ್ಕೆಯಿಂದಲಿ ತೊಡರ್ದಾ ॥ ೬೯ ॥

ಭೀಮ ಮಾಗಧರ ಮಲ್ಲಯುದ್ಧ

ಪತ್ತಿದರ್ ಭುಜದಿಂದ ಮತ್ತೆ ದಿಗ್ಗಜದಂತೆ ।
ಮತ್ತೆ ತಿವಿದಾಡಿದರ್ ವಜ್ರ ಮುಷ್ಟಿಗಳಿಂದ ।
ತತ್ತಳವಗೊಳದೋರ್ವ ರೋರ್ವರಂ ಮೂದಲಿಸಿ
ಬೊಬ್ಬಿರಿದು ತಳ್ತಿವಿಯಲು ॥
ನೆತ್ತರಂಗದಿ ಸುರಿದುದಾಗ ಜಾಜಿನಗಿರಿಯ ।
ನೆತ್ತಿಯಿಂದಿಳಿವ ಮಳೆಧಾರಿಯೋಲ್ ಹರಿಪಾರ್ಥ ।
ರುತ್ತಮಾಂಗವನೊಲಿದು ಸಾಹಸಕೆ ಮೆಚ್ಚುತಿರೆ
ಕಾದಿದರ್ ಕಡುಗಲಿಗಳು ॥ ೭೦ ॥

ಮಲ್ಲಯುದ್ಧ ವಿವರ ವರ್ಣನೆ

ಅಡಿಗಡಿಗೆ ತೊಡೆ ಹೊಪ್ಪೊಯ್ದು ವಾರುತ್ತ ಚೀರುತ್ತ ।
ಘುಡಿಘುಡಿಸಿ ಮುಷ್ಟಿಯಿಂದಿರಿವುತ್ತ ಸರಿವುತ್ತ ।
ನಡುನಡುಗಿ ಮರವೆಯಿಂ ಬೀಳುತ್ತ ಲೇಳುತ್ತ
ಲೋರ್ವರೋರ್ವರ ನೋಡುತ ॥

---

ಸತ್ವಪ್ರಸಿದ್ಧರಿಗೆ=ಮಹಾಬಲಶಾಲಿಗಳಿಗ
ನಾಗ+ಅಯುತ=ಹತ್ತುಸಾವಿರ ಆನೆಯ ಬಲ
ಮೂದಲಿಸಿ=ಹಂಗಿಸಿ— ಅಪಹಾಸದಿಂದ

ತಡತಡನು ಭುಜದಿಂದ ಪೊಯ್ವುತ್ತ ನೊಯ್ವುತ್ತ।
ಲೊಡಲೊಡನೆ ಮರ್ಮದಲಿ ಪೊಯ್ವುತ್ತ ಬೈಯ್ವುತ್ತ ।
ಬಿಡಬಿಡದೆ ಶೌರ್ಯಮಂ ತೋರುತ್ತ ಜಾರುತ್ತ ।
ತಿವಿದಾಡಿದರ್ ಸುಭಟರು ॥ ೭೧ ॥

ಶ್ರೀ ಕೃಷ್ಣನರರು ಭೀಮನ ಬಲ ಪೊಗಳೆ ಮಾಗಧನ ಪರಿವಾರ ಅವನ ಹೊಗಳುವಿಕೆ.

ಪೂತು ಸಾಹಸ ನಿಧಿಯೆ ಜಗಜಟ್ಟಿ ಭಲಭಲಾ ।
ವಾತಸಂಭವ ವೈರಿಕುಲ ಮಥನ ವಿಖ್ಯಾತ ।
ಸೋತನೈ ಪ್ರತಿಮಲ್ಲನೆಂದು ಕೈವಾರಿಸಿದರಾಗ
ಸುರಹರ ಪಾರ್ಥರು ॥

ಭೀತನಾದಂ ಭೀಮನಿರ್ನಾಮ ನಹಿತಜನ ।
ಘಾತ ಮಾಗಧರಾಯ ರಣಭಯಂಕರ ಶತ್ರು ।
ವ್ರಾತ ಪರ್ವತವಜ್ರ ನೆಂದನವ ಪರಿವಾರ-
ವಂದಿಗಳು ಪೊಗಳುತಿರಲು ॥ ೭೨ ॥

ಆಕಾಶದಲ್ಲಿ ದೇವತೆಗಳು ಭೀಮನಿಗೆ ಜಯವಾಗಲೆನುತ ಹೂಮಳೆಗರೆದರು

ಭಾಪುರೇ ಭೀಮ ನಿಸ್ಸೀಮ ಸದ್ಗುಣಧಾಮ ।
ಭಾಪುರೇ ಪಾಂಡುಸುತ ಜಯವಂತ ಬಲವಂತ ।
ಭಾಪುರೇ ಜಗವೀರ ಧೀರ ಮೂರವತಾರ ಶೂರ
ಖಳವನ ಕುಠಾರ ॥

ಈ ಪೊಡವಿ ಭಾರಕನ ಜೈನು ಜೈನನುತ ತಾ ।
ರಾ ಪಥದೋಳ್ ನೆರೆದಿರ್ದ ಸುರನಿಕರ ಕೊಂಡಾಡು ।
ತಾ ಪವನ ತನಯನ ಶಿರೋಭಾಗದೋಳ್ಪುಷ್ಪ
ವೃಷ್ಟಿಯಂ ಕರೆವುತಿರಲು ॥ ೭೩ ॥

ಹಿಂತಿನಯೋದ್ಧರ ಬವರದಿಂ ಈ ಯುದ್ಧ ಘಾಸತಾದದೆಂತೆನೆ

ನರಹರಿ ಹಿರಣ್ಯಕನ ಘೋರತರ ಸಮರವೋ ।

---

ಭಾಪುರೆ–ಭಲಾ, ಶಹಭಾಸ.
ಸಮರ–ಅನುವಾದ– ಯುದ್ಧ

ನರಕಾರಿ ಚಾಣೂರ ಮಲ್ಲರನು ವಾರ ವಾ ।
ನರಕಾಂತ ರಾವಣನ ಕರ್ಕಶದ ತೀವಿಗಳೊ
ಶಕ್ರ ಜಂಭರ ಬವರವೊ ॥
ಸುರಪಸುತ ದುಂದುಭಿಯ ಕದನವೋ ಮೇಣ್‌ಶೂಲ ।
ಧರಗಜಾ ಸುರರಾಹವವೊ ವೇಳೆನಲ್ ಮಗಧ ।
ಧರಣೀಶ ಗಂಧವಾಹನ ತನುಜರದ್ಭುತದ-
ಕಾಳಗಂ ಪೊಸತಾದದು ॥ ೭೪ ॥

ಪುನಃ ಯುದ್ಧದ ವಿಚಿತ್ರ ವರ್ಣನೆ

ತ್ವರಿತದೋಳಿರಿತದೋಳ್ ಶೌರ್ಯದೋಳ್ ಧೈರ್ಯದೋ ।
ಳುರು ಮುಷ್ಟಿ ದೃಷ್ಟಿಯೋಳ್ ದೃಢತೆಯೋಳ್ ಗಮನದೋಳ್ ।
ಹರಿನಾದದೋಳ್ ಭೃಕುಟಿಬದ್ಧದೋಳ್ ಕೋಪದೋ
ಳ್ರೂಪದೋಳ್ ತಾಳಿಕೆಯೊಳು ॥
ಕರಚಮತ್ಕೃತಿಯೊಳು ವಿವಾದದೊಳು ಪಂಥದೋಳ್ ।
ಧರಣಿಯೋಳ್ಕಾಣೆ ನೀರ್ವರೀರ್ವರ್ಗೆ ಸಮನಾದ ।
ಪುರುಷರೆಂದೆನೆ ವೃಕೋದರ ಮಾಗಧರ್ ಬಿಡದೆ
ತಿವಿದಾಡಿದರ್ ಧುರದೊಳು ॥ ೭೫ ॥

ತೆಗೆಯುರರ್ಜುನಕೃಷ್ಣರನಿಲಸಂಭೂತನಂ ।
ನುಗಿಯುರಸುರನನವನ ಪರಿವಾರ ನಾಯಕ ।
ರ್ಪಗಲಸ್ತಮಯರಾತ್ರಿಯೆಂಬ ವಿವರಣಮಿಲ್ಲ
ದನ್ನ ಪಾನಾದಿಗಳನು ॥
ಬಗಸದಿರ್ವರ್ದರ್ಪದಿರ್ವರ್ದರ್ಪಭುಜ ಬಲ ಪರಾಕ್ರಮದ ।
ಹೊಗರು ಹಿಂಗದೆ ಮನದ ಬಿಂಕತಗ್ಗದೆ ಜಯದ ।
ಬಿಗಹು ಸಡಿಲದೆ ಮುಳಸಿನರುಚಿಸವಿಯುದೆ
ಮುಷ್ಠಿಯಿಂದ ಕಾದಿದರು ಭಟರು ॥ ೭೬ ॥

---

ತೀವಿಗಳೊ = ಚುಚ್ಚುವ, ಇರಿತದ ಬಡದಾಟ. ಹೊಗರುಹಿಂಗದೆ = ಕಾಂತಿ ಪ್ರಕಾಶ ತಗ್ಗದೆ. ಮುಳಸಿನ=ಸಿಟ್ಟಿನ ಉರುಚೆ=ಪರಾಕ್ರಮ ರಭಸ ಸವಿಯುದೇ.

**ಒಂದು ಪಕ್ಷದೋಳ್ ಕಾದಿ ಭೀಮನು ಮಗಧನ ಸರ್ವಾಂಗಂ ಮುಷ್ಟಿಯಿಂ ಘಾತಿಸಲು ಅಸುರನು ತೇಜೋಹೀನನಾದ.**

ಈತೆರದೊಳೊಂದು ಪಕ್ಷಮಹೋರಾತ್ರಿಯೋಳ್ ।
ವಾತಸುತ ಮಾಗಧರ್ಕಾದಿದರು ಬ್ಯಾಸರದೆ ।
ಶ್ವೇತವಾಹನ ಕೃಷ್ಣರದ್ಭುತವ ನೋಡುತಿರ
ಲನಿಲಜಂ ಪಲ್ ಮುರಿವುತ ॥
೧ ಖಾತಿಯಿಂದವನ ಸರ್ವಾಂಗಮಂ ಮುಷ್ಟಿಯಲಿ ।
ಘಾತಿಸಿದಡಸುರನಸುವಳಿದು ನಡುನಡುಗಿ ರಣ ।
ಭೀತಿ ಮುಸುಕಿತು ಪರಾಕ್ರಮ ತೇಜ ಪಶ್ಚಿಮದ
ತರಣಿಯೆಂದದಲಾಯಿತು ॥ ೭೭ ॥
ಬ್ಯಾಸರಂ ಬೇರೂರಿದದು ನಿಮಿಷದೋಳ್ ವಿಜಯ ।
ದಾನೆ ಜಾರಿತು ಧಿಟ್ಟತನ ಧೈರ್ಯ ೨ ಛಲದಸುವಿ ।
ಲಾಸ ಹಾರಿತು ನೋಡೆ ಸುಪ್ರತಾಪದ ಕೆಂಪು-
ಕರಿದಾಯ್ತು ರೋಷವಡಗಿ ॥
೩ ವಾಸೆ ೪ ಪೈಸರ ಪೋಯ್ತು ತೀವ್ರ ತರಗತಿ ಸ್ಥಿತಿಯ ।
ಮೊನಲಳಿದದು ಮಾಗಧಂಗಿದಂ ತಿಳಿದಾಗ ।
ವಾಸುದೇವಂ ಭೀಮನೇನಂಗೆ ಸೂಚಿಸಿದ
ನಿದುಸಮಯ ತಂಯೆಂದೆನೆ ॥ ೭೮ ॥

ಶ್ರೀ ಕೃಷ್ಣನಾಜ್ಞೆಯಂತೆ ಭೀಮನು ಜರಾಸಂಧನನ್ನು ಸೀಳಿ ಸಂಹರಿಸಿದ್ದು

ಹರಿಯ ವಚನಂ ಕೇಳ್ದು ರೋಷದಿಂ ಮಾಗಧನ ।
ಶಿರವನೆರಗಿದರೆ ಕಣ್ಣಾಲೆ ಧಿಗ್ರನೆ ತಿರುಗಿ ।
ಭರಶಿಡಿಲು ಹೊಡೆದಪ್ರೋಲ್ ಕೆಷದು ನೆಲನಂ ಕಚ್ಚಿ
ಕಾರುತ್ತ ಲೊವದುಕೊಳುತಾ ॥

---

**೧ಖಾತಿ=ಕೋಪ ಸಿಟ್ಟು, ೨ ಛಲ=ಹಟ ೩ ವಾಸೆ ಭಾಷೆ, ಮಾತು, ಫಲ. ೪ ಪೈಸರ ಶಿರವನೆರಗಿ = ತಲೆಯುಮೇಲೆರಗಿ.**

ಹರಿವ ನೆತ್ತರದ ಹೊನಲೋಳ್ಮುಳುಗಿ ಹೊರಳುತಿಹ |
ದುರುಳನುದರದಮೇಲೆ ಚರಣವಿಟ್ಟುಗ್ರಹರಿ |
ಕರಿಯನುರೆಶೀಳ್ವಂತೆ ಶೀಳಿದಂ ದೈತ್ಯನಂ
ಭೀಮ ಕುರುಕುಲ ಲಲಾಮ || ೭೯ ||

**ದುಷ್ಟಮಾಗಧನ ಸಂಹಾರದಿಂದ ತುಷ್ಟರಾದ ದೇವತೆಗಳು ಪುಷ್ಪವೃಷ್ಟಿಗರೆದರು.**

ಭೋರೆಂಬ ಸುರಪಟುಹ ಸುರಿವ ಮಲ್ಲಿಗೆಯ ಮಳೆ |
ನಾರದಾದಿಗಳ ಮಂಗಳಗೇಯವೆಂಬರವ |
ಸೌರಂಭದಿಂದ ಲಂಬರ ಪಿಡಿಯೆಲನಿಮಿಷರ್
ಭೀಮನಂ ಕೊಂಡಾಡುತಾ ||

ಶ್ರೀರುಗ್ಮಿಣೀ ಕಾಂತ ಫಲ್ಗುಣರಮೇಲೆ ಮಂ |
ದಾರದರಳಂ ಮತ್ತೆ ಕರೆಯೆ ವಿಜಯೋತ್ಸವದಿ |
ಮಾರುತ ಸುತಂ ಕೃಷ್ಣಗೊಂದಿಸುತ ವಿಜಯನಂ
ತರ್ಕೈಸಿದಂ ಪ್ರಿಯದೊಳು || ೮೦ ||

**ಮಾಗಧನ ಹನನಂತರ ಊರ ಪರಿಸ್ಥಿತಿ. ಅವನ ಪತ್ನಿಯರ ಗೋಳಿಡುವಿಕೆ**

ಮುನಿಕುಲವೆ ಕೇಳಿತ್ತಲಸುರೇಂದ್ರ ಮಡಿಯಲ್ಕೆ |
ಮನೆ ಮನೆಯ ಬಾಗಿಲ್ಗಳಿಕ್ಕಿದರ್ ಭಯದಿಂದ |
ಜನರೆಲ್ಲ ಗಜಬಿಜಿಸಿ ತಲ್ಲಣಿಸಿದರ್ ಬಳಿಕ
ಕೇರಿ ಕೇರಿಯೋಳು ಖಳನ ||

ವನುತೆಯರ್ ಶೋಕದಿಂ ಘೋಳಿಡುತ ಬಾಯ್ಬಿಡುತ |
ಘನ ಉರಸ್ಥಳವನಪ್ಪಳಿಸಿ ಕೊಳುತಿರಲ್ ಕಂಡು |

---

**ಸುರಪಟುಹ** = ದೇವಗುಂಪು. **ಅರಳಂ**=ಹೂವು, ಪುಷ್ಪ. **ಅರೆ ಕಣ್ಣಾಲೆ ಥಿರ್ರನೆ ತಿರುಗಿ** = ಅರ್ಧ ಕಣ್ಣುಗುಡ್ಡೆಗಳನ್ನು ರೋಷದಿಂದ ತಿರುಹಿ.
**ಗಜಬಿಜಿಸಿ** = ಗದ್ದಲ ಮಾಡುತ್ತ. **ತಲ್ಲಣಿಸಿದರ್** = ಭೀತಿಗೊಂಡರು, ಹೆದರಿದರು.
**ಘೋಳಿಡು** = ರೋದನಮಾಡು. **ಗೋಳಿಡು** = ಅಳು.

ವನಜಾಕ್ಷನತರಕ್ಷ ಖಳಶಿಕ್ಷ ಸಾರಿದಂ ಕೈನೆಗಹಿ
ಸುಸ್ವರದೊಳು ॥ ೮೧ ॥

ಶ್ರೀಕೃಷ್ಣನು ಪೌರಜನರನ್ನು ಸಂತೈಸಿದುದು

ಅಂಜದಿರಿ ಪೌರಜನ ಪರಿಜನರ್ಮಂತ್ರಿ ನಿಕ ।
ರಂಜದಿರಿ ಕೆಂಗಡದೆ ಪಟುಭಟರ್ ಪರಿವಾರ ।
ವಂಜದಿರಿ ಮಾಗಧನ ತರುಣಿಯರ್ ನಾಯಕರ್
ಸಕಲಭುಜ ಬಲವೀರರು ॥

ಅಂಜದೀಕ್ಷಣ ಕರೆಯರೀ ದೈತ್ಯತನುಭವನ ।
ಭಂಜಿಸುವದಿಲ್ಲೀಗ ಬರಲೆನ್ನೆಡಿಗೆ ಪವನ ।
ಸಂಜಾತ ಫಲ್ಗುಣರ್ಕೊಟ್ಟೆ ಭಯವೆಂದ ಸುರಹರ
ನುಡಿದ ಕರುಣದಿಂದ ॥ ೮೨ ॥

ಮಾಗಧನ ಪುತ್ರನಂ ಕೂಡಿ, ಮಂತ್ರಿ ಪರಿವಾರ ಸಹ ಶ್ರೀ ಕೃಷ್ಣ ಭೀಮಾರ್ಜುನರಿಗೆ
ನಮಿಸಿದರು

ಆ ಮುರಾಂತಕನ ಮಾತಂ ಕೇಳ್ದು ಹರುಷದಿಂ ।
ದಾ ಮಾಗಧನ ತನಯನಂ ಕೂಡಿಕೊಂಡು ಬಂ ।
ದಾ ಮಂತ್ರಿ ಪೌರಜನ ಭೀಮಸೇನಾರ್ಜುನರ
ಕಂಡು ಕಾಣಿಕೆಯನಿತ್ತು ॥

ಬಂದಿಯಲ್ಲಿದ್ದ ೧೬೦೦೦ ಜನ ರಾಜರು ಬಿಡುಗಡೆಹೊಂದಿ ಬಂದು
ಶ್ರೀಕೃಷ್ಣನಿಗೆ ನಮಿಸಿ ಪ್ರಾರ್ಥಿಸಿದುದು

ಶ್ರೀ ಮಾಧವಂಗೆರಗಿ ನುತಿಸುತಿರೆ ಸೆರೆಯಿರ್ದ ।
ಭೂಮಿಶರ್ಕೈತಂದು ಹರಿಪಾದಕೆ ಪೊಡಮಡುತ ।
ಲೀ ಮಹಾಬಂಧನಂ ಪರಿಹರಿಸಿದೆಲೆದೇವ
ಸೇವೆಯಂ ಬೆಸಸೆಂದರು ॥ ೮೩ ॥

---

ಪೊಡಮಡುತ = ಹೊರಗೆ ಹೊರಡು, ಸೇರು, ಹೊಂದು

### ಶ್ರೀಕೃಷ್ಣನು ರಾಜರನ್ನು ಸಂತೈಸಿ ಊರಿಗೆ ಕಳುಹಿದುದು

ನವದಿರತಿ ದುಃಖದಿಂ ಖಳನಿಂದ ಸೆರೆಯೊಳಗೆ ।
ಪವನಸುತ ನಿಂದಾಯ್ತು ಬಿಡುಗಡೆಯು ತೆರಳ್ವದಿಂ ।
ನ್ನವನಿಯಂ ಪೊರೆಯಲ್ಕೆ ಪೌರಜನ ಪರಿಜನರ
ಸಲಹುವದು ಧರ್ಮದಿಂದ ॥

ಸುವಿಲಾಸದಿಂದೆಮಗೆ ಮಾಳ್ಪಸೇವೆಗಳಿನ್ನು ।
ಭುವನದೋಳ್ ಬ್ಯಾರಿಲ್ಲ ಸರ್ವಸ್ವವಂ ಕೊಂಡು ।
ತವಕದಿಂದರಸ ನಧ್ವರಕೆ ಬಹುದೆಂದಸುರಹರ
ನುಡಿದ ಭೂಮಿಪರ್ಗೆ ॥ ೬೪ ॥

### ರಾಜರು ತೆರಳಲು, ಮಂತ್ರಿಗಳೆಲ್ಲರು ಶ್ರೀಕೃಷ್ಣಂಗೆ ಪ್ರಾರ್ಥನೆ

ನಗಧರನ ನೇಮದಿಂದಖಿಳ ಭೂಪಾಲಕ ।
ರ್ವಗುಮಿಗೆಯ ಹರುಷದಿಂ ಬೀಳ್ಕೊಂಡು ತಮ ತಮ್ಮ ।
ನಗರಿಗಾಕ್ಷಣ ಪೋದರಿತ್ತಲಾ ಮಾಗಧನ ಮಂತ್ರಿ
ಸಾಮಂತರೆಲ್ಲ ॥

ಜಗದುದರ ಗೊಂದಿಸುತ ಬಿನ್ನೈಸಿದರ್ ಖಳನ ।
ಮಗಗೆ ತಂದೆಯು ಮಾರ್ಗದೋಳ್ ನಂಬುಗೆಯೊ ಮೇಣ್ ।
ಮುಗುವ ಪಾಲಿಸುವ ಕರುಣಾಕಟಾಕ್ಷದ ಬಗೆಯೊ
ದೇವ ಚಿತ್ತೈಸೆಂದರು ॥ ೬೫ ॥

### ಶ್ರೀಕೃಷ್ಣನು ಜರಾಸಂಧನ ಪುತ್ರ ಸಹದೇವಗೆ ಪಟ್ಟಗಟ್ಟುವ ಅಭಯ

ಆವಭಯ ಬ್ಯಾಡಿನ್ನು ಮಾಗಧನ ತನುಜ ಸಹ ।
ದೇವಂಗೆ ಪಟ್ಟಮಂ ಗಟ್ಟಿಸುವೆ ಪುರದೊಳಗೆ ।
ನೀವು ಸುಖದಿಂದೀತನಂ ಪೋಷಿಸುವದೆಂದು
ಕರುಣದಿಂದ ಭಯಕೊಡಲು ॥

---

ಒಗುಮಿಗೆ ಹರುಷದಿಂ=ಬಹುಹೆಚ್ಚಿನ ಸಂತೋಷದಿಂ

ಶ್ರೀವಾಸುದೇವ ಭೀಮಾರ್ಜುನರ ಕೊಂಡಾಡು ।
ತಾವೂರ ಜನ ಮಂತ್ರಿಗಳ್ ಬಳಿಕಲಸುರ ಶವ ।
ಕಾವಿ ವಿಧ ಕರ್ಮದಿಂ ದಗ್ನಿಸಂಸ್ಕಾರಮಂ ಮಾಡಿದರ್
ಸತ್ವರದೊಳು ॥ ೮೬ ॥

**ಶುಭಲಗ್ನದಿ ಸಹದೇವನಿಗೆ ಪಟ್ಟಗಟ್ಟಿ ಕಪ್ಪಕಾಣಿಕೆ ಯೊಂದಿಗೆ ಇಂದ್ರಪ್ರಸ್ಥಕ್ಕೆ ತೆರಳುವಿಕೆ.**

ಬಳಿಕ ಶುಭಲಗ್ನದೋಳ್ ಹರಿಭೀಮ ಫಲ್ಗುಣರ್ ।
ಖಳನ ತನುಜಾತ ಸಹದೇವಂಗೆ ಪಟ್ಟಮಂ ।
ನಲುವಿನಿಂ ಕಟ್ಟಿ ಪೊಳಲೊಳ ಗೈದು ದಿನಮಿರ್ದು
ಸಂತೋಷದಿಂದ ತಮ್ಮ ॥

ದಳಸಹಿತ ಲಪರಿಮಿತ ಧನರತ್ನ ಗಜಹಯಾ ।
ವಳಿ ವಿವಿಧ ವಸ್ತುಗಳ ವಣಿಖಚಿತ ಕಾಂಚನದ ।
ಪೊಳೆವರಥ ವಗಣಿತವ ಕಪ್ಪಮಂ ಕೊಂಡು
ತೆರಳಿದರಿಂದ್ರ ಪ್ರಸ್ಥಪುರಕೆ ॥ ೮೭ ॥

**ಶ್ರೀಕೃಷ್ಣ ಭೀಮಾರ್ಜುನರು ಇಂದ್ರಪ್ರಸ್ಥಕೆ ಬರಲು ರಾಜನು ಎದಿರುಗೊಂಡನು.**

ಆಲಿಸೆಲೆ ಋಷಿಗಳಿರಾ ಪೈಣಗತಿಯಿಂ ಲಕ್ಷ್ಮೀ ।
ಲೋಲ ಭೀಮಾರ್ಜುನರು ಶಕ್ರಪ್ರಸ್ಥದ ಪುರಿಗೆ ।
ಲೀಲೆಯಿಂದೈತರಲ್ ದೂತರೈತಂದಾಗ
ಧರ್ಮಜಂಗೀವಾರ್ತೆಯಾ ॥

ಪೇಳಲತಿ ಸಂತಸದೊಳನುಜರಿಂದೊಡಗೂಡಿ ।
ಬಾಲೆಯರ ಮೇಳದಿಂದುಲಿವ ವಾದ್ಯಗಳವನಿ ।

---

ನಲುವಿನಿಂ = ಸಂತೋಷದಿಂದ. ಸಂತೋಷದೋಳ = ಸಂತೋಷದಿಂದ
ಉಲಿವವಾದ್ಯಗಳಿಂದ = ಉಲಿವ, ಧ್ವನಿಮಾಡುವ ಕಹಳೆ ಮುಂತಾದ ಅನೇಕ ವಾದ್ಯಗಳೊಡನೆ

ಪಾಲಕರ ನಿವಹದಿ ದಿದಿಗ್ಗೊಂಬ ತವಕದಿಂ
ಪೂರಮುಟ್ಟು ನಡೆತಂದನು. ॥ ೮೮ ॥

ಪರಸ್ಪರ ಧರ್ಮ ಶ್ರೀ ಕೃಷ್ಣ ಭೀಮಾರ್ಜುನರ ಪ್ರೇಮಾಲಿಂಗನೆ

ಮುರಹನ ಕಾಣುತಲೆ ನಗೆಯಿಂದ ಧರ್ಮಜಂ ।
ಚರಣಾಬ್ಜ ಕ್ಕೆರಗಲ್ಕೆ ತೆಗದೆತ್ತಿ ತಕ್ಕೈರ್ಸಿ ।
ಕರುಣದಿಂ ಮನ್ನಿಸಲ್ಕಾಗ ಭೀಮಾರ್ಜುನರ್
ಭೂಪಾಲ ನಡಿಗೆರಗಲು ॥
ಪರಮಸುಮ್ಯಾನದಿಂದೀರ್ವರಂ ಬಿಗಿದಪ್ಪು ।
ತರಮುನಿಗೆ ಹರಿಸಹಿತ ಸೂತರ ಮೊಗಳ್ಕೆಯಿಂ ।
ತರುಣಿಯುರ್ಬೆಳಗುವಾರತಿ ನಿವಾಳಿಯಿಂ
ದೈತಂದ ನವನೀಶನು ॥ ೮೯ ॥

ವೈಭವದಿಂದ ಮಂದಿರಕೆ ಬರಲು ದ್ರೌಪದಾದಿಗಳು ಆರುತಿ ಎತ್ತುವಿಕೆ.

ಮಂದಿರಕೆ ಬರಲಾಗ ದ್ರೌಪದಿ ಸುಭದ್ರಾದಿ ।
ಇಂದುವದನೆಯರರುಣಮಯ ಮಂಗಳಾರುತಿಯ ।
ತಂದೆತ್ತಿದರ್ ಕೃಷ್ಣ ಭೀಮಾರ್ಜುನರಿಗಮಳ
ಮೌಕ್ತಿಕದ ಶಾಶಿಸೂಸಿ ॥
ಮಂದಸ್ಮಿತ ದೊಳವರನುಪಚರಿಸಿ ಬೀಳ್ಕೊಟ್ಟು ।
ಸಂದಣಿಯ ಪೌರಜನ ಪುರಜನರ ಸಹಿತ ನಲು ।
ವಿಂದಬಂದಾಸ್ಥಾನ ಮಂಟಪದೊಳಸುರಾರಿ
ಕುಳ್ಳಿರ್ದ ನುತ್ಸವದೊಳು ॥ ೯೦ ॥

ಶ್ರೀ ಕೃಷ್ಣನು ಧರ್ಮಜಗೆ ಸಕಲ ವೃತ್ತಾಂತ ಹೇಳ್ದ

ತದನಂತರ ದೊಳಾ ಮುರಾಂತಕಂ ಭೂಪಂಗೆ ।
ಮುಚದಿಂದ ಬಣ್ಣಿಸಿದ ತಾಂಪೋದ ಸಂಗತಿಯ ।

---

ಸೂತರ ಮೊಗಳ್ಕೆಯಂ=ಭಟ್ಟಂಗಿಯರ ಹೊಗಳುವಿಕೆಯಿಂದ.

ಪದುಳದಿಂ ನಡೆದುದಂ ಭೇರಿಗಳ ಬಡಿದುದಂ
ಕೋಟಿಯಂ ವೊಡೆದುಖಳನಾ ||
ಸದನವಂ ಪೊಕ್ಕುದಂ ಭೀಮನಿಂ ಮಾಗಧನ |
ಸದೆಬಡಿದುದಂ ಬಳಿಕಲವನ ಸುತ ಸಹದೇವ |
ಗೊದಗಿ ಪಟ್ಟಂ ಗಟ್ಟಿ ನೃಪರ ಸೆರೆಯಂ ಬಿಡಿಸಿ
ವಸ್ತುಸಹಿತೈತಂದುದಂ || ೯೧ ||

ಧರ್ಮಜನ ಸಕಲರಿಂದೊಡಗೂಡಿದ ಹರಿಗೆ ಭೋಜನಾದಿಯಿಂ
ಆರೋಗಿಸಿದ ಇತ್ಯಾದಿ

ಕೇಳಿ ನೃಪನುತ್ಸವದೊಳಚ್ಯುತನ ಮಹಿಮೆ ಗುಣ |
ಮಾಲೆಯಂ ಕೊಂಡಾಡುತಖಿಳ ಜನರಂ ಮನೆಗೆ |
ಬೀಳುಕೊಟ್ಟಾ ವಿವಿಧ ಭೋಜ್ಯದಿಂದಾರೋಗಿಸಿದ
ನಸುರಹರನಕೂಡೆ ||
ಶ್ರೀಲತಾಂಗೆಯ ಮನೋಹರ ವಿಠ್ಠಲಂ ವಿಪ್ರ |
ಜಾಲವಂಕರೆಸು ಸನ್ಮುಖಕೆಂದು ಕರುಣದಿಂ |
ಪೇಳಿ ಧರ್ಮಜಗಭಯ ಮಂಕೊಟ್ಟು ದ್ವಾರಕಾ
ವತಿಗೆ ಬಿಜಯಂ ಗೈದನು || ೯೨ ||

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ
ಶ್ರೀಮದನಂತನ ಕಥಾ ಪ್ರಸಂಗೆ ಸಂಧಿ ಅಭಿ
ಪ್ರಾಯಂ ಶ್ರೀ ಭೀಮಸೇನ ಜರಾಸಂಧ ಖಳ ಆಹವೇ
ಜರಾಸಂಧ ಸಂಹಾರವರ್ನ್ಣನ್ನಾಮ ತೃತಿಯೋ
ಧ್ಯಾಯಃ ಮಂಗಳಮಾಹ ||

ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ||

ಹರಿಃ ಓಂ

ಶ್ರೀ ವೇದವ್ಯಾಸಾಯ ನಮೋನಮಃ ಶ್ರೀ ಹನುಮ ಭೀಮಮ
ಧ್ವರಾಯಗುರುಭ್ಯೋನಮಃ। ಶ್ರೀಗುರುರಾಜೋವಿಜಯತೇ

## ಶ್ರೀ ಮನೋಹರ ವಿಠಲವಿರಚಿತ್ರ
## ಶ್ರೀ ಮದಾನಂತ ಚರಿತ್ರೆ ಚತುರ್ಥಸಂಧಿ
## ಪ್ರಾರಂಭ
### ಶ್ರೀರಾಗ.

**ಸಂಧಿ ಸೂಚನೆ**

ರಾಜೀವನೇತ್ರನ ಸಹಾಯದಿಂ ಧರ್ಮಜಂ ।
ರಾಜಸೂಯಧ್ವರವ ನಲೆಮುಗಿಸಿ ಸಕಲನೃಪ ।
ರಾಜಗಳನುಪಚರಿಸಿ ಬೀಳ್ಕೊಟ್ಟು ಸುಖದಿಂದ ।
ಸಾಮ್ರಾಜ್ಯಮಂ ಗೈದನು ॥

**ಪದನು**

ಶ್ರೀ ವೇದವ್ಯಾಸ ದೇವರ ಸ್ತೋತ್ರಂ

ಭೂಸುರರು ಗೌತಮುನ ಶಾಪದಿಂದ ಜ್ಞಾನ ।
ಸೂಸಿಶ್ರುತ್ಯಾರ್ಥಮಂ ತಿಳಿಯದಲೆ ಮಿಥ್ಯಮತ ।
ದಾಸರವನನು ಗೈದು ಮೂಢರಾಗಿರೆ ಜಗದಿ
ನತ್ಯವತಿ ಕುವರನೆನಿಸಿ ॥

ವ್ಯಾಸಾಭಿಧಾನದಿಂ ಭಾಗವತ ಭಾರತಿತಿ ।
ಹಾಸಗಳ ರಚಿಸಿ ತ್ರಿವಿಧರ ಗತಿಯ ಗಾಣಿಸಿದ ।
ವ್ಯಾಸರಾನಂತ ಪ್ರಕಾಶ ಬದರಿ ನಿವಾಸ ಶ್ರೀಶ
ಸರ್ವೇಶ ಸಲಹೋ ॥ ೧ ॥



*

ಶ್ರೀ ಮನೋಹರ ವಿಠಲ ವಿರಚಿತ

# ಶ್ರೀ ಅನಂತನ ಕಥಾ

## ೪ ನೇ ಸಂಧಿ

ಶ್ರೀ ಮಧ್ವಾನಂದ ತೀರ್ಥರ ಸ್ತೋತ್ರ

ತಾಮಸರ್ ಹರಿಹರರಿಗೈಕ್ಯಮಂ ಕಲ್ಪಿಸುತ ।
ಭೂಮಿಯೊಳ್ಕುಮತಗಳ ಸ್ಥಾಪಿಸುತ ಸಜ್ಜನರ ।
ಸ್ತೋಮಮಂ ಮತಿಗೆಡಿಸಿ ನಿಂದಿಸುತ ಸೊಕ್ಕಿರಲ್
ಮಧ್ವಾಭಿಧಾನದಿಂದ ॥
ಈ ಮಹಿಯೊಳವತರಿಸಿ ಸಿದ್ಧಾಂತ ಶಾಸ್ತ್ರದಿಂ
ಪಾಮರರ ಮದ ಮುರಿದು ಸರ್ವೇಶ ಸರ್ವಾತ್ಮ ।
ಶ್ರಿ ಮನೋಹರ ವಿಠಲನೆಂದರುಹಿ ಬುಧರ ರಕ್ಷಿಸಸಿದ ಗುರುರಾಯ
ಪೊರಿಯೊ ॥ ೨॥

ಶ್ರೀ ಗಣೇಶನ ಸ್ತುತಿ

ಕರಚತುಷ್ಟಯಲಿಂದ ಸುರ ನರೋರುಗದೈತ್ಯ ।
ನೆರವಿಗೊಲವಿಂದ ವರಗಳ ಕೊಟ್ಟು ರಕ್ಷಿಸುವ ।
ಕರುಣ ಸಾಗರ ಸಕಲ ವಿದ್ಯಾಧಿಕಾರಿ ದ್ವಾದಶ[೧] ಹೆಸರಿನಿಂದ ಜಗದಿ ॥
ಕರೆಸಿಕೊಳುತತಿಖ್ಯಾತನಾಗಿಹ್ಯನೆಂದು ತವ ।
ಚರಣಕೆರಗುತ್ತನಂತನ ಕಥೆಯ ಪೇಳ್ವೆ ಕರಿ ।
ಸಿರನೆ ದಯದಿಂದೆನ್ನ ಸಲಹುವದು ನಿರ್ವಿಘ್ನವಿತ್ತು ಸಾಕಾರಿಯಾಗಿ ॥೩॥

ಶೌನಕರ ಪ್ರಶ್ನೆ

ಎಲೆ ಮೌನಿ ಕೇಳ್ಪಥ ಶ್ರಮದಿಂದಲೊರ್ವ ದ್ವಿಜ ।
ಬಳಲಿ ಕ್ಷುದ್ಬಾಧೆಯಿಂ ದೈತರಲ್ಕಾತನಂ ।

---

೧ ಗಣೇಶನ ದ್ವಾದಶ ಹೆಸರು: ೧ ವಿನಾಯಕ ೨ ವಿಘ್ನರಾಜ ೩ ದ್ವೈಮಾತುರ ೪ ಗಣಾಧಿಪ ೫ ಏಕದಂತ ೬ ಹೇರಂಬ ೭ ಲಂಬೋದರ ೮ ಗಜಾನನ ೯ ಆಕಾಶಪತಿ ೧೦ ವಿಶ್ವೋಪಾಸಕ ೧೧ ವಕ್ರತುಂಡ ೧೨ ಶಂಕರಾತ್ಮಜ ಷಣ್ಮುಖನನುಜ ಇತ್ಯಾದಿ

ನೆಳಲಿಂಗೆ ತಂದು (ನೆಳಲಿಗೆಡೆತಂದು) ವೃಷ್ಟಾನ್ನ ಭೋಜನವಿತ್ತು
ಪರಿತೋಷಗೊಳಿಸಿದಂತೆ ॥

ಮಲಿನ ಮತಿಯೋಳ್ಭನ್ನಗೊಂಬ. ಭವಬದ್ಧರ್ಗೆ ।
ಜಲಜಾಂಬಕನ ಚಿತ್ರ ಚರಿತಾಮೃತವ ನೆರದೆ ।
ಸಲೆ ಧನ್ಯರಾವೆಂದು ಶೌನಕರ್ಕೈವಮುಗಿದು ಮುಂಗಥೆಯ
ಬೆಸಸೆಂದರು ॥ ೪ ॥

### ಸೂತರು ಪೇಳ್ದರಿಂತೆನೆ

ಕೇಳಿರೈ ಋಷಿ (ಮುನಿ) ಕುಲವೆ ಧರ್ಮಜಂ ವೃಷ್ಣಿಕುಲ ।
ವೆರೌಳಿಯಂ ದ್ವಾರಕಿಗೆ ಬಿಜಯಂಗೈಸಿ ಬಂಧು ।
ಜಾಲ ಸಹಿತನುಜರಿಂದೊಡಗೂಡಿ ಮಂದಿರವ ಸಾರ್ದು ವ್ಯಾಕುಲದಿ
ಬಳಿಕ ॥

ಆಲೋಚಿಸಿದ ಕೃಷ್ಣ ಮುನಿ ಧೌಮ್ಯ ಮುಖ್ಯ ಭೂ ।
ಪಾಲರೊಡನಾಗ ಬಿಸುಸುಯ್ದು ಮುಖದುದ್ಯೋಗ ।
ಪೇಳಿ ನಾರದನ್ಯಾಕೆ ಪೋದ ಭೂಭುಜ ವ್ರಜದ
ವಿಜಯುವೆಂತಾಹುದೆನತ ॥ ೫ ॥

### ಧರ್ಮರಾಜನ ಚಿಂತೆ

ಮಣಿವರಲ್ಲರಸುಗಳ್ ಯಜ್ಞವ ನೆಗಳಿದಲೆ ।
ಮಣಿದೆನಾದಡೆ ಬಿಡದೆ ದುಷ್ಕೀರ್ತಿವಧು ಪೋಗಿ ।
ಮಣಿ (ಕುಣಿ) ವಳ್ಳೆ ತ್ರೈಲೋಕ್ಯ ಜನದ ಜಿಂಹ್ವಾರಂಗ ಮಧ್ಯದೋಳ್
ನಮ್ಮ ಜರಿದು ॥

ಭಣುಗುಗಳ್ ಪಾಂಡುಸುತರೆಂದು ಸ್ವರ್ಗಾಲಯದ ।
ಗಣಿಕೆಯರ್ ಹಾಸ್ಯಮಂ ನಗದಿಹರೆ ಕುರುರಾಯ ।

---

ದುಷ್ಕೀರ್ತಿವಧು=ಅಪಯಶಸ್ಸವೆಂಬ ಸ್ತ್ರೀ ಕಣೆ=ಕೋಲು. ಭಣುಗು
ಗಳು=ಕೀಳರು, ಕೆಟ್ಟ. ಗಣಿಕೆಯರ್=ವೇಶ್ಯಾಸ್ತ್ರಿ. ಅಲಿಗಳ=ಕಣ್ಣುಗಳು; ಅಣಕ=ಹಾಸ್ಯ
ಚೋದ್ಯ. ಮನ್ನೆಯರ್=ದುರಾಭಿಮಾನ, ಮುಖ್ಯ ನಾಯಕರು. ಸ್ಮರನನೀಲೋತ್ಪ
ಲಂಬುಜದ ಕಣೆಗಳೇ=ಕಾಮನಬಾಣ ಕಮಲದೇಟುಗಳೇ ಕುಜ=ಕಿರಾತನೆ ಅಚಲ
ದ ಮರ. ನಾರಿ ನಿರ್ಗುಣೆಯೆ=ಸುಕೀರ್ತಿ ಎಂಬ ಸ್ತ್ರೀ ಗುಣರಹಿತಳೇ

ನಣಕವಾಡನೆ ಮಹಾ ದುರ್ಲಭದ ಕಾರ್ಯವಿಂದೆನಗೆ
ಸಮನಿಸಿತೆಂದನು ॥ ೬ ॥

ಸಮರ್ಥ ಪಾರ್ಥನ ಧೀರ ಉತ್ತರ

ಆಲಿಸಿದ ನಿನಿತೆಲ್ಲಮಂ ಪಾರ್ಥ ಘುಡಿ ಘುಡಿಸು
ತಾಲಿಗಳ ಕೆಂಪೇರಲೆದ್ದು ಕೈಮುಗಿದು ಭೂ।
ಪಾಲ ಚಿತ್ತೈಸೇನು ಘನವೆಂದ ಚಿಂತಿಸುತಲಸುಮಾನಿಸುವೆ ಮನದೊಳು॥
ಶ್ರೀಲೋಲನಂ ಬಿಡದೆ ನೆನವರ್ಗೆ ಸಕಲ ಸುಖ।
ಜಾಲ ಕೈಗೂಡುವದು ನಿಶ್ಚಯಂ ಸತತ ನ।
ವ್ಯಾಲಯದೊಳಾ ಕೃಷ್ಣ ಪ್ರತ್ಯಕ್ಷವಾಗಿರಲಸಾಧ್ಯವೇ
ನಮಗೆಂದನು ॥ ೭ ॥

ಮಣಿಯರೇ ಭುವನದೋಳ್ ಮನ್ನೆಯರ್ ಗಡ ನಾಕ।
ಗಣಿಕೆಯರ್ ಹಾಸ್ಯದಿಂ ನಗುವರೆ ಗಡ ಜರಿವು।
ತಣಕವಾಡುವನೆ ದುರ್ಯೋಧನಂ ದುಷ್ಕೀರ್ತಿ ತರುಣಿಜನ ಜಿಹ್ವೆಯೆಲ್ಲಿ॥
ಕುಣಿವಳೇ ಗಡ ದಿವ್ಯ ಗಾಂಡೀವ ಧನು ಕಬ್ಬು।
ಗಣಿಗಳೇ ಗಡ ಸ್ಮರನ ಸೀಲೋತ್ಪಲಂಬುಜ।
ಕಣಿಗಳೇಗಡ ನಾರಿ ನಿರ್ಗುಣಿಯೆ ನಾನರನೆ ಕುಜವೆಂದನಾ
ವಿಜಯನು ॥ ೮ ॥

ಬರಿದೆ ಚಿಂತಿಪದ್ಯಾಕೆ ಸಕಲ ದ್ವೀಪಾಧಿಪರ।
ಮುರಿದು ಕಪ್ಪವಗೊಂಡು ಬಾಹೆನಾ ನೀಕ್ಷಣದೊ।
ಳರಸು ಕೊಡು ವೀಳ್ಯಯುವ ದೀಕ್ಷೆಯಂ ತೊಡು ತೀವ್ರ ಭೂಸುರರ ಕರೆ
ಸುಮುಖಕೆ ॥
ಧರಿಸದಿರ್ ಸಂದೇಹವೆನೆ ಪಾರ್ಥ ನಿರ್ಭೀತ।
ಧುರ ಪರಾಕ್ರಮಿ ನುಡಿದವೋಘವಚ ಸಿದ್ಧಿಪುದು।
ಧರಣೀಂದ್ರ ದಿಗ್ವಿಜಯಕನುಜರಂ ಕಳುಹೆಂದನಾ ವ್ಯಾಸ ಮೌನಿ
ಬಳಿಕ ॥ ೯ ॥

ನೆರಹಿ ಬಲನಿವಹಂ ಮೂರೊಂದು ದೆಶೆಗಳಿಗೆ।
ಮರುತ ಸುತ ಸಹದೇವ ನಕುಲ ಫಲ್ಗುಣರೊಡನೆ।

ಪರಸಿ ಮನ್ನಿಸುತ ಧರ್ಮಾತ್ಮಜಂ ಕಳುಹಿದಂ ನಾಲ್ವರನು
ದಿಗ್ವಿಜಯಕೆ ||

ಶ್ರೀ ಭೀಮನ ಪೂರ್ವ ದಿಗ್ವಿಜಯ

ಪರಮ ಶುಭಲಗ್ನದೊಳ್ ಜಯ ಜಯದ ಧ್ವನಿಗಳಿಂ |
ತರುಣಿಯರ್ ಬೆಳಗುವಾರುತಿಯ ಸಂದೋಹದಿಂ |
ಪೊರಮಟ್ಟರಾ ಹರಿಪ್ರಸ್ಥ ಪುರವರವ ಸಂತೋಷದ ಸಗಾಢದಿಂದ ||೧೦||
ಸಾಗಿದಂ ಕೆಲ ಸೈನ್ಯದೊಡನೆ ಭೀಮಂ ಪೂರ್ವ |
ಭಾಗದೊಳ್ ಶಿಶುಪಾಲ ದಂತವಕ್ತ್ರಾವನಿಪ |
ಸಾಗರ ನಿವಾಸ ಖಳಸಂತತಿಯ ಜೈಸಿ ಪೌಂಡ್ರಕ ವಾಸುದೇವ
ನೃಪನಾ ||
ಬಾಗಿಸುತ್ತಾ ಶ್ರೋಣಿವಂತ ಕಾಶೀಭೂಪ |
ನಾಗಯ ಕಳಿಂಗ ಗೋಪಾಲ ಕೌಶಲಧೀಶ |
ನಾಗೇಂದ್ರ ಸೇನ ಭಟರಂ ಗೆಲ್ದತುಳ ಕಪ್ಪಮಂ ತಂದ
ನಿಜ ನಗರಕೆ || ೧೧ ||

ಪಾರ್ಥನ ಉತ್ತರ ದಿಗ್ವಿಜಯ

ಬಡಗ ದಿಕ್ಕಿಗೆ ವಿಜಯ ಪೋಗಿ ಕಟಿ ದೇವನಂ |
ಬಡಿದು ಪ್ರತಿವಿಂಧ್ಯ ಭಗದತ್ತ ಚಿತ್ರಾಯುಧರ |
ತಡದು ಸಾಲ್ವನರೋಚಮಾನ ಬ್ರುಹಂಕರಂ ಸಾಮಗಿರಿ
ಹಿಮಗಿರಿಗಳ ||
ಪೋಡವೀಶರಂ ಜೈಸಿ ಜಿನ ಭೋ (ಭೋ) ಟ ಕರ ನಂ |
ಪಿಡಿದು ನವಖಂಡ ದ್ವೀಪಾಧಿಪ ತ್ರಿಗರ್ತರಂ |
ನಡುಗಿಸಿ ಸಮುದ್ರ ಹರಿಮಯ ಕ್ಷಿತಿಯ ಗೆದ್ದಮಿತ ಧನಮಂ
ತಂದ ಹರಿ ಪ್ರಸ್ಥಕೆ || ೧೨ ||

ನಕುಲನ ಪಶ್ಚಿಮ ದಿಗ್ವಿಜಯ

ನಕುಲ ಪಶ್ಚಿಮ ಭೂಮಿಗೈತಂದು ಗರ್ವಿಸಿದ |
ಸಕಲ ದೇಶಾಧಿಪರ ಮುರಿದು ಚಾರಣರ ಹೇ |

ಮಕರಾಯ ಬರ್ಬರದ (ಜೇಪಳದ) ನೇಪಾಳ ಧರಿಣಿವರ ಸದದು-
ಹೊಯ್ದೋಳದೊರಗಿಸಿ ||
ಯುಕುತಿಯೊೞ್ ರೋಹಿತಕ ನೈರಿಭಕ ಭೂಭುಜರ |
ನಿಕರವಂ ಧೃತಿಗೆಡಿಸಿ ಶಲ್ಯನಂ ಕಂಡಮಿತ |
ಶಕಟಪೂರಿತ ರತ್ನ ಕನಕ ಗಜ ಹಯರಥವ ಕೊಂಡೊದಗಿದ
ರಸನೆಡೆಗೆ || ೧೩ ||

ಸಹದೇವನ ದಕ್ಷಿಣ ದಿಗ್ವಿಜಯು

ತೆರಳಿ ಸಹದೇವ ದಕ್ಷಣಕೆ ಭೀಷ್ಮಕಪಾಂಡ್ಯ |
ಧರಣಿಪಾಗ್ರಣಿ (ಕುಂಭಕ ಬಂಧಕರೆಂಬೋ) ಕುಂತಿ ಭೋಜರಂಧಕ
ರೆಂಬೊ |
ದುರುಳ ಕುಂತಳಧೀಶ ವಿಂದ್ಯಾನುವಿಂದ್ಯ ವೃಷಶೇನಾದಿ
ಭೂಪಾಲರ ||
ಧುರದೊಳೋಡಿಸುತ ಮಾಹಿಷ್ಮತಿಯ ಪಟ್ಟಣವ |
ಪೊರೆವ ನೀಲಧ್ವಜನಗೆಲ್ದು ಮಾರಾಂತವರ |
ಜರಿದಿರಿದು ಯುಗೊಳಿಸಿ ಚೋಳ ಕೇರಳದವರ ಆಕ್ರಮಿಸಿ ಮುಂದೆ
ನಡದು || ೧೪ ||

ಘಟೋತ್ಕಚನ ಲಂಕಾ ವಿಜಯು

ಕರಿಸುತ ಘಟೋತ್ಕಚನ ಲಂಕಾನಗರಕಟ್ಟಿ |
ತರಿಸಿ ಬಹುವಿಧ ವಸ್ತುವಂ ವಿಭೀಷಣನಿಂದ |
ಶರಧಿ ತಟದೊೞ್ ಸೇತುವಾನ ಕೆಲದಿನಮಿರ್ದು ಕರ್ನಾಟ
ಕವನು ಜೈಸಿ ||
ಕರಿರಥಾವಳಿ ತುರಗವಪರಿಮಿತ ಗೋವೃಷಭ |
ಪರಿಪರಿಯ ರತ್ನಭೂಷಣ ವಸನ ಹೇಮ ಮೃಗ |
ಸುರಭಿ ನಾನಾವಿಧದ ವಸ್ತುವೆಲ್ಲವ ಕೊಂಡು ಬಂದ ನಿಂದ್ರಪ್ರ
ಸ್ಥಕೆ || ೧೫ ||

ಧನ ಸಂಚಯ ಪರಿಮಿತಿ

ಹತ್ತು ಯೋಜನ ಗದಲ ದ್ರವ್ಯ ನಕುಲಂ ತಂದಿ |

ಪತ್ತುವಾಸಹದೇವ ಒದಗಿಸುತ ತಂದ ಮೂ।
ವತ್ತು ಗಾವುದ ದಗಲ ನೂರು ಯೋಜನದಳತೆ ಧನವ ಭೀಮಂ
ತಂದನು ॥
ಉತ್ತುಮಾ ದ್ರವ್ಯನಾನೂರು ಯೋಜನದಳತಿ ( ದಗಲೆ )
ಉತ್ತರಾಜ್ಯ ( ರಾಸ್ಯ ) ವ ಗೆದ್ದು ತಂದನಾ ಪಾರ್ಥ ಮುನಿ ।
ಪೋತ್ತಮರೆ ಕೇಳೊಂದು ವರುಷ ಬಹುದೇಶಗಳನಾಕ್ರಮಿಸಿ
ಸಂಪಾದಿಸಿ ॥ ೧೬ ॥
ಬುಧರರಿಯ ಬ್ಯಾಡಿ ಭೀಮನಕಿಂದ ಧನಬಹಳ ।
ಒದಗಿಸಿದ ನರನೆ ಸಮರ್ಥ ನಾಲ್ವರೂಳೆಂದು ।
ನದದು ತಂದಂವಷ್ಟು ವಲ್ಪದಿನ ದೋಳ್ಪವನ ಸುತ ಪೂರ್ವದಿಗ್ಭಾಪರಾ॥
ಅದುಭುತ ಪರಾಕ್ರಮಿ ವೃಕೋದರಂ ಗೀಜಗದೊ ।
ಳದಿರುಂಟಿ ವಿಕ್ರಮದೊಳೀವೆಳ್ಳೆ ಕನಕಮಣಿ ।
ವಿಧವಿಧದ ದ್ರವ್ಯಗಳಿಂದ ಪೂರಿತವಾಗಿ ಹರಿಪ್ರಸ್ತ ಶೋಭಿಸಿದದು ॥೧೭॥
ಎರಡಾರು ಯೋಜನದ ವಿಸ್ತೀರ್ಣದಿಂದೆಸೆವ ।
ಹರಿಪ್ರಸ್ತ ಪುರವರಂ ವಿಶ್ವಕರ್ಮಕನೆಂಬೊ ।
ಸುರತಕ್ಷನಿಂದ ಬಹುಕುಶಲತ್ವದಿಂದ ನಿರ್ಮಿತವಾದ ದೆಶೆಯಿಂದಲಿ ॥
ಮರುತತನಯಾದಿಗಳ್ ದಿಗ್ವಿಜಯುವಂಮಾಡಿ ।
ವರಕನಕ ರಾಗಶಿ ತಂದಿನಿತು ವಳಕೊಂಡಿ ।
ತರಸುಗಳ ಪೌಳಿ ಧರ್ಮಾತ್ಮಜನ ಭಾಗ್ಯ್ಯವುಂ
ಬಣ್ಣಿಸುವರುಂಟಿ ಬಳಿಕ ॥೧೮॥

ನಮಿಸಿ ಭೀಮಾರ್ಜುನರ ಪ್ರಾರ್ಥನೆ

ಯಮತನಯನಂ ಕಾಣುತೆಮಳ ಭೀಮಾರ್ಜುನರ್ ।
ನಮಿಸಿ ಪದ ಯುಗ್ಮದಲಿ ತಂದಖಿಳ ವಸ್ತುಗಳ ।
ನಮರಗಿರಿಯಂತೆ ರಾಸಿಯನೆರೆದು ಕೈಮುಗಿದು
ಜೀಯ್ಯಚಿತ್ತೈನು ತೀವ್ರ ॥
ಕಮಲೋದರನ ಕರೆಸು ಮಖ ಶಾಲೆಯಂರಚಿಸು ।
ಸುಮತಿ ಮುನಿಸಂಕುಲವನೆರಹು ಭೂಪಾಲರಂ !

ಕ್ರಮದಿ ಬರುವಂತೆ ವಾಲಯು ಲಿಖಿಸಿ ದೂತರಂ
ಕಳುಹು ತಳುವ್ಯಾಕೆಂದರು ||೧೯||

ಅನುಜರಂ ಮನ್ನಿಸಿ ಮುಖಶಾಲೆ ನಿರ್ಮಿಸಲು ವಿಶ್ವಕರ್ಮನಿಗೆ ಆಜ್ಞೆ

ಅನುಜರಾಡಿದ ಮಾತಿಗಾಯುಧಿಷ್ಠರ ತೋಷ ।
ವನಧಿಯೊಳ್ಮುಳುಗಾಡಿ ತೆಗದಪ್ಪಿ ಕರುಣದಿಂ ।
ಘನಸ್ನೇಹ ಭಾವದಿಂದುಪಚರಿಸಿ ಮನ್ನಿಸುತ ಕುಳ್ಳಿರಿಸಿ
ಕೊಂಡು ಮುದಾ ||
ವಿನುತ ನಿರ್ಮಲಶಾಲೆ ನಿರ್ಮಿಸಲ್ಕಾ ಮಯನ ।
ಜನಪ ಬರವಾಡಿ ನೇಮವ ನೀಯಲಾತಕ್ಷ ।
ನನು ಮಾಗಿ ವಿರಚಿಸಿದ ಚಿತ್ರತರಕುಶಲದಿಂ ತ್ರೈಲೋಕ್ಯಕಿದು
ಪೊಸತೆನೆ ||೨೦||

ವಿಚಿತ್ರ ತರದ ಮುಖಶಾಲೆಯ ವರ್ಣನೆ

ಥಳಿಥಳಿಪ ಕುಲಿಶ ಸೌರಂಭದಿಂ ಸ್ತಂಭದಿಂ ।
ಪೊಳೆ ಪೊಳೆವ ಮಾಣಿಕದ ಗುಂಪಿನಿಂ ಕೆಂಪಿನಿಂ ।
ಜ್ವಲಜ್ವಲಿಪ ಭಿತ್ತಿಗಳ ಪ್ರಭೆಗಳಿಂ ಸಭೆಗಳಿಂ ವೈಡೂರ್ಯ
ಲೋವಿಯಿಂದ ||
ಝುಳಝುಳಿಪ ದರ್ಪಣದ ವೃಂದದಿಂ ಛಂದದಿಂ ।
ಸುಳಿಸುಳಿವ ಬೊಂಬೆಗಳ ಕಾಯದಿಂ ಮಾಯದಿಂ ।
ಶಳಿಶಳಿವ ಸೂತ್ರದಿಂ ಕಾಲಾಟದಿಂ ನೋಟದಿಂ ಕೃತುಶಾಲೆ
ಕಣ್ಗೆಸೆದದು || ೨೧ ||
ಮರಕತಂಗಳ ಜಗುಲಿ ಪುಷ್ಯರಾಗದ ತೊಲೆಯು ।
ಮಿರುಪ ಗೋಮೇಧಿಕದ ನೆಲಕಟ್ಟು ಬೋದಿಗೆಯು ।
ಧರಧರಕೆ ಮುಂದುಲಿವ ಮುತ್ತುಗಳ ಸೂಸಕಂ ಮದನಕೈನವರತ್ನದ ||
ಕಿರುಣದಿಂದೆಸೆವ ನೀವಾನ ವಜ್ರದ ದ್ವಾರ ।

---

**ಸೌರಂಭ = ಸಂಭ್ರಮ** ಭಿತ್ತಿ = ಗೋಡೆ- ವಿಹಂಗ = ಪಕ್ಷಿ. **ಎಣೆವಕ್ಕಿ=ಚಕ್ರವಾಕ ಜೋಡುಹಕ್ಕಿ** ಶರಭ = ಎಂಟುಕಾಲಿನ ಪಕ್ಷಿ ಶಶ = ಮೊಲ ಭೇರುಂಡ = **ಎರಡು ತಲೆಯ ಪಕ್ಷಿ** ಭೃಂಗಾಚ=ಒಂದು ಜಾತಿ ಪಕ್ಷಿ. ಕುಲಿಶ = ವಜ್ರ

ಹರಿ ನೀಲಮಣಿ ಖಚಿತ ನೆಲಪೊನ್ನ ಪೊದಿಕೆ ಸೌಂ।
ದರ ಪವಳನವ ಮಕರ ತೋರಣದ ಚಲ್ವಿನಿಂ ರಂಜಿಸಿದು-
ದಾಮಂಟಪಾ ॥ ೨೨ ॥

ಮೊಗ ಮುರಿವ ಬಾಯ್ದೆರೆವ ಮುಕುರಮಂ ತೋರಿ ನಸು।
ನಗುವ ತಿಲುಕವನಿಡುವ ಕುಂತಳವ ಬಾಚಿಮುಡಿ।
ಬಿಗಿವ ಕಜ್ಜಲ ಬರೆವ ನರ್ತಿಸುವ ಸ್ವರಗೈವ ನುಡಿವಸರಸವನಾಡುವ ॥
ಬಗೆ ಬಗೆಯ ವೀಣಾದಿ ವಾದ್ಯಮಂ ಬಾಜಿಸುವ।
ಸೊಗಸಿಂನಂದಭಿನವವ ಪ್ರಕಟಿಸುವ ಕರಗಳಂ।
ಮುಗಿವ ಮಲಗುವ ನಗುವ ಪುಥ್ಥಳಿಗಳೊಪ್ಪಿದವು
ಸಜ್ಜೀವದೋಳ್ ಸಭೆಯೊಳು ॥ ೨೩ ॥

ಗಜ ಹಯ ಕುರಂಗ ಗೋ ಸಿಖಿ ಸಿಂಗ ಸಾರಂಗ।
ಭುಜಗಂಚೆ ಪಿಕ ಶುಕ ಕೆಣೆವಕ್ಕಿ ವೃಕ।
ವ್ರಜಸೂಕರ ವ್ಯಾಘ್ರ ಶರಭ ಶಶ ಭೇರುಂಡ ಭೃಂಗಾಜ (ಳ)
ಮರಿವಿಹಂಗ ॥

ಕುಜಕುಮುದ ಕಮಲಲತೆ ರಥ ಪುರುಷ ಸ್ತ್ರೀಯರಂ।
ಬುಜಭವನ ಸೃಷ್ಟಿಯೋಳುಳ್ಳಖಿಳ ವಸ್ತುವಿನ।
ನಿಜಚೇತನರ ತೆರದೊಳತಿ ಚಿತ್ರವೆಸದಿರಲ್ ರಾಜಿ
ಸಿತು ಸಭೆಪ್ರಭೆಯಲಿ ॥ ೨೪ ॥

ಶಶಿಕಾಂತ ಮಣಿಗಳಿಂದೆಸವ ಸೋಪಾನದಿಂ।
ದೆಸೆದಿಶಿಗೆ ಬೀರ್ವ ಪರಿಮಳದ ಪೂಂದಾವರೆಯ।
ಕುಸುಮೋಪ ಚಯದಿ ಝುಷಕುಲದಿಂದ ಶೋಭಿಸುವ
ಕಾಸಾರ ವಿಥೀಯಿಂದ ॥

ಲಸದಮಳರತ್ನ ತೆತ್ತಿಸಿದ ಬಾಗಿಲ್‌ಗಳಿಂ।
ಮಿಸುಪನೀಲದ ತೇಜಪುಂಜದಿಂ ರಂಜಿಸುವ।
ಪೊಸತಾದ ಪರಿಪರಿಯ ಶಾಲೆಗಳ ವಿಸ್ತರದ ಚಲ್ವಿಕೆಯ
ಪೊಗಳಲರಿದು ॥ ೨೫ ॥

ಆವಲ್ಲಿ ಜಲವಿರಲು ತೋರುವದು ನೆಲವು ಮ!

ತ್ತಾವಲ್ಲಿ ನೆಲವಿರಲು ತೋರುವದು ಜಲಗಳಿಂ ।
ಸ್ನಾವಲ್ಲಿ ಯೋರ್ವನಿರೆ ಕಾಣ್ಬಹುದುಜನದಂತೆ ರತ್ನಗಳ ಲಹರಿಯಿಂದ ॥
ಆವಲ್ಲಿ ಅ (ಯ) ಣುರೂಪ ತೋರ್ವದು ಮಹತ್ತಾಗು ।
ತ್ತಾವಲ್ಲಿ ಕೆಂಪು ಮೊದಲಾದ ಬಣ್ಣಗಳೆ ।
ಲ್ಲಾವಲ್ಲಿ ವಿಪರೀತ ತೋರಿ ಭ್ರಮೆಗೊಳಿಸುವವು ಮಯನ
ಚಮತ್ಕಾರಮೆಂತೊ ॥ ೨೬ ॥

ಎನ್ನಂಗಸಂಗಮಂ ಬಿಟ್ಟು ಪೋದಾಕ್ಷಣದಿ ।
ಬನ್ನಗೊಂಬುವಕಿಂತ ಚಿಂತೆ ಬ್ಯಾಡೈ ಜಗದಿ ।
ನಿನ್ನಲಿಖಿ ಪುತ್ತಿಮುದ ಮೇಲೆ ಮೂಲೋಕದರ ಸುಗಳ್
ಶಿರದೊಳಿಟ್ಟು ॥
ಮನ್ನಿಪದಲಂಕಾರಮಂ ಮಾಡೆ ಬಹು ಶೋಭ ।
ನಿನ್ನು ಸಂಶಯ ವ್ಯಾತಕೆಂದಂಬುಧಿಗೆ ಪೇಳಿ ।
ರತ್ನಂಗಳೆಲ್ಲ ಧರ್ಮಜನ ಮುಖಶಾಲೆ ಗೈತಂದು
ಪ್ರಭೆಯೋಳ್ಮೆರದದು ॥ ೨೭ ॥

ಕುಲಿಸೇಂದು ಮೌಕ್ತಿಕದ ತಾರಾಗಣದ ನಹಿತ ।
ಸಲೆ ಮಾಣಿಕದ ರವಿಯು (ಲವಿಯು) ಪವಳಸ್ತುರಾಗದಿಂ ।
ದಿಳಗೀರ್ವರ್ಗೈತಂದು ನೀಲ ಕತ್ತಲೆಯೊಡನೆ ಧರ್ಮಜನ ಸಿರಿ ನೋಡಲು॥
ಇಳಿದಿರ್ದಪರೊ ಸಭೆಯೊಳೆಂಬಂತೆ ವಿವಿಧಮಣಿ ।
ಹಲವು ತೇಜಗಳಿಂದ ಪ್ರಜ್ವಲಿವ ಮಂಟಪಂ ।
ಪೊಳೆಯೆನೃಪನಾರ್ಜಿತದ ಪುಣ್ಯನಿಧಿ ತಾನೆನಲ್ ರಂಜಿಸಿತು
ಮನೊಹರದಲಿ ॥ ೨೮ ॥

### ಮಯನಿಗೆ ಮರ್ಯಾದೆಮಾಡಿ ಶ್ರೀಕೃಷ್ಣನ ಕರಿಸುವಿಕೆ

ಇಂತೆಸೆವ ಮುಖಶಾಲೆಯಂ ನೋಡಿ ಧರ್ಮಜಂ ।
ಸಂತೋಷಮಂತಾಳ್ದು ಮಯಗುಚಿತಮಂಕೊಟ್ಟು ।
ಕಂತುಪಿತನಡಿಗೆ ಬಿನ್ನಪದ ವಾಲೆಯು ಬರೆದು ಪಾರ್ಥನಂ
ಕರೆದು ಹರಿಯಾ ॥
ಅಂತರಂಗವನರಿದು ಬಿಜಯಮಂ ಗೈತಾಹು ।

ದಂತ್ತರಾತ್ಮಕನ ಶೀಘ್ರದೊಳೆನಲ್ ಘಾಳಿ ಜವ ।
ದಂತೆ ಕಾಣಿಸುವ ಮಣಿರಥಮೇರ್ದು ದ್ವಾರಕಿಗೆ
ಬಂದಚ್ಯುತನ ಕಂಡನು ॥ ೨೯ ॥

ಪಾರ್ಥನ ಶ್ರೀಕೃಷ್ಣಗೆ ಬಿನ್ನಹ

ದೇವಚಿತ್ತೈಸು ತವ ಕರುಣಾಕಟಾಕ್ಷದಿಂ ।
ಭೂವಲಯಮುಂ ಜೈಸುತಸುತ ಘನವಂಕೊಂಡು ।
ನಾವೆಲ್ಲರೈತರಲ್ ಭೂಪನೆನ್ನಂಕಳುಹೆ ತ್ವತ್ಪದಾಬ್ಜವನಾರ್ದೆನು ॥
ನೀವೆಬಲ್ಲಿರಿ ಮುಂದಿನಾಲೋಚನೆಯು ಸರ್ವ ।
ಭಾವಜ್ಞರಿರಲೆಮಗೆ ಸ್ವಾತಂತ್ರ್ಯವಾಕೆನಲ್ ।
ಶ್ರೀವರಂ ಸತಿಯರಿಂದೊಡಗೂಡಿ ನರನೊಡನೆ ಹರಿಪ್ರಸ್ಥ
ಕೈತಂದರೂ ॥ ೩೦ ॥

ಶ್ರೀಕೃಷ್ಣನ ಸನ್ಮಾನ

ಯದುಕುಲ ಶಿರೋಮಣಿಯಕಂಡು ಧರ್ಮಜಯುಗ್ಮ ।
ಪದಕೆರಗಿ ಕೈಮುಗಿದು ನುತಿಗೈದು ವಿನಯದಿಂ ।
ಸದಮಲ ಚರಿತ್ರ ನಿನ್ನಯ ಮಹಿಮೆ ಶ್ರುತಿತತಿಗಳರಸಿ
ಕಾಣವು ಜಗದೊಳು ॥
ಇದು ಚೋದ್ಯಮುಂಕಂಡೆ ನೆಲೆದೇವ–ನಮ್ಮಲ್ಲಿ ।
ಗೊದಗಿದೈ ಸಲಹಲ್ಕೆ ಧನ್ಯರಾವೆಂದೆನಲ್ ।
ಮುದದಿಂದ ಕಂಸಾರಿ ಬಿಗಿದಪ್ಪಿ ಕರಪಿಡಿದು ಸಭೆಗೆ
ಬಿಜಯಂಗೈದನು ॥ ೩೧ ॥

ಧರ್ಮಜನು ಮಖದೀಕ್ಷೆಯಂ ತಾಳ್ದುದು

ವ್ಯಾಸಕಂಡನು ಧೌಮ್ಯ ಮೊದಲಾದ ಮೌನಿಜನ
ವಾಸುದೇವಂಗೆರಗಿದರ್ ಭಕ್ತಿಪೂರ್ವದೋ ।
ಳೀಸು ಕಾಲದ ಪುಣ್ಯ ಕೈಗೂಡಿತೆಮಗೆಂದೆನುತ ನುತಿಸುತಿರೆ
ಬಳಿಕ ನೃಪತೀ ॥
ಭೂಸುರರ ನೇಮದಿಂ ಮಖದೀಕ್ಷೆಯಂ ತಾಳ್ದು ।
ದೇಶದೇಶದ ಸಕಲ ಜನಪರ್ಗೆ ಋಷಿಗಳಿಗೆ ।
ಲೇಸಾದ ಪತ್ರಗಳನಟ್ಟಿಗಜಪುರವರಕೆಕನುಲನಂ ಕಳುಹಿಸಿದನು ॥೩೨॥

ಶ್ರೀ ಭೀಮನಿಂದ ಪುರುಷಾಮೃಗ ತರುವಿಕೆ

ಬಳಿಕಧ್ವರದ ಕಾರ್ಯಮಂ ನಾಡನೆಲೆಗೊಳಿಸಿ ।
ಕಲಿ ಭೀಮನಿಂದ ಪುರುಷಾಮೃಗವ ಕರತರಿಸಿ ।
ಪೊಳೆವ ಯೂಪಸ್ತಂಭದೊಳ್ ಬಿಗಿಸಿ ಬಂಧುಗಳ ಕರಸಿ
ಮನ್ನಣೆಯೊಳಿರಿಸಿ ॥
ಕಳಸ ಕನ್ನಡಿ ಧ್ವಜಪತಾಕೆ ತೋರಣದಿಂದ ।
ಪೊಳಲನುರ ಸಿಂಗರಿಸಿ ವರಯಜ್ಞ ಶಾಲೆಯಂ ।
ಮಲಯಜ ಸುಗಂಧ ಮೃಗಮದ ಪುಣಗು ಸಾರಣೆಗಳಿಂ
ದಲಂಕೃತ ಮಾಡಲು ॥ ೩೩ ॥

ಮಖಕ್ಕೆ ಬಂದ ಮುನಿಗಳು

ವರವೆನೆಲೆ ಮುನಿಗಳಿರ್ಕೆ ರಾಜಸೂಯಾಧ್ವರಕೆ ।
ವರಮುನಿ ಸುಮಂತ ಜೈಗೀಷವ್ಯ ಜಾಬಾಲಿ ।
ಪರಶುಧರ ಕಶ್ಯಪ ವಶಿಷ್ಟ ವಿಶ್ವಾಮಿತ್ರ ದೀರ್ಘತಪ ಗಾರ್ಗ್ಯಕಂಕ ॥
ಸುರಮೌನಿ ಸತ್ಯತಪ ಶುಕ ಸನಕ ಶಾಂಡಿಲ್ಯ ।
ಮರುತ ಭಕ್ಷಕ ಸಸಿತ ಗೌತಮ ಭರದ್ವಾಜ ।
ಭರಿತಮತಿ ಬೃಹಸ್ಪತಿ ಕಣ್ವ ಮಾರ್ಕಂಡೇಯರೋಮರ್ಷ
ನಡೆತಂದರು ॥ ೩೪ ॥

ಆಗಮಿಸಿದ ರಾಜರು

ಚೋಳ ಸಿಂಹಳ ಪಾಂಡ್ಯ ಸವ್ವೀರ ಸೌರಾಷ್ಟ್ರ ।
ಗೌಳ ಕೌಶಲ ಮಗಧ ಕಾಂಬೋಜ ಕಾಶ್ಮೀರ ।
ಮಾಳವ ವಿದರ್ಭ ಬರ್ಬರ ದ್ರವಿಳ ಕಳಿಂಗ ನೇಪಾಳ
ಅಂಗ ( ಕಾಳಿಂಗ ) ವಂಗ ॥
ನೀಲ ಕುಂತಳ ಹೂಣ ಹಮ್ಮೀರ ಮಚ್ಛ ಮಲೆ ।
ಯಾಳ ಕೇರಳ ಕಾಮರೂಪ ಕೈಕೆಯ ವಾಂ ।
ಚಾಲ ಬ್ರಾವಿಡ ಶ್ರಂಜೆಯಾದಿ ದೇಶಾಧೀಪರ್ ಬಂದರು
ತ್ಸವದಿಮಖಕೆ ॥ ೩೫ ॥

---

ಪುರುಷಾಮೃಗ=ಯಜ್ಞಪಶು-ಮನುಷ್ಯ ಮುಖವುಳ್ಳ ಮೃಗ.
ಯೂಪಸ್ತಂಭ=ಯಜ್ಞದಲ್ಲಿ ಪಶು ಕಟ್ಟುವ ಜಯಸ್ತಂಭ.

ಭೂರಿ ಭೂರಿಶ್ರವಂ ಬಾಲ್ಹೀಕ ಭಗದತ್ತ ।
ವೀರ ಕೌಶಲ ಸೋಮದತ್ತ ಶಿಶುಪಾಲ ಖಳ ।
ಪೌರ ವಸುಶೇಣ ಭೀಷ್ಮಕಸಾಲ್ವ ಚಿತ್ರರಥ ದಂತವಕ್ತ್ರರ್ಕಳಿಂಗ ॥
ಸೂರಸೇನಾವನಿಪ ವಿಂದಾನುವಿಂದ್ಯ ನೃಪ ।
ಧೀರ ಕುಂತೀಭೋಜ ಭೀಮರಥ ಮಾದ್ರೀಶ ।
ಶೂರ ಲೋಹಿತ ನೇಕಲವ್ಯಾದಿ ಭೂಭುಜರ್ ನಡೆತಂದರಧ್ವರಕ್ಕೆ ॥೩೬॥
ಕೃಪ ಜಯದ್ರಥ ದ್ರೋಣ ಭೀಷ್ಮ ಸಂಜಯ ಶಕುನಿ ।
ತಪನಸುತ ದುರ್ಜಯಶ್ವತ್ಥಾಮ ದುಸ್ಕರಣ ।
ಕೃಪಣ ದುರ್ಮುಖ ಭಾನುದತ್ತ ದುಃಸ್ಸಹ ವಿದುರ
ದೀರ್ಘಭುಜ ದುಃಶಾಸನಾ ॥
ಕಪಟ ದುರ್ದರುಷ ಶ್ರುತವರ್ಮಕ ಯುಯುತ್ಸುಸುತ ।
ಚಪಳ ಲಕ್ಷಣ ವಿಕರ್ಣಾದಿಗಳ ಕೂಡಿಕೊಂ ।
ಡ ಪರಿಮಿತ ಸೈನ್ಯ ಸಮಸಪ್ತಕರ ಬಲದೊಡನೆ
ದುರ್ಯೋಧನಂ ಬಂದನು ॥

ಯಜ್ಞಕ್ಕೆ ಇತರ ಜನರಾಗಮನ

ಮಧುರೋಕ್ತಿನುಡಿವ ಮಾಗಧ ಸೂತಬಂದಿಗಳ್ ।
ವಿಧವಿಧದ ಕವಿಗಮಕಿ ನಾಯಕರ್ ನರ್ತನದ !
ವಿಧು ವದನ ದಪ್ಸರಾಂಗನೆಯರಾ ಶಿಲ್ಪಿಗರ್ ವೈಶ್ಯ ಶೂದ್ರಾದಿಜನರು ॥
ಅಧಿಕ ಭುಜಬಲವುಳ್ಳ ಜಟ್ಟಿಗಳ್ ಪಂಗುಗಳ್ ।
ಬಧಿರಾಂಧ ಮೂಕ ಗಾರುಡ ವೇಷಧಾರಿಗಳ್ ।
ಕುಧರ ವಚನರರಖಿಳ ಜ್ಯಾತಿಯಾಚಕರೆಲ್ಲ ನೆರದುದಿಂದ್ರ ಪ್ರಸ್ಥಕೆ ॥೩೮॥

ಧರ್ಮರಾಜನ ಯಜ್ಞಶಾಲೆ ಪ್ರವೇಶ

ಬಂದಮಿತ ಭೂಪಾಲ ಖುಷಿಕುಲವನು ಪಚರಿಸಿ ।
ತಂದು ಪಟ್ಟಣದೊಳಗೆ ಬಳಿಕ ಪರಿ ಗೊಂದೊಂದು
ಮಂದಿರವ ನೆಲೆಗೊಳಿಸಿ ವೈಶಾಖ ಶುದ್ಧ ಚತುರ್ದಶಿಯ
ಶುಭದಿನದೊಳು ॥
ಮಿಂದು ದ್ವಿಜರಾಜ್ಞೆಯಂ ದಿವ್ಯಂಬರವನುಡುತ ।

ನಂದು ನವನೀತ ಲಿಪ್ತಾಂಗನಿಂ ಹಸ್ತಾಗ್ರ ।
ದಿಂದೆಸೆವ ಸಾರಂಗ ಶೃಂಗ ಕೃಷ್ಣಾಂಜನದೊಳರಸ
ದಿಕ್ಷೇಯತಾಳ್ದನು ॥ ೩೯ ॥
ವೇದ ಘೋಷಗಳಿಂದ ಶಮನಜಂ ಸತಿಯೊಡನೆ ।
ಸಾದರದೊಳೈತಂದು ಯೂಪಕುಂಡದ ಬಳಿಗೆ ।
ಬಾದರಾಯಣ ನಾಜ್ಞೆಯಿಂದ ತಿಲಸಮಿಧ ಕುಶಘೃತ
ತಂಡಿಲಗಳ ತರಿಸಿ ॥
ಮೋದದಿಂ ಋತ್ವಿಕರ ನೇಮದಿಂ ಮಖಕೆ ಬೇ ।
ಕಾದ ವಸ್ತುಗಳ ಜತೆಗೊಳಿಸಿ ವಿಧಿಪೂರ್ವಕದಿ ।
ಮೇದಿನೀಪತಿ ಧಾತೃ ಹೋತ್ರುಗಳ ಮುಖದಿಂದ
ಹೋಮಿಸಿದ ರಾಹುತಿಯನು ॥ ೪೦ ॥

ಧರ್ಮರಾಜನು ಆರಾರಿಗೆ ಆವ ಕೆಲಸ ನೇಮಿಸಲು ಭೀಷ್ಮಗೆ ಬಿನ್ನಹ

ಆಲಿಸೆಲೆ ಋಷಿಗಳಿರೆ ಮುಂದಿನ ಕಥಾಲಾಪ ।
ಕಾಲಜಂ ಭೀಷ್ಮನಡಿಗೆರಗಿ ಕೈಮುಗಿದುದಿಂದು ।
ಬಾಲಕರ್ ನಾವೈವರಧ್ವರಕ್ಕೈತಂದರಖಿಳ ದೇಶಾಧೀಶರು ॥
ಭೂಲೋಲರಂ ಮನ್ನಿಸುತ ಲೆಮ್ಮಮಾನವಂ ।
ಪಾಲಿಸುವ ಭಾರಮುಂ ನಿಮ್ಮದೈ ನಲೆ ಜಗದಿ ।
ಹೋಲುವವರುಂಟೆ ತಮ್ಮ ಗುಣ ವಿಕ್ರಮಕೆ ಜೀಯಾ ಸಾಗಿಸಿ
ಮುಖವೆಂದನು ॥ ೪೧ ॥
ಬರಿದೆ ಚಿಂತಿಗಳ್ಯಾಕೆ ಮಗನೆ ಭುವನಾವಳಿಯ ।
ಪೊರದಳಿವ ಕೃತು ಕರ್ತೃ ಭೋಕ್ತೃ ಶ್ರೀ ಕೃಷ್ಣ ನಿ ।
ಮ್ಮರಮನೆಯೊಳಿರೆ ದುರ್ಲಭದ ಪ್ರಯೋಜನವೇನು ಸ್ನೇಹ
ದಿಂದೆನಗಕೊಟ್ಟಾ ॥

ಭೀಷ್ಮರು ನೇಮಿಸಿದ ವಿವರ

ಹಿರಿಯತನಮುಂ ವೃಥಾ ಬಿಡಲ್ಯಾಕೆ ಲೇಸನುತ ।
ಸುರ ನದೀಸುತ ಯಾಗಮುಂ ಸಾಂಗ ಮಾಡಲಾ ।
ಗುರು ಧೌಮ್ಯ ಮತದೊಳೆಲ್ಲರ್ಗೆ ನೇಮಿಸಿದ ಕಜ್ಜಮಂ
ಕೇಳೆಂದನು ॥ ೪೨ ॥

ರಾಜ ನಿಕರವ ಋಷಿಗಳಂ ಕರೆಸಿ ಕುಳ್ಳಿರಿಸಿ ।
ಪೂಜೆಗೈವಧಿಕಾರ ಪಾರ್ಥಂಗೆ ಸರ್ವರನ ।
ಭೋಜನದೊಳಾದರಂ ಗೈವುದಾ ಸಹದೇವಗಖಿಳಪಕ್ವಾನ್ನರಸದಾ ॥
ಯಾಜಮಾನತ್ವ ಮರುತಾತ್ಮಜಗೆ ನಕುಲಂಗೆ ।
ರಾಜಿಸುವಗಂಧ ಮಾಲ್ಯಾ ಭರಣ ಕೊಡುವ ಪ್ರ ।
ಯೋಜನಂ ಮಣಿಹೇಮ ವಸನಧನದುದ್ಯೋಗ ಕುರುಪತಿಗೆ
ಹೇಳಿಸಿದನು ॥ ೪೩ ॥

ಧರಣಿ ಸುರರಿಗೆ ದಕ್ಷಣಗಳೀವ ವ್ಯಾಪಾರ ।
ಗುರುತನಯ ಗೀಪ್ಸಿತದ ದಾನಗಳ ಮಾಳ್ಪುದಂ ।
ತರಣಿ ಕುವರಂಗಾಯ್ತು ಭೂಸುರರನುಣ ಸ್ಯಣಿಸಿ ಕಳಹುವಣ
ಕೃಪಗಾದದು ॥

ನೆರದರಸರುಗಳ ಸೈನ್ಯದಾರೈಕೆ ಪಾಂಚಾಲ ।
ಕರಿಗಾದುದೆಲ್ಲರ್ಗೆ ತಾಂಬೂಲ ಪರಿಪರಯ ।
ಪರಿಮಳಗಳಿತ್ತು ಮನ್ನಿಸುವ ಸತ್ಕಾರ್ಯಮಂ ವಿದುರಗೆ
ನಿಯಾಮಿಸಿದನು ॥ ೪೪ ॥

ಸಕಲ ಜನ ವೈಶ್ಯ ಶೂದ್ರಾದಿ ಮಾಗಧ ಬಂದಿ ।
ನಿಕರದ ವಿಚಾರವ ವಿಶೋಕೆಂದ್ರ ಸೇನಾದಿ ।
ಪ್ರಕಟ ಪಾಂಡವರ ರಥ ಸೂತರ್ಗೆ ನೇಮಿಸಿದ
ನೇ ವೇಳ್ವಿನಾಕ್ಷಣದೊಳು ॥

ವಿಕಸಿತಾನನರಾಗಿ ನಿಖಿಲ ಭೂಪಾಲಕರ್ ।
ಮುಕುಟ ಭೂಷಣ ವಸ್ತ್ರದಿಂದಲಂಕೃತರಾಗು ।
ತಕಳಂಕ ಮಖಶಾಲೆಗೈತಂದು ಮಣಿಖಚಿತ ಸಿಂಹಾಸನ
ದೊಳಿಸೆದರು ॥ ೪೫ ॥

ಈ ಪರಿಯೋಳಾ ಭೀಷ್ಮನೆಲ್ಲರ್ಗೆ ಕಾರ್ಯವ ನಿ ।
ರೂಪಿಸಲ್ ಕಾಮುಖಂ ಮೆರೆದುದತಿ ವಿಭವದಿಂ ।
ಲೋಪವಂದಿಸಿತಿಲ್ಲದಖಿಳ ಸಾಮುಗ್ರಿಯಿಂ ಕೃಷ್ಣನೆಂಬ ಮರಧೇನು ॥
ಆ ಪಾಂಡವರ ಮನೆಯೊಳಿರೆ ಸಿರಿಯ ಕೊರತೇನು ।

ತಾಪತ್ರಯಂಗಳಿಲ್ಲದ ಧ್ವರಂ ಸಾಗಿದದು ।
ತಾಪಸೋತ್ತಮರಾದ ಶೌನಕರ ಕೇಳಿನ್ನು ಮುಂಗಥಾ
ಕೌತುಕವನು ॥ ೪೬ ॥

ಮಖಶಾಲೆಗೆ ಕೌರವನ ಆಗಮನ

ಅನುಜರಿಂದೊಡಗೂಡುತಾ ಸಮಯದೋಳ್ ಕುರುಪ ।
ಮನದೊಳರಿಗಳ ವಿಭವ ಸೈರಿಸದೆ ಮತ್ಸರವ ।
ನನುಸ (ಕ)ರಿಸಿಕೊಂಡಾಗ ಕಾಪಟ್ಯ ಸ್ನೇಹದಿಂದೆಜ್ಞಮಂಟಪಕೆ
ಬರಲು ॥

ಘನರತ್ನ ಲಹರಿಗಳ ಮುಸುಕೆ ಜಲ ನೆಲಗಳಂ ।
ತನಗೆ ತೋರದೆ ಭ್ರಾಂತಿಯಿಂದ ಕಂಚುಕವೆತ್ತಿ ।
ಮಿನುಗುವವಸಿಯಮೇಲೆ ನಡೆತರುತ ಸರಿಸಿಯೋಳ್
ಬಿರ್ದನವ ಮೂರ್ಖತೆಯೊಳು ॥೪೭॥

ಕುರುಪನ ಮಾನಭಂಗ

ನೆರದಿರ್ದ ಮುನಿವೃಂದ ದ್ರುಪದಾದಿ ಭೂಭುಜರ್ ।
ತರಳೆ ದ್ರೌಪದಿ ಸುಭದ್ರಾದಿಂದು ವದನೆಯರ್ ।
ಕರಹೊಯ್ದು ಘೋಳೆನುತ ಬಿರುನಗೆಗಳಿಂದ ಪರಿಹಾಸ
ವಂ ಮಾಡುತಿರಲು ॥

ಜರಿದ ಮಾನದೊಳಿದ್ದು ತಲೆವಾಗಿ ಕೌರವಂ ।
ಸರಿದು ಹಿಂದಕೆ ಜನ್ಮ ಧಿಕುಯೆನುತ ಪೋಗುತಿರೆ ।
ಶರಗು ವಿಡಿದಾಶಕುನಿ ಸಂತೈಸು ತಾಖಳನ ತಂದನಧ್ವರ
ಶಾಲೆಗೆ ॥೪೮॥

ನೀರಲ್ಲಿಬಿದ್ದ ಕೌರವಗೆ ಧರ್ಮನು ಬೇರೆ ವಸ್ತ್ರಗಳಿತ್ತನು
ನೊಂದು ಮನದೊಳು ಕೋಪದಿಂದುರಿವುತಾಗ ನಡೆ ।
ತಂದು ಕುಳ್ಳಿರುವ ಫಣಿಕೇತನಂಕಾಣು ತೆಮು ।
ನಂದನಂ ಸಂತೈಸು ತುದಕದೋಳ್ ತೋದವನ ವಸ್ತ್ರಂಗಳೆಲ್ಲ
ತೆಗಸಿ ॥

---

ಫಣಿಕೇತನ = ಹಾವೇಧ್ವಜ ಚಿನ್ಹನಾದ ದುರ್ಯೋಧನ.

ತಂದುಡಿಸಿದಂ ದಿವ್ಯ ದೇವಾಂಗಮಂ ನಗುವ ।
ಮಂದಿಗಳ ಕಳಕಳವ ಮಾಣಿಸುತ ಬಳಿಕಮುನಿ ।
ವೃಂದಗಳ ಶ್ರುತಿ ಘೋಷದಿಂದರಸ ನಾಹುತಿಯ ಹೋಮಿಸಿದ
ನುತ್ಸವದೊಳು ||೪೯||

ಯಜ್ಞಕಲಾಪ ಹೋಮ ವರ್ಣನೆ

ತಂಡಿಲಾಹುತಿದೂರ್ವ ತಿಲಸಮಿಧೆ ಘೃತಗಳಿಂ ।
ತಂಡತಂಡದೊಳಿರೆಯೆ ಮಂತ್ರಂಗಳಿಂದಗ್ನಿ ।
ಕುಂಡದುರಿ ಧೂಮಂಗಳೈದಿದವು ದಿವಿಲೋಕಕೇಳುದಿನ
ಪರಿಯಂತರ ||

ಕೊಂಡರು ಹವಿರ್ಭಾಗ ವಿಂದ್ರಾದಿಸುರರು ಕೈ ।
ಕೊಂಡು ಮುದದಿಂ ಭೂರಿ ದಕ್ಷಣೆ ಸುಭೋಜನವ ।
ನುಂಡುದಣಿದುದು ಮೌನಿ ನೃಪ ವೈಶ್ಯ ಶೂದ್ರಾದಿ ವಿವಿಧ
ಜಾತಿಗಳಜನರು ||೫೦||

ಶ್ರೀಹರಿ ಮೂರುರೂಪದಿಂದ ಧರ್ಮನ ಯಜ್ಞ ಸಾಂಗ ಮಾಡಿದನು

ವಾಸಿಷ್ಟ ಕೃಷ್ಣ ಯಾದವಕೃಷ್ಣ ಪರಶುಧರ ।
ವಾಸವಾದ್ಯಮರ ಮುನಿಗಳ್ ಬಂದು ಪ್ರತ್ಯಕ್ಷ ।
ವಾಸ ವಾಗಿರುತಿರ್ದು ಮಖಸಾಂಗಮಂಗೈಯೆ ಲೇಸೆನಿಸ
ದಿಹುದೆ ಜಗದಿ ||

ಈ ಸತ್ಯಸಂಧ ಧರ್ಮಜಗೆ ಸಮರಾದ ಭೂ ।
ಮೀಶರಂ ಭಾಗ್ಯದೋಳ್ ಕಾಣೆ ವೆಂದಾಸಕಲ !
ಭೂಸುರರ್ ತಮತಮಗೆ ಕೊಂಡಾಡುತತಿ ತೋಷದಿಂ
ನಲಿದ ರೇಳ್ವಿನು ||೫೧||

ಯಜ್ಞ ಶಾಲೆಯಲ್ಲಿ ವಿವಿಧ ಮಹೋತ್ಸವ

ವ್ಯಾಕರಣ ತರ್ಕಶ್ರುತಿ ಸ್ಮೃತಿ ಪುರಾಣಾದಿಗಳ ।
ಶ್ಲೋಕಾರ್ಥ ಯಾಜ್ಞೀಕ ಮಂತ್ರಗಳ ಬಣ್ಣಿಸುವ ।
ನೇಕನೇ ಹರಿದೈವ ಜಗಕೆಂದು ಸ್ಥಾಪಿಸುವ ಬುಧರ ರವ
ವಂದೆಡೆಯೊಳು ||

ಕೋಕನದ ನೇತ್ರೆಯರ ನರ್ತನದ ರಚನೆಗಳ ।
ನೇಕಸಂಗೀತಾದಿ ವಾದ್ಯಗಳ ಕಳಕಳಂ ।
ಭೂಕಾಂತ ವರ್ಗದೊಳ್-ರಾಜಿಸಿತು ಧರ್ಮಜನ ರಾಜಸೂ
ಯಾಧ್ವರದಲಿ ॥೫೨॥

ಧರ್ಮಜನು ಭೀಷ್ಮನಿಗೆ ಅಗ್ರಪೂಜಾರ್ಹರಾರೆಂದು ಪ್ರಾರ್ಥಿಸುವಿಕೆ

ಆವ್ಯಾಳ್ಯೆಯೊಳ್ ನೃಪನಿಂದು ಮುನಿಮಧ್ಯದೊಳ್ ।
ದೇವವ್ರಾತಂಗೆರಗಿ ಬೆಸಗೊಂಡನೆಲೆ ಜೀಯಾ ।
ಭೂವಲಯದೊಳ್ ನೆರೆದ ದ್ವಿಜಪಂಕ್ತಿಯೊಳ್ ಸಕಲ ಋಷಿ
ರಾಜ ಸಂಕುಲದೊಳು ॥

ಪಾವನಗ್ರದಪೂಜೆ ಗರಹುರಾದವರನಂ ।
ನೀ ವೊಲಿದು ತೋರಿಸೆನೆ ನಸುನಗುತ ಗಾಂಗೇಯು ।
ನಾವೇದ ಸಮ್ಮತದ ವಾಕ್ಯಮಂ ನುಡಿದನತಿ ಗಂಭೀರ ಸುಸ್ವರ
ದೊಳು ॥೫೩॥

ಭೀಷ್ಮರು ಶ್ರೀ ಕೃಷ್ಣನೆ ಅಗ್ರಪೂಜಾರ್ಹನೆಂದು ಪೇಳಿದರು.

ಪದುಮ ಜಾಂಡದೊಳಿದ್ದ ಪ್ರಾಣಿಗಳ ಪುಟ್ಟಿಸುವ ।
ಪದುಮ ಸಂಭವನನಿಚ್ಛಾಖ್ಯ ಮಾತ್ರದಿಂ ನಾಭಿ ।
ಪದುಮದಿಂ ಪಡೆದ ಪುರುಷೋತ್ತುಮಂ ತಾನಾವನಾ
ಜಗ ಪ್ರಳಯದೊಳಗೆ ॥

ಪದುಮಾಲ ( ಮಾಕ್ಷಿ ) ಯುಳ ಕೂಡಿ ವಟಪತ್ರ ತಲ್ಪದೊಳ್ ।
ಪದುಮಸಖ ಕೋಟಿ ಕಾಂತಿಗಳಿಂದ ರಾಜಿಸುವ ।
ಪದುಮಾಕ್ಷ ಜಡಜೀವ ವ್ಯಾಪ್ತನೀ ಕೃಷ್ಣನೇ ಪೂಜಾರ್ಹ
ನಹುದೆಂದನು ॥೫೪॥

ಗಿರಿಗಳೊಳ್ ಕನಕಾದ್ರಿ ದ್ವಿಜಜಾತಿಯೊಳ್ ಗರುಡ ।
ಶರಧೀಯೊಳ್ ದುಗ್ಧಾಬ್ಧಿ ಪಶುಗಳೊಳ್ ಸುರಧೇನು ।
ಹರಫಣಿಪ ಶಕ್ರ ಮೊದಲಾದ ದೇವತೆಗಳೊಳ್
ನಾರಾಯಣನೆ ಮುಖ್ಯನು ॥

ಅರಸ ಬೆಸಗೊಂಬದೇ ನೀ ಕೃಷ್ಣರಾಯನ ।

ಧ್ವರದಗ್ರ ಪೂಜೆಗತಿ ಪಾತ್ರ ಭೂಪಾಲರೊಳ್ |
ಚರಣಾಬ್ಜ ಯುಗಳವಂ ತೊಳದರ್ಚಿಸುವದೆಂದನಾ ಭೀಷ್ಮ
ನಿಶ್ಚಯದೊಳು ||೫೫||

ಇತರ ಋಷಿಗಳ ಸಮ್ಮತ

ವ್ಯಾಸನಾರದ ಕಣ್ವಕಸ್ಯಪ ವಶಿಷ್ಠ ವೆಗೌ |
ನೇಶರೋಮರ್ಷ ಸನಕ ಶೌನಕ ತಪಸ್ವಿಗಣ |
ರೀಸಭಾ ಮಧ್ಯದೊಳ್ ನೆರದಿರ್ದ ರೆಲ್ಲರಂ ಕೇಳರಸನೀ
ಪೂಜೆಗೆ ||

ಕೇಶವನೆ ಯೋಗ್ಯನಹ ನೆಂದನೆಲ್ ಋಷಿನಿಕರ |
ಲೇಸನಾಡಿದೆ ಭೀಷ್ಮ ಯದುಕುಲೋದ್ಭವನಾದ |
ವಾಸುದೇವಂಗರ್ಚನೆಯಮಾಡಿಸೆನೆ ಕೇಳ್ದು ಭೂಪಾಲನನು
ವಾದನು ||೫೬||

ಧರ್ಮನು ಶ್ರೀ ಕೃಷ್ಣನಿಗೆ ಅಗ್ರಪೂಜಾ ಮಾಡುವಿಕೆ.

ವಿನಯದಿಂದವನಪತಿ ಸತಿಸಹಿತ ಶ್ರೀ ವರನ |
ಕನಕಮಣಿ ಖಚಿತ ಸಿಂಹಾಸನದ ಮೇರಿಲಿಸಿ |
ವಿನುತ ನಿರ್ಮಲ ಪವಿತ್ರೋದಕಗಳಿಂ ದಂಘ್ರಿಗಳ ತೊಳದು
ಶಿರದೊಳಾಂತು ||

ಘನಘೋಷದಿಂದ ಮಧುಪರ್ಕಾದಿ ಪೂಜೆಯಿಂ |
ದನುಪಮ ಸುಗಂಧ ಮಾಲ್ಯಾಂಬರ ನವಾಭರಣ |
ವನಿತರಿಂ ಸತ್ಕರಿಸುತಭಿನಮಿಸಿ ನುತಿಸಿದಂ ಕೈ ಮುಗಿಮು ಭಕ್ತಿಯಿಂದ
||೫೭||

ಜಯಜಯ ಸುರಸ್ತೋತ್ರ ಸುಖಪೂರ್ಣ ಶುಭಗಾತ್ರ |
ಜಯಜಯ ಭಕತರಕ್ಷ ಕಂಸಾರಿ ಖಳಶಿಕ್ಷ |
ಜಯಜಯ ದುರಿತನಾಶ ದಾರ್ವಕಾ ಪುರಧೀಶ ಸರ್ವೇಶ ಲೋಕ
ಪೋಷ ||

ಜಯಜಯತು ಗೋಪಾಲ ಸಂತತ ರಮಾಲೋಲ |
ಜಯಜಯತು ಪರಬೊಮ್ಮ ದೇವ ಸರ್ವೋತ್ತುಮ್ಮ |

ಜಯಜಯತು ಜಯರಾಮ ಯದುಕುಲಾಂಬೋಧಿ ಸೋಮ
ಜಯಜಯ ತೆನುತಿರ್ದನು ||
||೫೮||

ತುಂಗಸ್ತನಂಗಳೇ ಗಿರಿಗಳಂತೆಸೆಯೆ ದಂ |
ತಂಗಳೇ ಮುಕ್ತಾಫಲ ಗಳಾಗಿರೆ ಪೊಳವ |
ಕಂಗಳೇ ಮೀನ್ಗಳಂತಿರೆ ರಂಗು ದುಟಿಗಳೇ ಪವಳಲತಿ
ಯಿಂದೊಪ್ಪಿರೆ ||
ಶೃಂಗಾರ ಗತಿಗಳೆ ತರಂಗಗಳಾಗಿರೆ ನಿರ್ಮ |
ಳಂಗ ಲಾವಣ್ಯರಸ ವಾರಿನಿಧಿಯಂತೆ ಮೆರ |
ವಂಗನೆಯರರುಣಮಯ ಮಂಗಳಾರುತಿಯ ಕೃಷ್ಣಂಗೆ ನಲು
ವಿಂದೆತ್ತಲು ||೫೯||

ಮೊಳಗಿದವು ದುಂದುಭಿಗಳ ಭ್ರದೋಳ್ ಮಂದಾರ |
ಮಳೆಯ ಸೂಸಿದರಾಗ ನಿರ್ಜರರ್ ತಮತಮಗೆ |
ನಳಿನದಳ ಲೋಚನನ ಸಿರಿಮುಡಿಗೆ ಧರ್ಮಜನ ಸುಕೃತಮಂ
ಬಣ್ಣಿಸುತ್ತಾ ||
ಬಳಿಕ ಮುನಿಜನ ವೈದೆ ಕೊಂಡಾಡಿದರ್ ಭೂಪ |
ನಿಳಿಯೋಳೆ ನಮಮ ಧನ್ಯನೊ ಹರಿಯನೊಲಿಸಿಹ ಸ |
ಫಲವಾಯಿತಧ್ವರಂ ಕೃತಕೃತ್ಯರೆಮಗಿದಂ
ಯೋಗ್ಯತೆಯ ಘಟನೆಂದರು ||೬೦||

ಶ್ರೀ ಕೃಷ್ಣ ಸ್ತೋತ್ರ

ನಮೊದನುಜ ತಮನರಿಪು ಧಾ (ದಾ) ತೃ ಗಿರಿಧರ ಶೌರಿ |
ನಮೊ ದಿತಿಜ ಜಯ ಕ್ರೋಡ ದೀನ ಶಿಶು ರಕ್ಷಕನೆ |
ನಮೊ ದುಃಖ ನಾಶ ವಟು ದೂರದುಷ್ಟರ್ಗೆ ನೃಪವಂಶ ಸಂಹ್ವರ
ಭಾರ್ಗವ ||
ನಮೊ ದೇವ್ಶರಘುರಾಮ ದೈತ್ಯ ಮರ್ದನ ಕೃಷ್ಣ |
ನಮೊ ದೋಷ ಹರ ಬೌದ್ಧ ದೌಂಷ್ಟ್ರ (ದುಷ್ಟ) ಮುಖ ಕಲಿ ಶಿಕ್ಷ |
ನಮೊ ದಂತಿ ವರ ವರದ ವಿಭುದ ಗಣ ವಂದ್ಯ ಸಲಹೆಂದು ಮುನಿಗಳ್
ಪೊಗಳ್ದರು || ೬೧ ||

ದಿವಿಜರು ಪೂಮಳೆಗರೆದುದು

ಅವನಿ ವೃಂದಾರಕರ ಸುಮ್ಮಾನ ಪಾಂಡವರ ।
ಸುವಿಲಾಸದೇಳ್ಗೆಯಿಂ ದ್ರೌಪದಿ ಸುಭದ್ರಾದಿ ।
ಯುವತಿಯರ ಸಂತೋಷದೊಲವುಗಳ ಕೌರವರ ಮಾತ್ಸರ್ಯ ಭರಿತ
ಮುದವ ॥

ದಿವಿಜತತಿ ದುಂದುಭಿಯ ರಭಸದಿಂ ಪೂಮಳೆಯ ।
ಭುವನ ಪತಿ ಹರಿಯುತ್ತಮಾಂಗದೊಳ್ಸೂಸು ಉ ।
ತ್ಸವವ ಕಂಡಿರೆ ನೋಡಿರೆಂದಖಿಳ ಭೂ ಭೂಜರ್ ಜರಗಾಗಿ
ನೀಕ್ಷಿಸಿದರು ॥ ೬೨ ॥

ಶಿಶುಪಾಲನು ಶ್ರೀಕೃಷ್ಣನ ನಿಂದಿಸಿದ್ದು

ಕೆಲರಚ್ಯುತನ ಪಕ್ಷಪಾತ ಬಂಧುತ್ವದೊಳ್ ।
ಕೆಲರೆಮಸುತಾದಿಗಳ ಸ್ನೇಹಾನುವರ್ತಿಯೊಳ್ ।
ಕೆಲರುಚಿತ ಸ್ತೋತ್ರ ಭಯ ಭಕ್ತಿಯೊಳ್ ಕೆಲಕೆಲರ್ ಕುಹಕತ್ವ
ಬುದ್ಧಿಗಳೊಳು ॥

ಕೆಲರಿದ್ಯಾಕೆಮಗೆನುತ ನುಡಿವುತ್ತ ಸಕಲ ಭೂ ।
ವಲಯ ದರಸುಗಳಿರ್ದ ರವರೊಳಾತಿಶುಪಾಲ ।
ಖಳಶಿರೋಮಣಿ ಪೂರ್ವ ವೈರದಿಂ ನಿಂದಿಸಿದ ಜರಿದು ಮೂ ।
ದಲಿಸಿ ಹರಿಯಾ ॥ ೬೩ ॥

ಏನೆಲವೊ ಮೂರ್ಖ ಸಹದೇವ ನೀ ಭೂತಳದ ।
ಮಾನನಿಧಿಗಳ ಮುಂದೆ ಗೋವಳಂಗರ್ಘ್ಯಾದ್ಯ ವಿ ।
ಧಾನ ಸಿಂಹಾಸನವೆ ಮೇಣಗ್ರ ಪೂಜೆ ಸಂಭಾವನೆಯ ವಂದನೆಗಳೇ ॥
ಈ ನೆರದ ಮೌನಿಕುಲ ಹಿರಿಯರಿರ ಲಕಟಕಟ ।
ಹಾನಿ ತಂದನೆ ರಾಜಸೂಯಾಧ್ವರಕೆ ಧರ್ಮ ।
ಸೂನು ತಮ್ಮಯ್ಯನಂ ದುರ್ಗತಿಗೆ ಕಳುಹಿದನೆ ಖೂಳರ್ಕೈ
ನೀವೆಂದನು ॥ ೬೪ ॥

ತರುಳರ್ಕೈವರ್ ಪಾಂಡು ಸುತರಂತಿರಲಿ ಭೀಷ್ಮ ।
ಪಿರಿಯ ವೃದ್ಧಂ ಪ್ರುಹುಡನೆಂದು ನಿನ್ನಂ ಕೇಳಿ ।

ಕೆರುವ ಕಾಯ್ವಂಗಚರ್ನೆಯ ಮಾಡಿಸೆಂದರುಹಿ ಮಖ ಪುಣ್ಯಮಂ ।
ಕಳದೆಲಾ ॥

ಅರಸುಗಳ ರಾಜ ವಿಭವಾಸ್ಪದದ ಗದ್ದುಗೆಗೆ ।
ಪರಮ ಭಾಹಿರರು ಯಾದವರು ತತ್ಕುಲದೊಳವ ।
ದುರುಳ ನೆಂಬುದು ಜಗತಿಯೊಳ್ ಪ್ರಸಿದ್ಧವೆಲೆ ಮೂಢಾ
ತ್ಮನೀ ಸೆಂದನು ॥೬೫॥

ಈ ಋಷಿಗಳೀ ಭಣಾಗುಗಳನೋಡೆ ನೆರದ ಬಡ ।
ಹಾರುವರ್ದಕ್ಷಣೆ ಸುಭೋಜನಾಂಬರ ಗಂಧ ।
ಭೂರಿದಾನವೆ ಸಾಕು ಮಾನಮನ್ನಣೆ ಪೂಜೆ ವಾಸೆವಟ್ಟಂ
ಗಳಲ್ಲಿ ॥

ಹೋರುವವ ರಿವರಲ್ಲ ಧರ್ಮಜಂ ಜಡ ಭೀಷ್ಮ ।
ಚಾರು ಮತಿಯುಲ್ಲಿ ಭೂಪಾಲರ ತಿರಸ್ಕರಿಸಿ ।
ಪೋರತನ ದಿಂದರ್ಚನಿಗೆ ಸಂದ ನಿನಗಿದಂ ಕೃಷ್ಣ ಸದರವೆ
ಯೆಂದನು ॥೬೬॥

ಅರಿಯುದವರಾದರಿಸೆ ನಿನ್ನಕುಲ ನೀತಿಗಳ ।
ನರಿಯು ಬ್ಯಾಡವೆ ಗೊಲ್ಲ ಕೇಸರಿಯು ಕಟಕದೊಳ್ ।
ನರಿಗಳೊಡತನವೆ ನೆರದೀ ಸಭಾಮಧ್ಯದೊಳ್ ರಾಜೋಪ
ಚಾರಂಗಳೆ ॥

ಆರುಹನೇ ಮರದೆಲಾ ತುರುಗಾವ ತಳ್ಳಿಯಂ ।
ಕುರುಬರೂರಿಲಿ ಕಾಜುಮಾಣಿಕ ವಿಪೆಂಬಂತೆ ।
ಮರುಳಗಳ್ ತಿಳಿಯದರ್ಚನೆ ಬೆರತ ಗದ್ದುಗೆಯು
ನಿಳಿಯೆಂದು ಖಳಜರಿದನು ॥೬೭॥

ಹಿಂದೆ ಭೀಷ್ಮಕರಾಯನಾತ್ಮಜಯು ನೆನಗೀವೆ ।

---

ವಾಸೆ = ಮಾ ತುಳಲ
ವಟ್ಟಂಗಳಲ್ಲಿ = ವಟ್ಟ-ದಲ್ಲಾಲಿ
ಹೋರುವರ = ಒಹಿಸುವವರು.
ತರುಗಾವ = ಆಕಳಕಾಯ್ವ
ತಳ್ಳಿಯಂ = ಬಂಡಾಯಿಖೋರ, ನಡುವೆಬಂದು ಜಗಳಹಚ್ಚುವಿಕೆ.

ನೆಂದು ನೇಮಿಸಲಾಗ ರುಗ್ಮಿಣಿಯು ಕಕ್ಷತನ ।
ದಿಂದೊಯ್ದು ಭಾಸಮಾಡೆನ್ನ ಕೈ ವಳಗಾಗದಾ ಕುಶಸ್ಥಳ
ಗೋಡಿದೆ ॥

ಇಂದು ಮತ್ಪುಣ್ಯದಿಂ ವೈದೊರ್ದೆ ತವಪ್ರಾಣ ।
ದಿಂದ ಬಿಡೆ ನಿನ್ನರ್ಚಿಸಿದ ಪಾಂಡುನಂದರ ।
ಕೊಂದು ಬಿಸಡುವೆ ನೋಡೆನುತ ಚೈದ್ಯ ಬಹುಬಗೆ
ಯೊಳಚ್ಯುತನ ನಿಂದಿಸಿದನು ॥೬೮॥

ಅದುಕೇಳುತನಿಲಜಂ ರೋಷದಿಂ ದಾಖಳನ ।
ಗಡೆಯಿಂದ ನಾಲಿಗೆಯ ಕೀಳ್ವೆ ನೆಂದೇಳಲೂ ।
ನದಿಯಮಗ ಕಂಡಿವನ ವಧಿಗೆ ಹರಿಕಾರಣಂ ನೀನ್ವೈರಿಸನುತ
(ನದಿಜ ಕಂಡಿವನ ವಧಿಗಸುರಹರ ಕಾರಣಂ) ನಿಲನೇ ॥
ಬೆದರದಾ ದಮಘೋಷಸುತ ಬಾಯ್ಗೆ ಬಂದಂತೆ ।
ಒದರುತಖಿಳೇಶನಂ ಬೈದಾರ್ಭಡಿಸಿ ನಿಲ್ಲು ।
ಕದನಕನುವಾಗೆಲವೊ ದನಗಾವಿ ಜಾರಚೋರನೆಯೆಂದು
ದೂಷಿಸಿದನು ॥೬೯॥

**ಶಿಶುಪಾಲನ ವಧೆ**

ಈ ತೆರದೊಳುರ ಪಳಿವ ಖಳನ ಶತಕಪರಾಧ ।
ತಾತಾಳ್ದವನ ಜನನಿಗಿತ್ತ ಭಾಷೆಗೆ (ವಚದಿಂ) ಮತ್ತೆ ।
ಪೀತಾಂಬರಂ ಜರಿವುದಂ ಕಂಡು ಸ್ಮರಿಸದೆ ಚಕ್ರಕಾಗ್ನೆಯನೀಡಿ
ಲೂ ॥

ಭೀತಿಗೊಳೆ ಮೂಜಗಂ ತರಿದುದಾಕ್ಷಣ ಚೈದ್ಯ ।
ಯಾತುಧಾನನ ಶಿರವ (ನ)ತರಿಯೆ ಗರ್ಜನೆಯಿಂದ ।
ಧಾತುಗೆಟ್ಟೆಳಿದು ಮೂರ್ಛೆಯನ್ನೈದಿ ತಹಿತಬಲ ವದ್ಭುತ
ವೆನೆಂ ಪೇಳ್ವೆನು ॥೭೦॥

**ಇತರ ರಾಜರೆಲ್ಲ ಭೀತಿಗೊಂಡರು.**

ಮೂರೆಂಟು (ನೂರೆಂಟು) ಸಾವಿರ ತುರಂಗ ಮಾತಂಗ ವೀ ।

ಆರು ಸಾವಿರ ಪಾಯುದಳ ಲಕ್ಷ ರಥಿಕರ್ಪ್ರಿ ।
ನೂರುರಿಪು ನೃಪತಿಗಳ ಚತುರಂಗಸೈನ್ಯ ಧೃತಿಗೆಟ್ಟು
ಕಂಪಿಸಿ ಧರೆಯೊಳು ॥
ಘೋರತರ ಚಕ್ರದ ಮರೀಚಿಯಿಂದರುಣಜಲ ।
ಕಾರುತಂತಕ ಪುರಿಗೆ ಸಾಗಿದದು ನಿಮಿಷದೋಳ್ ।
ನಾರಾಯಣನ ಕೂಡೆ ದ್ವೇಷಮಂ ತಾಳ್ದವರ್ ಬಾಳುಬದುಕುವರೆ, ತ್ರೈ
ಜಗದೊಳು ॥೬೭॥

ಧರ್ಮನು ಯಜ್ಞಪೂರ್ಣಾಹುತಿ ಗೈದನು,

ನೆರೆದಮಹಿಪರ್ (ಮಹೀಸುರ ಸಿದ್ಧ ಸಾಧ್ಯಗಣ) ಮೌನಿಗಳ್ಗೊಗಳೆ-
ದಿವಿಜಗಣ ।
ಹರಿಯ ನುತಿಸುತೆ ಪುಷ್ಪ ವೃಷ್ಟಿಯಂ ಕರೆಯೆಬಳಿ ।
ಕರಸ ಸಂಭ್ರಮದಿಂದ ಪೂರ್ಣಾಹುತಿಯ ನಿತ್ತು ಕೃತು ಸಮಾಪ್ತಿ
ಯನಂತರ ।
ವರಮಂತ್ರ ಪೂತದವಭೃತ ಸ್ನಾನವಂ ಮಾಡೆ ।
ಸುರಪ ಸಂತುಷ್ಟಿಯೋಳ್ ಪಾಂಡು ನೃಪಾಲಕಗೆ ।
ಪರಮ ಪದಮಂ ಕೊಟ್ಟು ಮನ್ನಿಸಿದ ಕುಂತಿಜರ ಸುಕೃತ
ವೇಂ ಬಣ್ಣಿಸುವೆನೊ ॥೬೮॥

ಬ್ರಾಹ್ಮಣ ಭೋಜನ ವಿವರಣೆ

ಧರಣಿಸುರರೊಂದು ಲಕ್ಷದ ಭೋಜನಾಂತರಕೆ ।
ಮೊರೆವದೊಮ್ಮೆಯು ಶಂಖಮುಖದ ಪರಿಯವಸಾನ
ಪರಿಯಂತ ಬಿಡದೆ ಹಗಲಿರುಳೂದಿತೇ ವೇಳ್ದೆನವನಿ ದಿವಿರಜ
ಗಣನೆಯಾ ॥
ಅರಿವರಾರ್ ಭಕ್ಷ ಭೋಜ್ಯಾದಿಗಳ ಗಿರಿ ರಾಸಿ ।
ಶರಧಿಯೋಲ್ ಘೃತ ದುಗ್ಧ ಮಧು ದಧಿಗಳುಡ್ಡವಣೆ ।
ಯರ ಘಳಿಗೆಯೋಳ್ ತುಂಬಿ ಮತ್ತೆ ಬರಿದಾಗುವದು ಧರ್ಮಸುತ
ನಧ್ವರದೊಳು ॥ ೬೯ ॥

---

ಧಾತುಗೆಟ್ಟಳಿದು = ಶಕ್ತಿ ಹೀನರಾಗಿ

ಉಡ್ಡವಣೆ = ಹಾಲು ಮೊಸರು ತುಂಬುವ ಹೌದುಗಳು, ಹೌಜುಗಳು

ಧರ್ಮಜನು ಸಕಲ ವಸಿನಿಗಳನ್ನು ಪೂಜಿಸಿದ್ದು

ಬಳಿಕರಸ ಸನ್ಮುನೀಶ್ವರರ ಪದಕೆರಗುತ ಸ ।
ಫಲವಾಯ್ತು ಧ್ವರಂ ನಿಮ್ಮನುಗ್ರಹದಿಂದ ।
ಲಿಳಿಯೊಳತಿ ಧನ್ಯನಾನೆಂದವರ ಮನ್ನಿಸಿದ ಭೂರಿ ದಕ್ಷಣೆಗಳಿಂದ ॥
ನಲುವಿನಿಂದವನಿಪನ ಪರಸಿ ತನ್ನಾಶ್ರಮಕೆ ।
ತಳರ್ದರಾನಂದದಿಂ ಮರುತ ಮಾಂಧಾತ ಶಿಬಿ ।
ನಳ ದಶರಥಾದಿಗಳ್ಸರಿಯೆ ಹರೆ ಧರ್ಮಜಂಗೆಂದು ಮಿಗೆ
ಕೊಂಡಾಡುತಾ ॥ ೭೪ ॥

ಸಕಲ ರಾಜರನ್ನು ಸಂತೈಸುವಿಕೆ

ರಾಜವರ್ಗವನಖಿಳ ಬಾಂಧವ ನಿಕಾಯಮಂ ।
ಭೋಜನಾಂಬರ ಗಂಧ ಮಾಲ್ಯ ಭೂಷಣ ರತ್ನ ।
ವಾಜಿಗಜ ರಥ ದಾಸ ವಧುಗಳಿಂದವರವರ ತಾರತಮ್ಯಗಳನರಿದು ॥
ರಾಜಕುಲ ಮೌಳಿ ಧರ್ಮಾತ್ಮಜಂ ಸತ್ಕರಿಸಿ ।
ರಾಜೀವ ನೇತ್ರನ ನಿರೂಪದಿಂ ಬೀಳ್ಕೊಟ್ಟು ।
ಯೋಜನಾಂತರ ಕವರ ಪಿಂತ್ಯಾಪ್ತರಂ ಕಳುಹಿ ಸಂಭ್ರಮದೊಳಿರು
ತಿರ್ದನು ॥ ೭೫ ॥

ಶ್ರೀ ಕೃಷ್ಣನು ಪಾಂಡವರನ್ನು ಸಂತೈಸಿದ್ದು

ಕರೆಸಿದಂ ಹರಿ ಪಾಂಡು ಪುತ್ರರೈವರನಾಗ ।
ಲರಸಿ ಪಾಂಚಾಲಿ ಸಹಿತೇಕಾಂತ ಮಂದಿರಕೆ ।
ಪರಮ ಕರುಣೋದಯದೊಳೀಕ್ಷಿಸುತ ನುಡಿವನೆಲೆ ಭೂಪಾಲ
ತ್ರೈಜಗದೊಳು ॥
ಭರಿತ ಮಾಯ್ತಿಂದು ತವ ಯಶ ರಾಜಸೂಯದ ।
ಧ್ವರದಾಹುತಿಗಳಿಂದ ದಣಿದರು ಸುರಸ್ತೋಮ ।
ವರಡಿವಿಯು ಪ್ರಾಪ್ತಿಸಿತು ನಿಮ್ಮಯ್ಯತನಿತರೋಳ್ ಕೃತ ಕೃತ್ಯ
ನೀವೆಂದನು ॥ ೭೬ ॥

ಶ್ರೀ ದ್ರೌಪದಿ ಧರ್ಮರಾಜರು ಶ್ರೀ ಕೃಷ್ಣ ಸ್ತೋತ್ರಗೈದರು

–ನ ೀಕರಣಾಬಮಂ ಸತತ ಸೇವಿಸಂ ।

ಗಾವಿರಂಚಾದ್ಯಮರ ಪದವಹುದು ಸಿದ್ಧವೆಲೆ ।
ನೀವೆ ಸಾಕ್ಷಾತೆಮ್ಮ ಸನ್ನಿಧಿಯೊಳಿರುತಿರಲ್ ಜನಕಗೇನರಿದುದಿವಿಯೂ ॥
ಭೂವಲಯದೋಳ್ ದುರ್ಲಭ್ಯದ ಪ್ರಯೋಜನಗಳೆ ।
ನಾವಗಂ ಕೃತ ಕೃತ್ಯರಾವಲಾ ಕರುಣದಿಂ ।
ಜೀವನಸಖರಾ ದೈವರಂ ಬಿಡದೆ ನಲಸುತಿರಲ್ ಊಣ್ಯಾವ
ದೆಂದನರಸ ॥ ೭೭ ॥

ಮಸಗಿದರಖಿಳ ಜರಾಸಂಧ ನೀ ಯುಧ್ವರವ ।
ನೆಸಗಲೀವನೆ ದುರುಳ ಚೈದ್ಯನಿಂದುಬ್ಬಸವ ।
ಪಸರಿಸಲ್ ಘಾತಿಸುವ ಹೆಕ್ಕಳವೆ ನಮ್ಮಲ್ಲಿ ಸಕಲ ಜಂಬು ದ್ವೀಪದ ॥
ವಸುಮತೀಶರ ವಿಜಯ ಕಿರುಕಳವೆ ಭುವನದೋಳ್
ಪೊಸತಲ್ಲವೇ ನಮಗೆ ಪಾಂಡುವ ಸ್ಥಾಪನಾ । (ಚಾರ್ಯ)
ವ್ಯಸನಿಯೆಂಬುದ ಮೆರದೆ ದೇವ ಸಲಹೆಂದರಗಿದಳ್ ಪದಕೆ
ದ್ರುಪದಾತ್ಮಜೆ ॥೭೮॥

## ಶ್ರೀ ಕೃಷ್ಣನು ದ್ರೌಪದಿಗೆ ಆಶೀರ್ವದಿಸಿದ್ದು

ಎಳೆನುತ ಶ್ರೀಕರಾಂಬುಜ ಯುಗ್ಮದಿಂದ ಕರು ।
ಣಾಳುಗಳ ದೇವ ಸುಪ್ರೇಮದಿಂ ದ್ರೌಪದಿಯ ।
ಬಾಳಮಂ ಪಿಡಿದೆತ್ತು ತೀಕ್ಷಿಸಿದ ತೋಷಾಶ್ರು ಪೂರ್ಣ
ಲೋಚನಗಳಿಂದ ॥

ಬಾಲಕಿಯ ಬಾ ತಂಗಿ ಕಲ್ಯಾಣಿ ಫಣಿವೇಣಿ ।
ನಿಲೋತ್ಪಲಾಕ್ಷಿ ಬಾಯೆನುತ ಮನ್ನಿಸಿ ನುಡಿದ ।
ನೀಲಲಲಿತ ವ ಖ ಮುಗಿದುದಿಂದು ನಾ ದ್ವಾರಕೆಗೆ ತೆರಳ್ವೆ
ನೆಂದಿಂತೆಂದನು ॥೭೯॥

## ಶ್ರೀಕೃಷ್ಣನುಪದೇಶ

ನಂಬದಿರ್ ಸಿರಿಯ ಸಾಮ್ರಾಜ್ಯಮುಂ ಪತಿವ್ರತೆ ಗ ।
ಳೆಂಬರ್ಗೆ ನೀ ಗುರು ವಿಖ್ಯಾತೆ ವಿಷಾದ ಮೋದಂಗಳೊ ।

---

ಊಣ = ಕೊರತೆ, ಕಡಿಮೆ ಮಸಗಿದರು = ಸಿಟ್ಟಿನಿಂದ ಕಾಳಗ ಮಾಡಿದರು

ಪ್ಪಂಬಲಿಸದೇಕಚಿತ್ತದೊಳಿರ್ದು ಧರ್ಮವುಂ ಬಿಡದೆ ಸತ್ಯವನುಳಿಯದೆ ||
ಡಂಬಕದ ಸುಖದುಃಖ ಸಂಸಾರ ಜಂಜಡದ |
ಡೊಂಬಿನೊಳ ನೆಲೆಗೊಳದೆ ಕೌರುವರ ಮತ್ಸರದ ವಿ |
ಡಂಬರದ ಮೋಹಕೊಳಗಾಗದಂತಿರುವದೆಂದಸುರಹರ
ಬೋಧಿಸಿದನು ||೮೦||
ವಿಷವ ಗೆಲಿದಿರಿ ಹಿಂದೆ ನೀವ್ಬೈವ ರಿಂದಗ್ನಿ |
ಪಿಶಿಯಲುಳಿದಿರಿ ದುರುಳ ದಾಯಾದ್ಯರು ಕಪಟ ದು |
ರ್ವ್ಯಸನಿಗಳ್ ಶಕುನಿಕರ್ಣಾದಿಗಳ್ ನಿಮ್ಮಭ್ಯುದಯವ
ನ್ಹೈರಿಸಲರಿಯರು ||
ವಿಷಮ ವಿದೆಲಾ ದ್ಯೂತವ್ಯಗದ ದುಷ್ಟರ್ತವ್ಯ |
ವಸುಧೀಶ ಜಾತಿಗಿದರಿಂದ ನಳದಶರಥ |
ರ್ಬಸವಳಿದು ನೆಗ್ಗಿದರ್ ಧಿಟತ್ತಿಳಿದು ನಡವದೆಂದಚ್ಯುತಂ
ಸೂಚಿಸಿದನು || ೮೧ ||
ನೋತು ನಡವದು ಹಿರಿಯರಾಜ್ಞೆಯಲಿ ನಿತ್ಯ ಸಂ |
ಪ್ರೀತಿ ನುಡಿ ಸುಜನ ಸಂಮೋಹದಲಿ ವಿಮಲತರ |
ನೀತಿಯಿಂ ಪರಿವಾರ ಜನನಾಡು ಬೀಡಿನಲಿ ಖ್ಯಾತಿ ಮಿಗೆ-
ಧರ್ಮದಲ್ಲಿ ||
ಘಾತಿಸುವ ಪೌರುಷವ ರಿಪುಗಳ ಜ್ಞಾತಿಗಳ |
ವ್ರಾತದಲಿ ನೀವೆಚ್ಚರಿಕೆಯಲಿಹುದೆನುತಲೆಮು |
ಜಾತಂಗೆ ಬುದ್ಧಿಯಂ ಪೇಳಿ ಹರಿ ಬೀಳ್ಕೊಂಡು ಪೊರಮಟ್ಟ-
ನರಮನೆಯನು || ೮೨ ||

ಶ್ರೀ ಕೃಷ್ಣನನ್ನು ದ್ವಾರಕಿಗೆ ಬೀಳ್ಕೊಡುವಿಕೆ

ಅನುಜ ತನುಜರ ಸಹಿತಲರಸು ದೂರಕೆ ಕಳುಹಿ
ವನಜಾಕ್ಷ ನಡಿಗೆರಗಿ ಬಾಷ್ಪಲೋಚನನಾಗೆ |
ಘನ ಮಹಿಮ ತಿಳಿದು ತಕ್ಕೈರ್ಸಿ ನೆನೆದಾಕ್ಷಣಂ ಬಾಹೆನೆಂದಭಯ-
ಕೊಡಲು ||

---

ದ್ಯೂತವ್ಯಗದ= ಜೂಜಾಟವೆಂಬ ಬಿಸಿಲುಕುದುರೆ ಬಸವಳಿದು = ಶಕ್ತಿ ಗುಂದಿ, ಜ್ಞಾನಹೀನರಾಗು.

ಧರ್ಮಗೆ ದುಃಶಕುನಗಳಾದುದು

ಮನೆಗೆ ಬರಲಷ್ಟದೋಳ್ ದುರ್ನಿಮಿತ್ಯಗಳಾಗೆ ।
ನನುಪಮನನಗಲಿದ ವಿಷಾದದಿಂ ಧರ್ಮಸುತ ।
ನನಿತು ದುಮ್ಮಾನ ಬಿನ್ನೈಸಿದಂ ಧೌಮ್ಯವೇದವ್ಯಾನರಂ
ಕಾಣುತಾ ॥ ೮೩ ॥

ಶ್ರೀ ವ್ಯಾಸರು ಅರಸನನ್ನು ಸಂತೈಸುವಿಕೆ

ಅಸುರರಿಪು ಕೃಪೆಯಿಂದ ನಿರ್ವಹಿಸಿದ ಮುಖವ ।
ಶಶಿಕುಲೋದ್ಭವರಾದ ಪೂರ್ವದಮಹೀಶ್ವರರ ।
ಪ್ರಸರದೊಳಗಿವನಧಿಕನೆಂಪೆನ್ನ ಪತಿಕರಿಸಿ ಸಲಹಿ ನಿಜನಗರಿಗಿಂದು ॥
ಬಿಸಟುಬಿಜಯಂಗೈದು ನೀ ಉಬ್ಬಸವನಾರಿ ।
ಗುಸುರ್ವೆನೆಲೆ ಜೀಯ ಹಿಂದೆನವ ಗೋಕುಲವಾಯ್ತು ।
ಬಿಸಿಜಾಕ್ಷನಿಲ್ಲದೀ ಪುರದೊಳೆಂತಿಪನೆಂದು ಬಿಸುಸುಯ್ದ
ನವನೀಶನು ॥ ೮೪ ॥

ಅರಸ ಕೇಳ್ ದೈತ್ಯರುರವಣೆಯು ನೆದುನಾಯುಕ ।
ರ್ವರಿಹರಿಸಲಳವಲ್ಲ ಶ್ರೀಕೃಷ್ಣನಿಲ್ಲದಿರೆ ।
ಉರುತರದ ಭೀತಿ ದ್ವಾರಕಿಗೆಂದು ವೋದನಿಲ್ಲಿಂದ ನಿಮ್ಮೈವರೊಳಗೆ ॥
ಕರುಣಕಿರಿದೇ ಸ್ಮರಿಸಿದಾಕ್ಷಣಕೆ ನಿಂದಿಹ್ಯನು ।
ಹರಿನಿಮ್ಮ ಧನಪ್ರಾಣದರಸನಲ್ಲವೇ ಚಿಂತೆ ।
ಬರಿದ್ಯಾಕೆ ಮಾಳ್ಪೆ ಬಿಡು ಖೇದ ಭಾವವನೆಂದು ಸಂತೈಸಿದಂ-
ವ್ಯಾಸನು ॥ ೮೫ ॥

ಆಮುಕುಂದನೆ ನೀವಲಾನಮ್ಮನನವರತ ।
ಪ್ರೇಮದಿಂ ರಕ್ಷಿಸುವ ಸ್ವಾಮಿ ನೀವಿರಲೆಮಗೆ ।
ವೈಮನಸ್ಯದ ದುಗುಡುಬಾಧೆಗಳು ಬಂದಪವೆ ಸಂತೋಷ ಕಾಲದೊಳಗೆ॥
ಈ ಮಹೋತ್ಪಾತ ಪ ಸಿದ್ಧ ಭೂಕಂಪನ ವಿ ।
ರಾಮ ಕರ್ಮಗಳಾದ ಬಗೆಯ ಬೆಸಸನೆ ನಗುತ ।
ನಾ (ಲಾ) ಮುನೀಶ್ವರ ನುಡಿದನವನಿಪ ಶಿರೋಮಣಿಗೆ ಮುಂದಿನ-
ಕಥಾಂತರವನು ॥ ೮೬ ॥

ಇದು ಕಣಾ ಕುರುವಂಶ ನಾಶ ಮಾಡುವ ವಿಗ್ರ ।
ಹದ ಪೂರ್ವ ಸೂಚಕಂ ತಿಳಿಯಲಿದು ದಾಯದರ ।
ಮುದಲತಾವಳಿಗೆರವ ಜೀವನಂ ಸದ್ಯವಿದು (ಸತ್ಯವಿದು)
ಕ್ಷಾತ್ರಕುಲ ಘನ ಸಮೀರ ॥
ಇದು ಗಂಪ್ವರಿಯ ಭಾರ ಸಂಹರಣಕಾರಣಗ ।
ಳಿದರ ಫಲವನ ಪರಿಭ್ರಮಣೆ ನಿಮಗಪದಿನ್ನು ।
ಬೆದರದಿರ್ ಸಕಲ ಸಾಮ್ರಾಜ್ಯವನು ಭೋಗಿಸುವೆ ಮುಂದೆ ಧರ್ಮ-
ದೊಳೆಂದನು ॥ ೮೭ ॥
ಕಡು ಕುಹಕರಾ ಕೌರುವರ ಬಲಿಗೆ ಬೀಳದಿರು ।
ನುಡಿಯದಿಭೂಪಪದ್ಧವ ನಿನ್ನ ಮಾನಿನಿಯ ।
ಮುಡಿಗೆ ಹಾಯ್ದೆಳವಡಂ (ದಡಂ) ನೀನಧರ್ಮದ ತಡಿಯುತುಡ-
ಕದಿರ್ ನಿಶ್ಚಲದೊಳು ॥
ಒಡಲೊಡಿವೆ ಮಡದಿಸುತ ಸಾಮ್ರಾಜ್ಯವಿಭವೆಲ್ಲ ।
ಕೆಡುವದಗ್ಗಡ ಮೋಕ್ಷ ಭಾಮಿನಿಯ ಬಯಸುವಡೆ ।
ಧೃಡತರದ ಸತ್ಯವಂದನೆನಂಬೆನುತ ಪೇಳಿ ಕೃಷ್ಣಮುನಿ ಪೊರ
ಟ್ಟನು ॥ ೮೮ ॥

॥ ಶ್ರೀ ವ್ಯಾಸರು ಬದರಿಗೆ ಪೊರಡುವಿಕೆ ॥

ಮುನಿಪ ಕಳುಹಿಸಿಕೊಂಡು ಬದರೀ ವನಕೆ ತೆರಳೆ ।
ಜನಪ ಮಯ ನಿರ್ಮಿತ ಮಹಾ ಸಭೆಗೆ ಬಂದು ಬಳಿ ।
ಕನಿತು ಭೂಸುರರುಳಿದ ಋಷಿಕುಲವ ದುರ್ಯೋಧನಾದಿ
ನೃಪಶೇಷವನ್ನು ॥
ವಿನಯದಿಂದುಪಚರಿಸಿ ಬೀಳ್ಕೊಟ್ಟು ಧರ್ಮಜಂ ।
ವನಜಾಕ್ಷ ಶ್ರೀ ಮನೋಹರವಿಠಲನ ಚರಣವ ।
ನೆನವುತಾನಂದಮಯನಾಗುತಿಂದ್ರಪ್ರಸ್ಥ ಪುರವರದೊಳಿರುತಿರ್ದನು॥೮೯॥

ಇತಿ ಭವಿಷ್ಯೋತ್ತರ ಪುರಾಣೋಕ್ತ ಅನಂತ ಚರಿತ ಕಥಾನು ವಾದ, ಯುಧಿಷ್ಟರಕೃತ ರಾಜಸೂಯಾಗ ವರ್ಣನೊನ್ನಾಮ ಚತುರ್ಥ ಸಂಧಿ ಸಮಾಪ್ತ ಮಂಗಳಂ ಮಹಾ ॥

# ಅಥ ಐದನೆ ಸಂಧಿ ಪ್ರಾರಂಭ

ಸಂಧಿ ಸೂಚನೆ- ರಾಗ ಸಾರಂಗ

ಧೃತರಾಷ್ಟ್ರನಾಜ್ಞೆಯಿಂ ಧರ್ಮಜಂ ಕ್ಷತ್ತನೊಡ ।
ನತಿ ಮುದದೊಳಾ ಹರಿಪ್ರಸ್ತಮಂ ಪೊರಮಟ್ಟು ।
ಸುತ ಸಹೋದರ ರಾಣಿಯರ್ ಸಹಿತ ಹಸ್ತಿನಾಪುರಕ್ಕೈತಂದನು ॥

ಪದನು ( ಶ್ರೀರಾಮ ಸ್ತೋತ್ರ )

ಕನಕೋದರೋದ್ಭವನ ಮೊಮ್ಮಗನ ಮೊಮ್ಮಗನ ।
ತನುಜಂಗೆ ಕಥೆ ಪೇಳ್ದವನ ಪಿತನ ತತ್ಪಿತನ ।
ವನಿತೆಯರಸನ ಮಗನ (ಳ) ಪಡದವಳ ನಿಜವನೆಯ ಸಖನ ಸುತನ ॥
ಜನನಿಯ ಸುಗರ್ಭ ಸಂಜಾತನ್ನ ಜಾತನ್ನ ।
ವಿನಯನುಡಿ ಜರಿದವನ ಸಹಭವನ ಸಹಭವನ ।
ಘನಕರುಣದೋಳ್ ಪೊರೆದ ದೇವನಂ ಕಾವನಂ ಸ್ಮರಿಸಿ ಮುಂಗಥೆ
ಪೇಳ್ವೆನು ॥ ೧ ॥

ಪ್ರಾಣದೇವರ ಅವತಾರತ್ರಯ ಸ್ತುತಿ

ಸುರರ ಪೊರಿಯಲ್ಕಂಜನೆಯ ಜಠರದಿಂ ಬಂದು ।
ಹರಿಕುಲ ಲಲಾಮನಾಜ್ಞೆಯ ತಾಳ್ದು ಖಳಪುರವ ।
ನುರಹಿ ಸೀತೆಯ ಕುರುಹು ತಂದು ಸೇತುವೆಗಟ್ಟಿ ಸೋಮವಂಶ
ದೋಳ್ ಪುಟ್ಟಿ ॥
ಹರಿಯ ಕಾರುಣ್ಯದಿಂ ಮಾಗಧ ಹಿಡಿಂಬ ಬಕ ।
ದುರುಳ ಕೀಚಕ ಕೌರುವರನ ತರಿದೆತಿಯಾಗಿ ।
ಮುರಿದೇಕ ವಿಂಶತಿ ಕುಭಾಷ್ಯಗಳ ಸಜ್ಜನರ ರಕ್ಷಿಸಿದ ಹರಿಯೆ
ಸಲಹೊ ॥೨॥

---

ಕ್ಷತ್ತ=ವಿದುರ

೧ ಈ ಪದ್ಯ ಮಾವಿ ಪದ್ಯವಿದೆ ಇದರಂತೆ ಈ ಕಾವ್ಯದಲ್ಲಿ ೮-೧೦ ಪದ್ಯಗಳಿವೆ ಒಮ್ಮೆಲೆ ಹಿಂದಿನಿಂದ ಇವುಗಳ ರಹಸ್ಯ ಪುರಾಣೇತಿಹಾಸಗಳ ಮೇಲಿಂದ ಕೊಡುತ್ತದೆ ತಿಳಿದವರು ಇದರ ವಿವರ ತಿಳಿಸಿದರೆ ವಿಮರ್ಶೆ ಮಾಡಲು ಹೆಚ್ಚಿನ ಅನುಕೂಲ

ಶೌನಕರ ಪ್ರಶ್ನೆ

ಮುನಿಪುಂಗವನೆ ಲಾಲಿಸಜ್ಞಾನ ತಿಮಿರದಿಂ ।
ವನಜದಳಲೋಚನನ ರೂಪ ಗುಣ ಲೀಲೆಯಿಂ ।
ಮನಕಗೋಚರಿಸದಿರುತಿಹ ಮೂಢರೆಮಗಿಂದು ಸತ್ಕಥಾಲಾಪವೆಂಬೊ॥
ದಿನವನಂ ತೋರ್ದು ಸಲೆ ಪಾವನಂ ಗೈದೆ ಮುಂ ।
ದಿನಘು ಪ್ರಸಂಗಮುಂ ಕರುಣದಿಂದರುಹೆಂದು ।
ವಿನಯದಿಂ ಶೌನಕರು ಪದಕಮಲಕೆರಗಲಾ ಸೂತ ಋಷಿ
ವಿವರಿಸಿದನು ॥ ೩ ॥

ಸೂತರು ವ್ಯಂಗಥೆ ಪೇಳಿದ್ದು

ಬಿತ್ತರಿಪೆ ಕೇಳಾದಡೆಲೆ ಶೌನಕಾದಿ ಮುನಿ ।
ಪೋತ್ತಮರೆ ಉತ್ತಗ ಕಥಾ ಕೌತುಹಲ ನೃಪರ ।
ವೊತ್ತಮಂ ನತ್ವರಿಸಿ ಕಳುಹಿ ಧರ್ಮಾತ್ಮಜಂ ಸುಖದೊಳಿಂದ್ರಪ್ರಸ್ತದಿ॥
ಚಿತ್ತದೋಳ್ ಶೌರಿಯಂ ಧ್ಯಾನಿಸುತಲಿರಲಿತ್ತ ।
ಮತ್ತನಾ ಧೃತರಾಷ್ಟ್ರಸುತನಿವರ ಬೀಳ್ಕೊಂಡು ।
ಕೃತ್ರಿಮದ ಖಣಿ ಶಕುನಿ ಕರ್ನಾದಿ ಪಟುಭಟರ ಗಡಣದಿಂ
ಗಜನಗರಿಗೆ ॥ ೪ ॥

ತಳರ್ದನತಿವೇಗದಿಂ ಹಲವು ಷ್ಪೆಣಗಳಿಂದ ।
ಕಳೆಗುಂದಿ ದುಗುಡದಿಂ ಮನದೊಳಗೆ ಪಾಂಡುವರ ।
ಬಲುಹ ಸೌಭಾಗ್ಯಮಂ ಮಖದ ಸೌರಂಭಮಂ ದ್ರೌಪದಿಯ-
ಸಂಭ್ರಮವನು ॥
ಜಲದೊಳಗ ತಾಬಿದ್ದ ಪರಿಹಾಸನೆನೆ ನೆನವು ।
ತಳಲುತ್ತ ನಿಟ್ಟುಸುರ್ವಿಡುತಲಾಲೋಚಿಸುತ ।
ಛಲಿಗಳ ಪಿತಾಮಹಂ ಮಾತ್ಸರ್ಯದಿಂದಲಿಭಪುರ ಶೀಮೆ
ಗೈತರುತಿರೆ ॥ ೫ ॥

---

ಖಣಿ=ಕಣಿ=ಉತ್ಪತ್ತಿ ಸ್ಥಾನ ಮೂಲ. ಛಲಿಗಳ ಪಿತಾಮಹ=ಕಪಟಹಟ ಮಾಡುವರಿಗೆಲ್ಲ ಮುತ್ತಾ

ರಾತ್ರಿಕಾಲ ವರ್ಣನೆ (೩ ಪದ್ಯ)

ಅನಿತರೊಳಗಸ್ತಮಯ ಸಮಯವಯಾಗಲಪರ ದಿ |
ಗ್ವನಿತೆಯ ಸುಬ್ಬಿತಲೆಯ ರಂಗು ಮಾಣಿಕದಂತೆ |
ದಿನಪಪಕ್ಷಿಮಗಿರಿಯ ಮಸ್ತಕದೊಳೆಸೆಯಲಾ ಭೃಂಗ ನಿಕರಂಗಳೊಡನೆ||
ವನಜಾಳಿಗಳ್ಮುಗಿವುತಿರ್ದವೆಣೆ ವಕ್ಕಿಗಳು |
ಘನವಿರಹತಾಪದಿಂದಗಲಿದವು ನೈದಿಲೆ ಗ |
ಳನುರಾಗದಿಂದ ವಿಕಸಿತ ವಾದವವನಿಯಂ ತಮ-
ಮುಸುಕಿತಾಕ್ಷಣದೊಳು || ೬ ||

ನಿರುತ ಬೆಂಬಿಡದೆ ತನ್ನಾಕಾರದೇಳ್ಗೆಯಂ |
ಉರುತರದ ಸಾವಿರ ಕರಗಳಿಂ ಸುಡುವ ಭಾ |
ಸ್ಕರನ ಮಂಡಲವ ನುಂಗುವೆನೆಂದು ಬಪ್ಪ ಕತ್ತಲೆಯೆಂಬತುಳರಾಕ್ಷಸೀ||
ಭರದಿ ಕೋಪದಿ ಕಿಡಿಗಳುಗಳಿದಳೊ ಮೇಣ್ಗಗನ |
ತರುಣಿ ತಾಳ್ದಳೊ ಕೆಂಪುಮಣಿಗಳಾ ಭರಣಮೆನೆ |
ಪರಿಶೋಭಿಸಿದವಾಗ ಸಂಜೆ ತಾರೆಗಳಮಿತ ದೆಶೆಯೋಳ್ಪ್ರ-
ಕಾಶವಾಗಿ || ೭ ||

ಸೇರಿದವು ಪಕ್ಕಿಗಳ್ಗೂಡಿಂಗೆ ಕಣ್ದೆರದು |
ಪಾರಿದವು ಘೂಕಂಗಳೊದರುತ್ತ ಲೆಣ್ದೆಶಿಗೆ |
ಬೀರಿದವು ಕತ್ತಲೆಗಳಲ್ಲಲ್ಲಿ ಮನೆ ಮನೆಯ [1]ಸೊಡರ್ವೆಳಗು
ಪ್ರಜ್ವಲಿಸುತ ||
ತೋರಿದವು [2]ನೂರೆಲೆಯ ಬಾಂಧವನ ದೂತರೋಲ್ |
ಜಾರಿದವು ಭೂಮಿಯಂತೀವಿರ್ದ ಬಿಸಿಲ ಝಳ |
ಮೀರಿದವು ಮುದದಿಂದ ಕುಮುದಾಳಿಗಳ್ಕೂಡೆ ನಲಿದವು ಚಕೋರ-
ಚಯವು || ೮ ||

---

[1]ಸೊಡರ್=ದೀಪ, [2]ನೂರೆಲೆಯ ಬಾಂಧವ=ಕಮಲಮಿತ್ರಸೂರ್ಯ
ಧೂಮ ಮುಖ=ಹೊಗೆಬಣ್ಣ, ಕಪ್ಪುಮುಖನಾಗಿ

**ಕೌರುವನ ದುರಾಲೋಚನೆ**

ಆರಜನಿಯೋಳ್ ಹಸ್ತಿನಾವತಿಯ ನಗರವಂ ।
ಕೌರವನೃಪಂ ಧೂಮ ಮುಖದಿಂದ ಮೌನದಿಂ ।
ಕ್ರೂರಮನದಿಂ ಮೇಲು ಮುಸುಕಿನಿಂ ಪೊಕ್ಕು ನಿಜರಾಜ ಮಂದಿರಕೆ
ಬರಲು ॥
ಚಾರುಕಂಕಣ ಝಣತ್ಕಾರದಿಂದಾರತಿಯ ।
ನಾರಿಯರ್ ಬೆಳಗಲ್ಕೆ ನೀಕ್ಷಿಸದೆ ತಲೆವಾಗಿ ।
ಸಾರಿದಂ ಸಂತಾಪದಿಂದಲಂತಃಪುರವ ಪುತ್ತುಪೊಗುವಹಿಪನಂತೆ ॥ ೯ ॥
ಮದವಳಿದ ಗಜದಂತೆ ಕೈಕಾಲ್ಗಳುಡಿದ ಸಿಂ ।
ಹದ ಶಿಸುವಿನಂತೆ ಪಲ್ಮುರಿದ ಘಣಿಯಂತೆ ಸರ ।
ದುದಕವನಗಲ್ದ ²ಝಷದಂತೆ ಕಾಂಚನಕಾಣದಳಲುವ ದರಿದ್ರನಂತೆ ॥
ಮದನನಂಬಿನ ತಾಪಕೊಳಗಾದ ಸತಿಯಂತೆ ।
³ಸುದತಿ ಪಾದರಿಯಾದ ಮನುಜನಂತಾ ಕುರುಪ ।
ನಧಿಕ ಚಿಂತೆಯ ತಾಳ್ದು ಹಲವು ಬಗೆ ಕೃತ್ರಿಮವ ನೆನೆನೆನೆದು
ಬಿಸು ಸುಯ್ದನೂ ॥೧೦॥
ಬಳಿಕ ಮುಸುಕಿಟ್ಟು ಮಣಿಮಂಚದೋಳ್ ಪವಡಿಸಲ್ ।
ತಿಳಿಯಬೇಕೀತನ ಮನಸ್ತಾಪ ವೆನುತ ಚಂ ।
ಚಲ ನಯನೆ ಭಾನುಮತಿ ಬರೆ ಜರಿದು ನೂಕಿದಂ ಮಾತಾಡಿಸದೆ
ಖತಿಯೊಳು ॥
ಖಳತಿಲಕನಾಲೋಚಿಸದನೆಂತು ಪಾಂಡುವರ ।
ಗೆಲುವುಪಾಯವ ಕಾಣ್ಬೆನೆಂದು ಕಾತರಿಸಿ ।
ಕಳವಳಿಸುತವ ನಿದ್ರೆಯುಂ ತೊರದಿರ್ದ ನನ್ನೆಗಂ ತೋರಿತಿನ
ಸೂತನೇಳ್ಗೆ ॥೧೧॥

**ಸೂರ್ಯೋದಯ ವರ್ಣನೆ (೪) ಪದ್ಯದಲ್ಲಿ**

ತರಣಿಯೋಳ್ ನೆರೆಯಬೇಕೆಂದು ಸುಮ್ಮಾನದಿಂ ।

---

**¹ಉಡಿದ=ಮುರಿದ ²ಝಷ=ಮೀನ ³ಸುದತಿಪಾದರಿಯಾದ=ಹೆಂಡತಿ ಹಾದರ ಗಿತ್ತಿಯಾದರೆ ಮನುಜನಗೆ ಎಷ್ಟು ದುಃಖವೋ**

ಪರಿಶೋಭಿಸುವ ಪೂರ್ವದಿಕ್ ತರುಣಿ ಕುಂಕುಮದಿ ।
ವರಮಜ್ಜನಂ ಗೈದಳೋ ಬಗೆವಡಹಿ ರಾಜಭೂಭಾರ ಮಂತಾಳದೆ ॥
ಭರದಿಂದ ಲಿಳಿಯ ನುತ್ಸಳಿಸಿ ( ನುಚ್ಛಳಿಸಿ ) ಪಾತಾಳದಿಂ ।
ಪೊರಮಡಲ್ ಸಾಸಿರ ಫಣಾಳಿಗಳ್ ಮಣಿಗಣದ ।
ಕಿರಣಂಗಳಾಗಸವ ತೀವಿತೆನೆ ರಂಜಿಸಿತು ಮೂಡದೆಶೆ ಕೆಂಪಡರ್ದು ॥೧೨॥

ತಾರಾಳಿಗಳ್ ಪರಿಯೆ ತಂಗಾಳಿ ಮುಂಬರಿಯೆ ।
ಘೋರತಮ ಬಿಟ್ಟೋಡೆ, ಚಕ್ರವಾಕಂ ಕೂಡೆ ।
ವಾರಜವು ಮುದ ವೇರೆ ದ್ವಿಜನಿಕರ ವ್ಯೆದೋರೆ ೫ತಾಂಬ್ರ-
ಚೂಪಂಗಳೊದರೆ ॥

ಜಾರಿಯರ ಮನಬೆಚ್ಚೆ ಘೂಕ ತತಿ ಕಣ್ಮುಚ್ಚೆ ।
ಭೇರಿನಾದಂ ಮೊಳಗೆ ನೀಲೋತ್ಪಲಂ ನಲುಗೆ ।
ಧಾರುಣಿಗೆ ಪ್ರಭೆ ಮೆರೆಯೆ ಜನರ ಕಣ್ಣೆವೆದೆರೆಯ ತಪನು
ಉದಯಂಗೈದನು ॥ ೧೩ ॥

ಅತಿ ದುರಾತ್ಮಕ ಹರಿದ್ರೋಹಿ ಪಾಂಡವ ಶತ್ರು ।
ಪತಿತ ಮೂರ್ಖಂ ಕಪಟಿ ದ್ವೇಷಿ ದುರ್ಯೋಧನನ ।
ಹಿತವ ಬಯಸುತಲವನ ಕೂಡೆ ನೀನಿರುತಿರಲ್ ವ್ರತಿ-
ತಪ್ಪದದರಿಂದಲಿ ॥

ಕ್ಷಿತಿಯೊಳೀ ದುರ್ಜನನ ಸಂಗಮಂತೆಜಿಸೆನುತ ।
ಸುತನಾದ ಕರ್ಣಂಗೆ ಬುದ್ಧಿಯಂ ಪೇಳಲು ।
ನ್ನತ ಪೂರ್ವಶಿಖರಮಂ ನಾರ್ದನೆಂಬಂತೆ ದಿನನಾಥನುಂ
ಕಣ್ಗೆಸದನು ॥ ೧೪

ಕಮಲಂಗಳಾಗ ಕಮಲಂ ಬಪ್ಪ ಪವನಮುಂ ।
ಸಮನಿಸಲ್ ವ್ಯೆಪುದುಗಿಕೊಂಡು ಮಧುಪನ ಮುಖದ ।
ಕಮನೀಯ ಝೇಂಕಾರರವದಿಂದ ತಮ್ಮ ಸಖನಾಗಮನ ಕೇಳುತಿರೆ ॥

---

೫ತಾಮ್ರಚೂಡ= ಹುಂಜ ಕೋಳಿ ನೀಲೋತ್ಪಲ=ರಾತ್ರಿಅರಳುವ ಕೆನ್ನೈದಿಲೆ
ನಲುಗೆ=ಬಲಹೀನವಾಗಿ ಮುದರಿ

ವಿಮಲ ಮಣಿಮಯ ಜೋಡು ಧಾತ್ರಿಗೆ ತೊಡಿಸಿದಂತೆ ।
ದ್ಯುಮಣಿ ಮಂಡಲ ತೋರಲಾಸಮಯ ಕಬ್ಜ ವ್ರಜ ।
ಸುಮನದಿಂದೀಕ್ಷಿಸುತಲಪ್ಪುವೊಲ್ದಳಗಳಿಂ ಪಲ್ಲೈಸಿದವು
ನಲಿವುತಾ ॥ ೧೫ ॥

ದುರಾತ್ಮನಾದ ಕೌರವನು ಪಾಂಡುವರ ಶ್ರೀಯ ಹರಣಾ ಲೋಚನೆ

ಆದಿತ್ಯನುದಿಸೆ ದುಂದುಭಿ ಶಂಖ ನಿಸ್ಸಾಳ ।
ನಾದ ಮಂಗೈಸೆ ಮಾಣಿಸುತ ಲಂತಃ ಪುರುವ ।
ಖೇದದಿಂ ಪೊರಮಡದೆ ಕುರುಧರಾ ವಲ್ಲಭಂ ಭಾನುವಿಂಗರ್ಘ್ಯಗಳನು ॥
ಸಾಧಿಸದೆ ಸ್ನಾನಾದಿ ಸತ್ಕರ್ಮ ಬಿಟ್ಟು ಮ ।
ಹಾ ದುರಾ ಲೋಚನೆಯ ನೆಸಗಿರ್ದ ದುರ್ಜನ ।
ಸಾಧುಗಳ ಸೌಭಾಗ್ಯದೇಳ್ಗೆಯಂ ಕಂಡು ಸೈರಿಸುವರೇ
ಭೂತಳದೊಳು ॥ ೧೬ ॥

ವಾಲಗಂಗೊಡದೆ ಬಾಗಿಲ್ಗೆ ಬಂದಖಿಳ ಭೂ ।
ಪಾಲ ಭೀಷ್ಮ ದ್ರೋಣ ಕರ್ನ ಗೌತುಮ ಸಚಿವ ।
ಜಾಲವುಂ ಕರೆಸಿ ಕಾಣಿಸಿ ಕೊಳ್ಳದೊಳಗೆ ಚಿಂತಾ
ಸಮುದ್ರದೋಳ್ ಬಿದ್ದರೆ ॥
ಕೇಳಿ ಗುಜಿಗುಜಿಸಿ ತಮತಮಗೆ ವಿಸ್ಮಿತರಾಗು ।
ತಾಲಯಕೆ ಸರಿಯೆ ಲೀ ವಾರ್ತೆ ಕಿವಿಗಿಡಿಯೆಲಾ ।
ಖೂಳ ಸೌಬಲನಾಗ ನಡೆತಂದ ಕೌರುವನ ಪೊರೆಗೆ
ಕಡುತವಕದಿಂದ ॥ ೧೭ ॥

ಶಕುನಿ ಕೌರವರನ್ನು ಎಬ್ಬಿಸಿದುದು

ಬಂದು ಬಾಗಿಲ ಗಾಹಿ ನವರಿಗೆಚ್ಚರಿಸಲ್ಕೆ ।
ತಂದವರ್ಮೆಲ್ಲ ಮೆಲ್ಲನೆ ಕೈಗಳಂ ಮುಗಿದು ।
ಸಿಂದು ಬಿನ್ನೈಸಿದರ್ ಕುರುಪತಿಗೆ ಜೀಯಾ ಚಿತ್ತವಧಾನ
ಮಾವನವರು ॥
ಸಂದರುಶ ನಾರ್ಥಿಯಾಗಿಹರೆನಲ್ ಕೇಳ್ದು ಕಡು ।
ನೊಂದು ದುಮ್ಮಾನದಿಂದೆದ್ದು ಕುಳ್ಳಿರ್ದುಬರ ।
ಲೆಂದು ನೇಮಿಸಲೊಡನೆ ಪೊಗಿಸಲ್ಕೆ ಸಾರ್ದನಾ
ಶಕುನಿಯಂ ತಃಪುರುವನು ॥ ೧೮ ॥

ಚಿಂತೆಯಾಕೆಂದು ಶಕುನಿ ಕೇಳಿದ್ದು

ಭೂಮಿಗಿಕ್ಕಿದ ಕಂದಿ ದಾನನದ ಕುರುಧರಾ ।
ಕಾಮಿನೀಶನ ಕಾಣು ತೊಯ್ಯನೊಯ್ಯನೆ ಶಕುನಿ ।
ಪ್ರೇಮದಿಂ ನುಡಿದ ನಚ್ಚರಿಯೆ ಗರುಜೇಯೇನು ಮನ
ಸಿಜವೊ ಕಾಯಜವೋ ಮೇಣು ॥
ಭಾಮಿನಿಯರೊಲಿಮೆ ರೊಳಗಾಗದ ಬಗೆಯೊ ತಿಳಿಯೆ ।
ವೈಮನಸ್ಯದ ದುಗುಡ ಸಮನಿಸಿದ ಪರಿ ಎನಗೆ ।
ನೀ ಮಾಜದಲೆ ಪೇಳು ಧೃತರಾಷ್ಟ್ರ ಭೂಪತಿಯ ಪದದಾಣೆ
ನಿನಗೆಂದನು ॥೧೯॥
ದುರುಳಾದಿನೇನಕಟ ಪೂವ ನೆನಗಿಲ್ಲಾವ ।
ಉರುತರದ ವ್ಯಾಧಿಗಳ್ ಹಿಂದಿನ ಸುಕಾಲದಲಿ ।
ತರುಣಿಯರ ಬ್ಯಾಟಕೂಟ ವ್ಯಸನ ಯೆಂಬುದಂ ನೀವರಿಯರೇನೆನ್ನನೂ।
ಮರಳ್ವದುನಿಕೇತನೆ ಹೃದಯದೊಳ್ಪುದುಗಿರ್ದ ।
ಉರಿವವೆಂಕಿಯೆ ನ್ಯಾಕೆ ಕೆಣಕುವಿರಿ ಸಾಕಿನ್ನು ।
ಧರಿಣಿಯೋಳ್ಬದು ಕಲ್ಯಾಕಿನ್ನೆನುತ ಬಿಸುಸುಯ್ದು-
ಬಾಷ್ಪಲೋಚನನಾದನು ॥೨೦॥
ಏನು ನಿನ್ನಂತಸ್ಥಪಾವಕ ಜ್ವಾಲೆ ಭಯ ।
ವೇನು ಜೀವಿಸಲರಿಯನೆಂಬ ನಿಷ್ಠುರದ ನುಡಿ ।
ಏನು ಕಾರಣ ಶೋಕ ನಿನಗ ಸಾಧ್ಯದ ಬಯಕೆ ಮೇನೀಗ
ಭೂತಳದೊಳು ॥
ಮಾನನಿಧಿಯೇ ಜನಪ ಪೇಳೆನಗೆ ವಂಚಿಸದೆ ।
ನಾನಿರುತಿರಲ್ ಬಂದ ಕಂಟಕಮದೇನೆನುತ ।
ನಾನಾ ಪ್ರಕಾರದಿಂ ಸಂತೈಸುತಹಿಕೇತನಂ ಕೇಳ್ದಡಿಂತೆಂದನು ॥೨೧॥

ಕೌರವನು ಪಾಂಡುವರ ಸಂಪತ್ತಿನಿಂದ ನೊಂದದ್ದು

ಪೇಳಲೇ ನೈಮಾವ ಯಮ ಸುತನ ಸಿರಿಯೆಂಬ ।

---

ಮಾಣಿಸುತ = ಬಿಡದಲೆ ಸೌಬಲ = ಶಕನಿ
ಪೂರಗೆ=ಹತ್ತಿರಕ್ಕೆ ನಚ್ಚರಿ=ಆಶ್ಚರ್ಯದ ಗಯೊರುಜೆ=ಕಾರಣ

ಕಾಲಾಗ್ನಿಯಿಂದೆನ್ನ ಹೃತ್ಸರಸಿರುಹ ಬೆಂದು ।
ಕಾಳಾಗು ಡೇವೇಳ್ವೆ ನವರ ಪುರಭವವ ಕೃಷ್ಣನ ಕೃಪೋದಯವನು ॥
ಆಲಲಿತ ಮಣಿ ಖಚಿತ ಮಖಶಾಲೆ ವಿಸ್ಮಯ.ವ ।
ಬಾಲೆಯರ ಚಲ್ವಿಕೆಯ ನರ ಭೀಮ ರೊಲವ ಪಾಂ ।
ಚಾಲೆಯ ಮಹಾಗರ್ವ ಸಂಪತ್ಸವೃದ್ಧಿಯಂ ಕಂಡು ನಾನೊಂದೆ-
ನೆನಲು ॥ ೨೨ ॥

ಶಕುನಿ ಇಂಥ ದುರ್ಬುದ್ಧಿ ಬೇಡವೆಂದು ಹೇಳುವಿಕೆ

ಕೇಳು ಹೇಳಿನ್ನೊಮ್ಮೆ ಪಾಂಡುವರ ಭಾಗ್ಯಮಂ ।
ತಾಳದಲಿ ಮನ ಬೆಂದು ನೊಂದುದೇನಕಟಕಟ ।
ಭೂಲೋಕದೊಳ್ ಚಿತ್ರ ಮಾಯ್ತ್ಯವರಂದು ತವಪಿತನಿಂದ
ಪಡದು ಪುರವ ॥
ಪಾಲಿಸುತ ವೀರ್ಯದಿಂ ವೆಚ್ಚಿರ್ಪರಿದಕ ನೀಂ ।
ಖೂಳ ವೃತ್ತಿಯ ನೆನದು ಬಿಸುಸುಯ್ವದಂಥರ್ಮ ।
ಶೀಲರವ ರೇನರಿವರ್ಯೆ ನೃಪತಿ ದುರ್ಬುದ್ದಿ ಮಾಣೆಂದು ಶಕುನಿ
ನುಡಿಯೇ ॥ ೨೩ ॥

ನೊಂದ ಕೌರುವನು ಭೂಮಿಗೆ ಬೀಳುವಿಕೆ

ಲೇಸಾಯ್ತು ಮಾಂವ ನೀವೆಂದ ನುಡಿ ಘಾಯಕ್ಕೆ ।
ಸಾಸಿವೆಯ ನರದು ತುಂಬಿದೋಲಾಯ್ತು ಬರಿದ್ಯಾಕೆ ।
ಘಾಸಿಗೊಳಿಸುವಿರೆನ್ನ ಮಾನಭಂಗವ ನೀವೆ ಕಣ್ಣಾರೆ ಕಂಡು ಕಂಡು ॥
ಈ ಸುನೀತಿಯ ನುಡಿವುದುಚಿತವೇ ವೆಳ್ಳನಿತು ।
ವಾಸೆ ನಿಮಗಿಲ್ಲಹಿತದುತ್ಸವವ ಕ್ಷಣ ಮಾತ್ರ ।
ನಾಸೈರಿಸೆನುತ ಕಂಬನಿದುಂಬಿ ಭೂಮಿಯೋಳ್ ಕೆಡದು
ಧೊ (ಧು) ಪ್ಪನೆ ಬೀಳಲು ॥ ೨೪ ॥

ಶುಕುನಿ ಕೌರವನ ಸಂತೈಸುವಿಕೆ

ಎತ್ತಿದಂ ಹಾಯೆನುತ ಕುರುಪತಿಯ ಮಸ್ತಕವ ।
ಮುತ್ತುಗಳ ಸರಕಡಿದು ಬೀಳ್ವವೋಲ್ ಚಣ್ಣೆವೆಯ ।
ನೊತ್ತರಿಸಿ ಕಿರುವನಿಯು ಸೂಸುತಿರೆ ಶರಗಿನೊಂದೊರಸಿ
ಬಿಗಿಯಪ್ಪಿ ನೃಪನ ॥

ಉತ್ತಮಾಂಗದ ಮಣಿಯೆ ಕೇಳಹಿತ ಕುಲ ವನವ ।
ಕಿತ್ತು ಬಿಸುಡುವೆ ಹರಿಪ್ರುಸ್ತಮಂ ನಿನಗೀವೆ ।
ತತ್ತಳವ ಗೊಳದಿರಂದಾಶಕುನಿ ಸಂತೈಸಿ ನುಡಿಯೆಲವ
ನಿಂತೆಂದನು ॥ ೨೫ ॥

ಮಾವ ಕೇಳತಿ ಬಲರ್ ಭುವನದೊಳ್ಗಾಂದೀವಿ ।
ಪಾವಮಾನಿಗಳಿವರ ಗೆಲ್ವದಕೆ ದುರ್ಲಭಂ ।
ದೇವ ನರ ನಾಗ ದೈತ್ಯಾವಳಿಗ ಮಾತೆ ಸುತರಂ ಪಾಲಿಪಂತೆ ಬಿಡದೆ ॥
ಜೀವಸಖನಾಗ್ಯೆವರಂ ಸತತ ಪೊರೆವುತಿಹ ।
ಗೋವಿಂದ ನೀನೆಂತುರಿಪುಗಳಂ ಜೈಸುವೆಲೆ
ಸಾವಲ್ಲದೇ ಬ್ಯಾರೆ ತಾನುಳಿವು ಪಾಯಮಂ ಕಾಣೆನೆಂದವ
ನುಯ್ದನು ॥ ೨೬ ॥

ಗೆಲುವೆ ನಾನಂಜದಿರ್ ಪಾಂಡುಸುತ ರೈವರಂ ।
ತಿಳಿದೆ ನವ ರಳಬಳವ ದ್ಯೂತಲೋಲು ಉಪನಾಟ।
ಒಲಿಸಿಕೊಂಬದನರಿಯೆ ನಾಯುಧಿಷ್ಠರ ಧರ್ಮಒದ್ಧಪದ್ಧವನುಡಿಯನು॥
ನೆಲೆಯ ಬಲ್ಲೆನು ನಾಲ್ವರನುಜರವರಗ್ರಜಗೆ ।
ಮಲತು ನಡವವರಲ್ಲ ತನು ಛಾಯದಂತಿರ್ಪ ।
ತಿಳಿಯೊಳಗ ನಾ ಜೂಜುಗಾರರ ಶಿರೋರತ್ನ ಧಿಟ ಪೇಳ್ವೆ
ಕೇಳೆಂದನು ॥ ೨೭ ॥

**ಪಾಂಡವರ ಗೆಲ್ವ ಉಪಾಯ ಶಕುನಿಪೇಳ್ದನೆ**

ಕಪಟ ಹಾಸಂಗಿಗಳ ರಚಿಸಿ ಕುಂತೀತನಯ ।
ನಪರಿಮಿತ ಧನಕೋಶ ರಾಜ್ಯಮಂ ಜೈಸುವೇಂ ।
ನಿಪುಣ ರೆನ್ನಂದದಲಿ ಭುವನತ್ರಯದೊಳಿಲ್ಲ ಛದ್ಮಪಗಡಿ ಯಾಟದಿ ॥
ಅಪಕೀರ್ತಿಗಂಜದಲೆ ನಿಷ್ಕೃಪೆಯೊಳಿರುಜನಪ ।
ಚಪಳ ಭೀಷ್ಮಾದಿಗಳ ವಚನ ಕೈಕೊಳದೇ ನೀ ।

---

ಅಳವಬಳವ = ಸಾಮರ್ಥ್ಯ, ಶಕ್ತಿ ಮಹತ್ವ
ಹಾಸಂಗಿಗಳ=ಪಗಡೆ ಮಣಿ (ಕಾಯಿ) ಛದ್ಮ=ಕಪಟ ಸೋಗು.

ತಪಿಸದತಿ ಧೈರ್ಯದಿಂದಡೆ ಮನೋರಥವ ಸಿದ್ಧಿಮಾಡು
ವೆನೆಂದನು ॥೨೮॥

ಶಕುನಿಗೆ ಕೌರವ ಬಿನ್ನೈಸಿದಂ

ಎನ್ನ ಬಹುಮಾನಾವ ಮಾನಂಗಳೆಲ್ಲವಂ ।
ನಿನ್ನದೈಸಲೆಮಾವ ಸಾಕದಂತಿರಲಿ ಸಂ ।
ಪನ್ನಕೃತ್ರಿಮ ವಿದ್ಯನೀನಾದ ಡೊಳ್ಳಿತ್ತೈ ಗೆಲು ತೀವ್ರ ಶತ್ರುಗಳನು ॥
ಅನ್ನಿಗರಿಗುಸುರದಿರು ವಿದುರಾದಿ ಕುಹಕಿಗಳ ।
ನೆನ್ನದಿರ್ತನ್ನ ಸಖರೆಂದು ನೀನೀಗಳು ।
ತ್ಪನ್ನ ಮಂತ್ರವನರುಹು ಬೊಪ್ಪಗೇಕಾಂತಲಿ ಹೋಗೆಂದನಾ
ಶಕುನಿಗೆ ॥೨೯॥

ನೀನರುಹು ನಿಮ್ಮಯ್ಯ ನಿದ್ದೆಡೆಗೆ ಪೋಗಿಸು ।
ಮ್ಮಾನದಿಂದಾತನಿರುತಿರ್ದ ಸಮಯವ ನೋಡಿ ।
ಮಾನನಿಧಿ ಕೇಳವರೊಡಂಬಟ್ಟು ಪಾಂಡುವರ ಕರೆಸಿ ಕೊಟ್ಟರೆ
ದ್ಯೂತದಿ ॥
ನಾನೀವೆ ಗೆಲ್ದಹಿತ ಸಂಪದವ ನೆನೆಮಾವ ॥
ನೀನೆ ಜನಕಂಗೆನ್ನ ದುಗುಡವುಂ ಹೇಳಿದರೆ ।
ತಾನೆ ಕರೆಸುವನಲ್ಲಿ ಗೈತಂದುಸುರುವೆನಾ ತಳುವ್ಯಾಕೆ
ನಡೆಯೆಂದನು ॥೩೦॥

ಶಕುನಿ ಧೃತರಾಷ್ಟ್ರಗೆ ಹೇಳಿದ್ದು

ಅಹುದು ನೀನೆಂದದಂ ಪೇಳ್ವೆನಾನಿದನೆನುತ ।
ಕುಹಕಮತಿ ಸೌಬಲಂ ನಡೆತಂದು ಧೃತರಾಷ್ಟ್ರ ।
ಮಹಿಳೆ ಗಾಂಧಾರಿ ಸಹಿತೇಕಾಂತ ಮಂದಿರದೊಳಿರ್ದುದಂ
ಕಂಡು ನಮಿಸಿ ॥
ಮಹಿರಮಣ ಕೇಳ್ ನಿನ್ನ ಮೋಹದ ಕುಮಾರಕಂ ।
ಬಹು ಚಿಂತೆ ತಾಳ್ದುದಂ ನೀವರಿಯರೇನಕಟ ।

---

ದುಗುಡ=ದುಃಖ ಬೊಪ್ಪ=ಅಪ್ಪತಂದೆ

ವಿಹಿತವೇ ಹಿರಿಯರ್ಗೆ ಬೆಸಗೊಳ್ಳದಿರಬಹುದೆ ಶಿಲೆ ಹೃದಯ
ದವರೆಂದನು || ೩೧ ||

ಧೃತರಾಷ್ಟ್ರನು ಏನಾಯಿತೆನೆ ಶಕುನಿ ನೀನೆ ಕೌರವನನ್ನು ಕರೆಸೆಂದೆನೆ

ಏನು ಸೌಬಲಮಗಗೆ ೧ದುಮ್ಮಾನ ಸಂಜನಿಸ |
ಲೇನು ಕಾರಣ ವಾರದೆಶೆಯಿಂದ ಭಯವಾದು |
ದೇನ ಸಾಧ್ಯದ ಬಯಕೆ ಬಂದೆಡರದೇನು ಮೇಣ್ ಯಾತರೋಳ್
ಅಭಿಲಾಷೆಯೊ ||
ನ್ಯೂನವಾಯ್ತೇನು ತನ್ನೈಶ್ವರ್ಯಕಭಿಮಾನ |
ಕೇನು ಭಂಗವು ವಂಚಿಸದೆ ಪೇಳೆನಲ್ಕೆ ನಿಜ |
ಸೂನಂ ನೀ ಕರಸಿ ಕೇಳ್ವೆದೆನೆ ದೂತರಂ ಕಳುಹಲವ ನೈತಂದನು ||೩೨||

ಕೌರವಂ ಬಂದು ತಂದೆಗೆ ಬಿನ್ನೈಸುವಿಕೆ

ಬಂದು ಧೃತರಾಷ್ಟ್ರನಡಿಗೆರಗೆ ಸುತ ಸ್ನೇಹದಿಂ |
ಕಂದ (ತಂದೆ) ಬಾ ಎನ್ನಾನೆ ಕುರುರಾಯ ಬಾ ಯೆನುತ |
ದ್ವಂದಕರಕಮಲದಿಂ ಪಿಡಿದೆತ್ತಿ ತಕ್ಕೈಸಿ ನ್ಯಾವರಸಿ ಮಗನೆ ನಿನಗೆ ||
ಸಂದಿಸಿದ ಚಿಂತೆ ಭಯವೇನು ನೀ ನಿಳಿಯೊಳಗೆ |
ಮಂದಿರವ ಸಾರ್ದು ಪೊರಮಡದೆ ವಾಲಗ ಗೊಡದ |
೨ದಂದುಗವದೇನೆಂದು ೩ಬೆಸಗೊಂಡಡಾ ಕುಮತಿ ಬಿಸಸುಯ್ಯು
ತಿನಿತೆಂದನು || ೩೩ ||

ಹೇಳಲಮ್ಮೆನು ಜೀಯ ದುಃಖಗಳ ನೀ ಧರ್ಮ |
ಜಾಲದೋಳ್ ಶಿಲುಕಿರ್ದ ಭೋಗ ನಿಷ್ಪೃಹರೆನ್ನ |
ಖೂಳನೆಂಬಿರಿ ಕಪಟ ಹೃದಯುದವನೆಂಬಿರಿ ಮಹಾದುರುಳನೆಂತೆಂಬಿರಿ ||
೪ಸಾಲಭಂಜಿಕೆಯ ತೆರನಾತ್ತೆಮ್ಮ ಬಾಳುವೆವ (ಮ) |
ನಾಲಯವೆಗತಿ ತಮ್ಮ ನೋರ್ವರ್ಗೆ ಸಾಕಿನ್ನು |
ಕಾಳಕೂಟವ ನುಂಗಿ ಜೀವವಂ ತೊರೆವೆನೆಂದಾ ಸುಯೋಧನ
ನುಡಿದನು || ೩೪ ||

---

೧ದುಮ್ಮಾನ=ಖೇದ, ಮನಸಿನ ಸಂಕಟ ೨ದಂದುಗ=ತೊಂದರೆ ಕ್ಲೇಶ
೩ ಬೆಸಗೊಂಡ=ಕೇಳಲು, ಪ್ರಶ್ನಿಸಲು, ೪ ಸಾಲಭಂಜಿಕೆ=ಗೊಂಬೆಯಂತೆ

ಈಸು ದಾರಣ ಕಷ್ಟ ನಿಷ್ಠೂರ ನಿನಗ್ಯಾಕೆ ।
ಹವಾಸೆ ಏನದು ಮುಚ್ಚುಮರೆ ಯಾಕೆ ಕಂದಸುವಿ ।
ಲಾಸ ಕಾವದು ಕೊರತೆ ತನ್ನಾಣೆ ಪೇಳೆಂದು ಒಸ್ತೈಪಿಟ್ಟು
ಬೆಸಗೊಳಲ್ಕೆ ॥

ಕೌರವನು ತನಗಾದ ಮಾನಭಂಗ ಪೇಳ್ವನು

ಕ್ಲೇಶವೇನುಸುರ್ವೆನ್ಲೈ ತಾತ ಪಾಂಡವ ರ್ವೈವ ।
ರಾಸು ಸಂಪದವ ಕಂಡೆನ್ನ ತನು ಜರ್ಝರಿಸಿ ।
ಘಾಸಿಯಾದದು ಮಾನಭಂಗದಿಂದವನಿಯೊಳು ಬದುಕುವದು
ಸುಡಲೆಂದನು ॥ ೩೫ ॥

ಮಗನೆ ನಿನಗಭಿಮಾನ ಭಂಗ ವಾರಿಂದಾದ ।
ಬಗೆಯು ಪೇಳೆನೆ ಬಪ್ಪ ಒಹಗರಣವ ವಿಸ್ತರಿಪೆ ।
ಜಗದೊಳತಿ ಚಿತ್ರ ತರಮಯ ನಿರ್ಮಿತದ ಸಭೆಯ ನೀವರಿ
ಯೆರೆಮಜ ತನ್ನ ॥

ಮಿಗಿಲಾದ ವಿಭವ ಸೌರಂಭವುಂ ತೋರೆನ್ನ ।
ಬೆಗಡುಗೊಳ್ಳಿರಲಾಗ ಕರಸಲ್ಕೆ ರವಿಯಂತೆ ।
ಝುಗಝುಗಿಪ ವಿವಿಧಿರತ್ನದ ತೇಜ ಪುಂಜದಿಂ ರಂಜಿಸಿತು-
ಮುಖಮಂಟಪಾ ॥ ೩೬ ॥

ನೀಲ ಮಾಣಿಕ ವಜ್ರ ಸ್ಫಟಿಕ ಮಣಿಕಾಂತಿಯಿಂ ।
ಹೇಳಲೇನೆಣ್ದೆಶೆಯೊಳನವರತ ಕತ್ತಲೆಯು ।
ಬಾಲಾತಪ್ಯೆಳದಿಂಗಳಿರ್ಪಂತೆ ಕಾಣಿಸಿತು ಪಗಲಿರಳು ತಿಳಿಯದೆನ್ನ ॥
ಆಲಿಗಚ್ಚರಿಯಾದುದಾಸ್ಥಳದಿ ಸುರನದಿಯು ।
ಕಾಳಿಂದಿಗಳ ಪ್ರವಾಹಂ ಪರಿವವೋಲ್ ರತ್ನ ।
ಜಾಲ ಬಂಧುರದ ಬೆಳಗಿನ ಲಹರಿ ಹರಿ ಹರಿದು ಗತಿಗೆಡಿಸಿ-
ತಾಕ್ಷಣದೊಳು ॥ ೩೭ ॥

ಹೊಕ್ಕ ಸಾಲಿನ ಹೊಳವ ಮಣಿಗಣದ ಲರುಚರಕ್ಷಿ ।

---

ಹವಾಸೆ= ಮಾತು ಛಲ. ಒಸ್ತೈಪಿಟ್ಟು (ಹ. ಕ್ರೀ.) ಸಮಾಧಾನಮಾಡಿ.
ಒಹಗರಣವ=ಪ್ರಕರಣ. ಲ ರುಚಿ=ಪ್ರಭೆಕಾಂತಿ

ಕುಕ್ಕಿದವು ಕಣ್ಣೆರೆಯ ದಿಕ್ಕರಿಯು ತೆರನಾದು ।
ದಿಕ್ಕೆಲನ ನೋಡಿದಡೆ ಪಚ್ಚ ವೈಢೂರ್ಯಗೋಮೇಧಿಕದನೆಲಗಳಿಂದ ॥
ಮಿಕ್ಕವರುಣ ಛವಿಯು ಸ್ತಂಭ ೯ಕುಡ್ಯಗಳ ನಡು ।
ವಿಕ್ಕಿರ್ದ ಮೌಕ್ತಿಕದ ೧೦ಸ್ತಬಕ ಮುಕುರಂಗಳಿಂ ।
ದುಕ್ಕುವ ಮಹಾಕಾಂತಿ ಭ್ರಾಂತೆಗೊಳಿಸಿತು ತಾತ-
ವರ್ಣಿಸುವೆ ಕೇಳೆಂದನು ॥ ೩೮ ॥

ಸ್ಥಳವೆ ಜಲರೂಪದಿಂದಿರುತಿರ್ದುದಾಜಲಂ ।
ನೆಲನವಾಡಿನೊಳೆನ್ನಕಣ್ಗೆ ಗೋಚರಿಸುತಿರೆ ।
೧೧ ಹೊಲಬುಕಾಣದೆ ಮೆಲ್ಲ ಮೆಲ್ಲನೈತರುತಿರಲ್ ಮುಂದೆ-
ಬಳಿಕೊಂದೆಡೆಯೊಳು ॥
ಪೊಳೆವ ಹರಿನೀಲ ಮಣಿ ಸ್ಫಟಿಕ ಮಹಿಯುಂ ಕಂಡು ।
ತಿಳಿದೆ ನಾ ಮನದೊಳಗೆ ಧಿಟ ಸರೋವರವೆಂದು ।
ಸಲೆನಿಂದು ಮುಂಜರಗವೆತ್ತಿ ನಡೆಗೊಳೆ ನೋಡಿ ನಕ್ಕದು ಸಮಸ್ತ
ಜನರು ॥ ೩೯ ॥

ಅಂದು ದ್ರೌಪದಿಯು ಮೊದಲಾದ ನೆರೆದಿರ್ದ ಸತಿ-
ವೃಂದ ಕೈಗಳ ಹೊಯ್ದು ನಗುತಿರ್ದದಂ ಕಂಡು ।
ನೊಂದು ನಾ ತಲೆಬಾಗಿ ಲಜ್ಜೆಯಿಂದೀ ಭ್ರಾಂತಿ ಮಣಿಲಹರಿ-
ದೆಶೆಯಿಂದಲಿ ॥
ಸಂದಿಸಿದುದೆನಗೆನುತ ನಡದು ಬರೆ ಕಾಸಾರ ।
ಮುಂದೆ ಕಾಣಿಸಲಳಮಳ ಸ್ಫಟಿಕ ಸ್ಥಳವಹುದೆಂದು ।
ಹಿಂದಿನಂದದಿ ಬಗೆಯೆ ನೀರಾಯ್ತು ಬಿದ್ದೆ (ರ್ದೆ) ನೈ ನಾನಭಿ-
ಜ್ಞದಲಿ ನೆನದು ॥ ೪೦ ॥

ಮತ್ತೆ ಘೋಳೆಂದು ಬಿರುನಗೆಯ ದರಿದರಖಿಳ ।
ಮತ್ತ ಗಾಮಿನಿಯರಾ ಭೀಮಾರ್ಜುನಾದಿ ನೃಪ ।

---

೯ ಕುಡ್ಯ=ಗೋಡೆ ೧೦ ಸ್ತಬಕ=ಹೂವಿನಗೊಂಚಲು. ೧೧ಹೊಲಬು=ವಿಚಾರ ಸಂದರ್ಭ ಗುರುತು ಮಾರ್ಗ

ಮೊತ್ತ ತಮುತಮುಗೆ ಪರಿಹಾಸಮಂ ಮಾಡುತಿರೆ
ಬಳಿಕ ಧರ್ಮಜ ಕಾಣುತ ॥
ಎತ್ತಿಸಿದ ಕೊಳದಿಂದ ತಡಿಗಡರಿ ಲೆನಗಿತ್ತ (ತಟಗೆಯೇರಲ್ಕೆ)
ನುತ್ತಮ ದೇವಾಂಗಮಂ ತೊಡಚಿದೇಂ ರಿಪುಗಳಿಂ ।
ಬತ್ತಿತೆನ್ನಭಿಮಾನ ಶರಧಿ ಕೇಳ್ ಜೀಯಾ ಜೀವಿಸುವೆನೆಂತೀ
ಧರೆಯೊಳು ॥ ೪೧ ॥
ಧಿಕು ಜನ್ಮವೆಂದೆನುತ ಮರಳಿ ಹಿಂದಕೆ ನರಿಯೆ ।
ಶಕುನಿ ಕಂಡೆನ್ನ ನಾನಾ ತೆರದಿ ಸಂತೈಸಿ ।
ಯುಕುತಿಯಿಂ ಕರತಂದು ಮುಖಶಾಲೆ ಗೈದಿಸಿದನೇವೇಳ್ವೆ
ನಹಿತ ವಿಭವ ॥
ಸಕಲ ಮುನಿ ಭೂಸುರರ್ ದಕ್ಷಣೆಗಳಿಂದಣೆದು ।
ಪ್ರಕಟಿಸುತ ಸತ್ರಮಂ ಪಾಂಡುವರ ಕೊಂಡಾಡೆ ।
ವಿಕಳಗೊಂಡೆತಿ ಬಿರಿದುದಾ ಮಾನಭಂಗದಿಂ ನೊಂದೆ ನಾ-
ಚಿಂತಿಸುವೆನು ॥ ೪೨ ॥
ಆಯುಧಿಷ್ಠರ ಸಹಿತ ಜನಕ ಕೇಳ್ ಗಜಪುರಿಗೆ ।
ರಾಯನಾಗಿರುತಿಹದು ಸಾಕದಂತಿರಲೆನ್ನ ।
ಕಾಯಮಂ ವನವಾಸ ಕೈದಿಸುವೆ ನೇಮುವಂ ಕೊಟ್ಟು ಕಳು-
ಹುವದು ಬರಿದೆ ॥
ಆಯಾಸಗೊಳಿಸುತ್ತ ಸುಮ್ಮನಿರುತಿರ್ಪುದಂ ।
ನ್ಯಾಯವೇ ನಿಮಗಕಟದೇಹವುಳ್ಳನಕ ನಾಂ ।
ದಾಯಾದ್ಯರುತ್ಸವವನೆಂತು ಸೈರಿಪೆನೆಂದಾ ಸುಯೋಧನನುಡಿದನು॥೪೩॥

**ಧೃತರಾಷ್ಟ್ರನು ದುರ್ಯೋಧನನ್ನು ಧಿಕ್ಕರಿಸುವಿಕೆ**

ತಾಪಸೋತ್ತಮ ರಾಲಿಸೀ ಪರಿಯೋಳಳ್ವ ಕುರು ।
ಭೂಪತಿಯ ವಚನಮಂ ಕೇಳ್ದು ಧೃತರಾಷ್ಟ್ರ ಸಂ ।

---

ಮಣಿಲಹರೀ=ಮಣಿಗಳ ಕಾಂತಿ ಕೊಳ=ಸರೋವರ ತಡಿಗಡರೆ=ತಟಕ್ಕೆ ದಂಡಿಗೆ ಮುಟ್ಟಲು ೩ ದೇವತಾ ಯೋಗ್ಯವಾದ ಉತ್ತುಮ ಉತ್ತುವ ವಸ್ತ್ರ ಉಟ್ಟುಕೊಂಡು

ತಾಪದಿಂ ಬಿಸುಸುಯ್ದು ಮರುಗುತೆಲೆ ಮಗನೆ ತವಬುದ್ಧಿ
ಪಲ್ಲಟವಾಯಿತ್ತೆ ||
ಪಾಪಿ ಕುಹಕಿಗಳ ಕೇಡಿಗರ ದುಸ್ಸಂಗದಿಂ |
ದಾ ಪಾಂಡುವರ ಮೇಲೆ ಮುನಿವರೇ ಧರ್ಮಜ ಮ |
ಹಾ ಪುರಷರಾಜಋಷಿ೧ಸತ್ಯಸಂಧಂ ಧರ್ಮಶೀಲನೋಳ್ಕೃತ್ಸರಿಪರೆ||೪೪||
ದೂರವೇನ್ನೈವರಾ ಪಾಂಡುವಿನೊಳೆನ್ನೊಳಗೆ |
ತೋರಿಪರೆ ಭೇದವಂ ನಮ್ಮ ಸಾಮ್ರಾಜ್ಯ (೦ಬಾ) ಜಕ್ಕೆ |
ಕಾರಣರ್ ವಿಖ್ಯಾತ ರತಿಬಲಾನ್ವಿತರಹರ್ ಹಸುಗೆ ಇಂದೆನ್ನಿಂದಲಿ ||
ಧಾರುಣಿಯ ವಿಡಿದು (ಪಡೆದು) ಸುಖದಿಂ ಬಾಳ್ವರಿದಕೆ |
ನೀಕ್ರೂರ ಮನದಿಂದ ಸೂಯುವ ಬಟ್ಟರಪ ಕೀರ್ತಿ |
ಬಾರದಿಹುದೇಕಂದ ನಿಂದ್ಯಗೋಳಗಾಗದಿರು ದುರುಳತನ
ಬಿಡುಯೆಂದನು || ೪೫ ||

ಪುನಃ ದುರ್ಯೋಧನನಳುತ ಬಿನ್ನೈಸಿ ಹೊರಡುವ

ಮಾತು ಸೊಗಸಾಗದೇ ನಿಮ್ಮ ಕರ್ನಕೆ ವೃಧಾ |
ಯಾತಕೆನ್ನಂ ಕರೆಸಿ ದುರುಳ ನೆನಿಸಿದಿರಿ ತನು |
ಜಾತರವರೈವರೇ ಧಿಟ ಹಸ್ತಿನಾವತಿಯು ಸಕಲ ಮೇದಿನಿತಳವನು ||
ತಾತ ನೀ ವಾಳ್ವದೀ ದೇವಿ ಗಾಂಧಾರಿ ಸಹ |
ಪ್ರೀತಿಯಿಂ ಧರ್ಮಸುತ ಧರ್ಮಜ್ಞ ನಾಧರ್ಮ |
ಘಾತಕನೆ ಲೇನೆನುತ ಲೆದ್ದು ಹೊರವಂಟನಾ ಕುಮತಿ
ಕೋಪದೊಳಿರುವುತಾ || ೪೬ ||

ಧೃತರಾಷ್ಟ್ರನು ಚಿಂತಾಕ್ರಾಂತನಾದುದು

ಕರಗಿತಂತಃಕರುಣ ಘನಸುತ ಸ್ನೇಹದಿಂ |
ಕರಳುಕದಡಿತು ಗಾಂಧಾರಿ ಯೊಡಲೊಳಗೆ ಮಮ |
ಕರದಿಂದ ಗದ್ಗಗದ ಸ್ವರದಿ ಕಂಬನಿಗರಿಯೆ ಧೃತರಾಷ್ಟ್ರ ಭೂಪನೆದೆಯು||
ಬಿರಿದು ಜರ್ಝುರಿತ ವಾದುದು ಮಗನಮಾತೆಂಬ |

---

೧ಸತ್ಯಸಂಧ = ಸತ್ಯವಂತ ೨ ಕರಳುಕದಡು=ಅಂತಃಕರುಣ ಗಲಿಬಿಲಿಯಾಗು ಕಲಕಾಗು.

ಬಿರಿದಿನಾಯುಧ ಹತಿಗಳಿಂದ ವ್ಯೆಮರೆದು ಮಿಗೆ ।
ಬಿರಿಸಿನಗ್ಗದ ಶೋಕಶರಧಿಯೊಳ್ಮುಳುಗಿದಂ ಕ್ಷಣಮಾತ್ರ
ಮೌನದಿಂದ ॥೪೭॥

**ಧೃತರಾಷ್ಟ್ರನು ಪಾಂಡುವರ ಸಂಪತ್ತು ಹರಣಕ್ಕೇನು ಉಪಾಯವೆಂದ**

ಕಲಿಯಿಂದ ಬದ್ಧನಾಗೆಂಧನೃಪ ಸತಿಗೆಂದ ।
ನೆಲಗೆ ಕರಿಯ ಪಾಪಿ ಕ್ಷಿಪ್ರದಿಂ ದೆದ್ದಿಂದು ।
ಕುಲಕುಠಾರನ ನಿನ್ನ ಮಗನ ದೆಶೆಯಿಂದ ಪಾಂಡುವರೆಮಗಹಿತ
ರಾದರು ॥

ತಿಳುಹಿ ತಾಯೆನಲ್ಯಾಕೆ ಸೌಬಲಂ ಗರುಹಿದಡೆ ।
ಬಳಿಕವಂ ತಡದಾ ಸುಯೋಧನನ ಕರತಂದು ।
ನಿಲಿಸಿದಂ ಪಿತನ ಸನ್ನಿಧಿಯೊಳಾ ಧೃತರಾಷ್ಟ್ರ ತನುಭವಂಗಿಂತೆಂ
ದನು ॥ ೪೮ ॥

ಏನುಪಾಯವ ಚಿಂತಿಸಿರ್ಪೆ ಹೇಳ್ಪೆ ಕುಂತಿ ।
ಸೂನುಗಳ ಸರ್ವ ಸೌಭಾಗ್ಯರಾಜ್ಯಪಹಾರ ।
ಕೇನು ಕೃತ್ರಿಮ ವಿದ್ಯ ನಿರ್ಮಿಸಿದೆ ಬಲವಂತರವರನಂ ಗೆಲ್ವದಕ್ಕೆ ॥
ದಾನವೋ ಸಾಮವೋ ಮೇಲ್ ಭೇದ ದಂಡವೋ ।
ಏನು ನಿಶ್ಚೈಸಿರ್ಪೆ ಕಾರ್ಯಮಂ ಮನದೊಳಗೆ ।
ನೀ ನಿಧಾನಪ ಮಾಜದಂಜದಲೆ ನುಡಿ ತಾತ ಕೈಕೊಂಬೆ
ನಾನೆಂದನು ॥ ೪೯ ॥

ತಿಂದ ವಿಷವಕ್ಕಿದವು ಮಾಯದಿಂ ಮಡುವಿನೊಳ ।
ಗಂದು ಬಿಸುಟಿರೆ ಮುಳುಗಿ ಸುಖದಿಂದ ಜೀವಿಸುತ ।
ಬಂದು ಹೊರವಂಟರಾ ಸುಡುವಲಾಕ್ಷಭವನ ಭಂಗದೋಳ್
ಲೋಕವರಿಯೆ ॥

ಒಂದಕ್ಕೆ ವಶವಾಗದಂದ ನಿಬರ್ರೈದಿದರ್ ।

---

ದಾನ = ಲಂಚಕೊಡುವಿಕೆ ದುಂದುಗ = ತೊಂದರೆ, ಕ್ಲೇಶ
ಸಾಮ = ಸವಿಮಾತಾಡಿ ಒಲಿಸಿಕೊಳ್ಳುವಿಕೆ
ಭೇದ = ಕೂಡಿದ್ದು ಅಗಲಿಸುವಿಕೆ–ಒಂದು ಉಪಾಯ ದಂಡ = ತಪ್ಪು
ಕಾಣಿಕೆ ಜಗಳ ಯುದ್ಧ (ಚತುರೋಪಾಯ) ಕಜ್ಜ = ಕಾರ್ಯ ಕೆಲಸ

ಕಂದಕೇಳೀ ತೆರದ ಕಪಟಕೃತ್ಯಗಳಿಂದ ।
ದಂದುಗಕ್ಕೊಳಗಾಗದಾ ಪಾಂಡುಸುತ ರುಳಿದರಿನ್ನೇನು ಹದ
ನೆಂದನು ॥೫೦॥

ಕೌರವನು ಕೃತ್ರಿಮದ ಜೂಜಿನಿಂ ಪಾಂಡವರ ಸೋಲಿಸುವೆನೆಂದನೆ.

ಚಿತ್ತವಿಸಿ ಕೇಳಾದಡೆಲೆ ಭೂಪ ಪಾಂಡುವರ ।
ಕೃತ್ರಿಮದ ಜೂಜಿನಿಂ ಸೋಲಿಸುವೆ ನಾನವರ ।
ವಿತ್ತರಾಜ್ಯವ ಗೆಲ್ವೆಧರ್ಮಜನ ಶೀಘ್ರದಿಂ ಕರೆಸಿಕೊಟ್ಟರೆ ಧರೆಯೊಳು ॥
ಉತ್ತರೋತ್ತರ ಸಿದ್ಧಿಯುಪ್ಪು ದೆನಗಭಿಲಾಷೆ ।
ಮತ್ತೊಂದರೊಳಗಿಲ್ಲವೆನೆ ಮಗನೆ ಸಾಧನಂ ।
ಉತ್ತಮ ವಿದಹುದು ಕ್ಷತ್ತ್ರನಮನಕೆ ಸೊಗಸಾದಡೀ ಕಜ್ಜ
ಮಾಳ್ಪೆನೆಂದು ॥೫೧॥

ಕೌರವನು ವಿದುರನನ್ನು ಕಳುಹಿಸಬೇಡೆಂದ

ಖೂಳದಲಿ ಸತ್ಕಥಾ ಧರ್ಮ ಪ್ರಸಂಗ ಕಿವಿ ।
ಗೇಳದವನಲಿ ಮಂತ್ರಬೀಜ ಸಂಬೋಧನಿಗ ।
ಳಾಲಿ ಇಲ್ಲದವಂಗ ರೂಪಗಳ ಚಲ್ವಿಕೆಯ ಕ್ಲೀಬಂಗೆ ಸ್ಮರಶಾಸ್ತ್ರವಾ ॥
ನಾಲಿಗಿಲ್ಲದನ ಕೂಡಾಲೋಚನೆಯು ಶತ್ರು ।
ಜಾಲದೊಳ್ಗಾಪ್ಯಮಂ ಪೇಳ್ವವೋಲ್ ವಿದುರನಂ ।
ಕಳುಹಿಸಿದರೀ ಪ್ರಯೋಜನ ಸಾಗಲೀವನೇ ತಾತ-
ಮರುಳಾದಿರೆಂದ ॥ ೫೨ ॥

ಆದಡೆಲೆ ಮಗನೆ ಕೇಳ್ ನಮ್ಮ ಬಂಧುಗಳೊಳಗೆ ।
ಸಾಧುಕೋವಿದ ನೀತಿವಂತ ನಿಷ್ಕಪಟಹಿತ ।
ಬೋಧ ಧರ್ಮಜ್ಞ ನೀವಿದುರನಲ್ಲದೆ ತಿಳಿಯಲಾರುಂಟು
ನೀನರಿಯದೆ ॥

ಭೇದಮಂ ಬಗೆದವನ ಹೇಳನಂ ಗೈದಪರೆ ।
ವೇದ ಸಮ್ಮತ ಮಾತಿನಾತ ನಿಹ ಪರಬಲ್ಲ ।
ಸಾದರದಿ ಪಾಂಡುವರ ಕರೆಯಲಟ್ಟುವೆ ಹರಿಪ್ರಸ್ಥಪುರವರಕೆಂದನು॥೫೩॥

ಅರಸ ಕೇಳೀನಾದಡಂ ವಿದುರಗೀಕಾರ್ಯ ।
ವರುಹಿದರೆ ಮುರಿವನವ ಕುಹಕಿ ನಿಶ್ಚಯವೆಮ್ಮ ।

ಸಿರಿಯ ಸೈರಿಸಲರಿಯ ಪಾಂಡುವರ ಬೆಳವಿಗಿಯನೇ
ನಿತ್ಯ ಹಾರೈಸುವ ||
ನಿರುತ ನಿಮ್ಮೆಡೆಯೊಳಿಹುದವನು ತನು ಮಾತ್ರ ವಸು |
ವಿರುತಿರ್ಪ ದೈವರ ಸಮೀಪದೋಳ್ ನಾಕಿನ್ನು |
ಕಿರಿಯ ತಮ್ಮನ ಮಕ್ಕಳಿಗೆ ಹಸ್ತಿನಾವತಿಯ ಕೊಡಿ–
ಯೆಂದನಾದುರ್ಮತಿ || ೫೪ ||
ಕಳವಳಿಸದಿರ್ತರುಳ ನಮ್ಮವನೆಲ್ಲೈ ವಿದುರ |
ಖಳನೆ ಬಿಡುಕ್ಷುದ್ರಬುದ್ಧಿಯ ಕುಂತಿ ಸುತರೆಡಿಗೆ |
ತಿಳುಹಿ ಕಳುಹುವೆನೀತನಂ ಶಮನ ತನಯನೆಮ್ಮಾಜ್ಞ
ಯಂ ಮೀರವವನು ||
ಉಳಿದನುಜರಗ್ರಜರೊಳೆರವಿಲ್ಲವಿವನು ನಿ |
ರ್ಮಳದ ಮನದವನೆಂದು ನಂಬಿ ಸಂತೋಷಮಂ |
ತಳೆಗಿಲ್ಲಿ ಗೈತಪ್ಪರ್ದೈವರಿದು ಸತ್ಯ ನಿನಗ್ಯಾಕೆ ಸಂಶಯ
ವೆಂದನು || ೫೫ ||

**ಧೃತರಾಷ್ಟ್ರ ಚಿಂತಾಕುಲನಾಗುವಿಕೆ**

ಭೂಕಾಂತಲೇಸು ನೀವೆ (ನಿನ್ನೆ) ಂತಾಡಂ ದಯದಿ |
ಸಾಕುಪಾಂಡವ ರೈವರಂಕರಸಿ ಕೊಟ್ಟರೇ |
ಸಾಕು ತನಗಾಪೇಕ್ಷ ವಂದಿಹುದೆಲೇ ಬಿಡದೆ ಪಾಂಚಾಲ
ನಂದನೆಯನು ||
ನೂಕಿಮುಂದೆಲೆ ಪಿಡಿದು ಮಾನಭಂಗವಮಾಡು |
ತಾಕೆ (ದಾಕೆ)ಯಂ ತೊತ್ತಿನ ಸಮಾಜದೋಳ್ ನಿಲಿಸುತ ಪಿ |
ಶೋಕನಹೆ ನಾದಿವಸಗಳಲಿ ಕೃತ ಕೃತ್ಯನಾದೆಂದು ಕೌರವ
ನುಡಿದನು ||೫೬||
ಹೋಗುನಿಂನ್ವಾಂಛಿತವ (ಪೋಗುನಿನ್ನೀಪ್ಸಿತವ) ಸಿದ್ಧಿಯಂ
ಮಾಳ್ಪೆನೆನು |

---

ನೀತನಂಶಮಸುತನಯ=ಈತನಂಯಮಸುತನಯ=ಧರ್ಮ ಸಂತೋಷತಳೆ=
ಆನಂದವನ್ನು ತಾಳಿ ಹೊಂದಿ

ತಾಗ ಧೃತರಾಷ್ಟ್ರ ಮಗನಂ ಮನೆಗೆ ಕಳುಹಿಸಿ ತ ।
ಡಾಗಮದ ಯತ್ನಯುಕ ಚಿಂತಾಬ್ಧಿಯೊಳ್ಮುಳುಗುತಾ
ಲೋಚಿಸಿದ ಸತಿಯೊಳು ॥
ಈಗಳಿನ ಸುಖಕೆಳಸಿ ಬಲವದ್ವಿರೋಧ ದು ।
ದ್ಯೋಗಮಂ ಕೈಕೊಂಡ ಮುಂದೆ ನಿಜಕುಲನಾಶ ।
ನಾಗುವದು ಸುತನರಿಯ ನಿದಕೇನು ಹದನ ಗಾಂಧಾರಿನೀ
ಹೇಳೆಂದನು ॥೫೭॥
ಅವರು ಸುಚರಿತ್ರರೀ ಘಾತಕವ ನರಿಯ ರೆ ।
ಮ್ಮವನ ದುಶ್ಚೇಷ್ಟೆಯಂ ಕಂಡೆಲಾ ಕರೆಸಲ್ಕೆ ।
ತವಕದಿಂ ನಿಲ್ಲದೈತಪ್ಪ ರಾ ಜಾಲದೋಳ್ ಮೃಗಜಾಲ ಬೀಳುವಂತೆ ॥
ಭುವನದೊಳಗ ಪಕೀರ್ತಿ ಬಹುದೆ ಮಗ ಪಾಪಿಷ್ಟ ।
ತವಕುಮಾರನ ಕುಹಕ ಲೋಕವರಿಯದು ತನ್ನ ।
ಕವಲು ಮನವಲ್ಲದೈವರ್ ನೆಚ್ಚಿಕೊಂಡಿರ್ಪ ರವಗ್ರೈವೆ
ನೆಂದಳಲಿದಾ ॥೫೮॥
ಮುರಿದೆನೆ ನಾನೀ ಪ್ರಯೋಜನವ ಮುನಿದಿಂದು ।
ಹೊರಗಹರು ನೂರ್ವರಿದ ವಹಿಸುವೆನು ಪಾಂಡುವರ್ ।
ತರಿದು ಬಿಸುಟುವರು ಕೌರವ ಶತಕವಂ ಮುರಿದು ಗಜವ ಹರಿ
(ಗಜಹರಿಯು) ಸೀಳುವಂತೆ ॥
ಹೊರಗೊಳಗೆ ನಿಶ್ಚೈಸಿ ನೋಡಿದಡೆ ಹದನವಿದೆ ।
ದುರುಳ ಮಗನಿಗೆ ಬುದ್ಧಿ ವಿಪರೀತ ವಾಯ್ತೆನುತ ।
ಮುರುಗಿ ಬಿಸುಸುಯ್ದನಾ ಧೃತರಾಷ್ಟ್ರ ಬಳಿಕ ಗಾಂಧಾರಿಪತಿ
ಗಿಂತೆಂದಳು ॥೫೯॥

ಗಾಂಧಾರಿ ಪಾಂಡವರನ್ನು ಕರೆಸಲು ಆಗ್ರಹ ಮಾಡಿದ್ದು

ಯಾಕೆ ನಿಮಗೀ ಚಿಂತೆ ಇಂದೆರಡು ದುಷ್ಕಾರ್ಯ ।
ಸೋಕಿದವು ಕಾಲವಶದಿಂದೀಗ ಮನದೋಳ್ ವಿ ।
ವೇಕ ವಿಷಯುದೊಳೊಂದು (ದಲೊಂದು) ಮತವನಂಗೀಕರಿಸಿ
ಧಿಟವಾಗ ಸಂಚಲಿಸದೆ ॥

ಈ ಕುಮಾರರರ ನೂರ್ವರಂ ಸಲಹಿ ಕೈವಿಡಿವೊ ।
ತಾ ಕುಂತಿ ತನುಭವರ ಬಿಡಿ ಮೇಣು ನಿಜ ಸುತರ ।
ನೂಕಿ ಪಾಂಡುವರ ಪತಿಕರಿಸಿ ತೋಷಿಸಿ ಬರಿದೆ ಹಲು
ಬಲೇನಹುದೆಂದಳು ॥೬೦॥

ರಾಣಿ ಕೇಳೇನಾದುದಾಗಲಿನ್ನುಳಿದ ವಂ ।
ಕಾಣೆ ನಿನ್ನಾತ್ಮಜರ ವಾಸಿಗಳ ವಿಖ್ಯಾತಿ ।
ಕ್ಷೋಣಿಯೋಳ್ ಮೆ (ಮ) ರೆಯಲಾ ಧರ್ಮಜನ ಕರೆಸುವೇಂ
ಸ್ವೈರಿಸೆನುತಾಗ ನೃಪನು ॥

ಸಭಾ ಮಂಟಪ ರಚನೆ

ಜಾಣತನದಿಂದಧಿಕರೆಂದೆನಿಪ ಸಭೆಯ ನಿ ।
ರ್ಮಾಣ ಶಿಲ್ಪಿಗರ ನೆರಹುತ್ತ ನಾನಾ ವಸ್ತು ।
ಮಾಣಿಕ ಸುರತ್ನಗಳ ತರಿಸುತ್ತ ನೇಮಿಸಲ್ ರಚಿಸಿದರ್
ಕುಶಲದಿಂದ ॥೬೧॥

ಝಗ ಝಗಿಪ ಸ್ತಂಭಗಳ ನಿಕರದಿಂ ಮುಕರದಿಂ ।
ಸೊಗಯಿಸುವ ಮೌಕ್ತಿಕದ ಹಾರದಿಂ ದ್ವಾರದಿಂ ।
ಮಿಗೆ ರತ್ನಭಿತ್ತಿಗಳ ಕಾಂತಿಯಿಂ ಶಾಂತಿಯಿಂ ವಜ್ರಮಯ ನೆಲಗಳಿಂದ ।
ಬಗೆ ಬಗೆಯ ಪುತ್ಥಳಿಯ ಜಾಲದಿಂ ನೀಲದಿಂ ।
ಮಘಮಘಿಪ ಪರಿಮಳದ ಕಂಪಿನಿಂ ತಂಪಿನಿಂ ।
ಜಗದೊಳಗೆ ಪೊಸತೆನಿಸಿ ತೋರಿದದು ಮೀರಿದದು ಸಭೆಯು
ನೋಳ್ಪವರ ಕಣ್ಗೆ ॥೬೨॥

ನೋಡಿದಡೆ ಶಕ್ರನಾಸ್ಥಾನದೋಳ್ ಧರ್ಮಜನ ।
ರೂಢಿಸಿದ ಮಖ ಶಾಲೆಯಂ ತೊಪ್ಪುತಿಹ ಸಭೆಯ ।
ಮಾಡಿಸಿದನಾಗ ಧೃತರಾಷ್ಟ್ರ ನಿಜಕುಲ ಮೂಲನಾಶನಂ ಗೈವುದಕ್ಕೆ ॥
ಆಡಲೇನಂಥ ನೃಪ ಸುತನ ಮೇಲಕ್ಕರದಿ ।
ಕೇಡಿಗರ ಕಲ್ಪನೆಯ ಮನದೊಳಗೆ ನಿಶ್ಚೈಸಿ ।
ಖೋಡಿಯಿಂದೇಕಾಂತ ಭುವನದೊಳು ವಿದುರನಂ ಕರಿಸಿ
ನಗುತಿಂದೆನು ॥೬೩॥

ಧೃತರಾಷ್ಟ್ರ ವಿದುರನಿಗೆ ಪ್ರಶ್ನಿಸುವನು

ವಿದುರ ನೋಡ್ಡೈ ಪಾಂಡವರ ಮಹಾ ಸಭೆಯು ಸಂ ।
ಪದಕೆ ಸರಿಯೋ ವಿ ಗಿಲೊ ಭದ್ರ ಮಂಟಪ ಶಾಲೆ ।
ಇದು ವಿಶೇಷವೆ ಸಕಲ ಕ್ಷಾತ್ರ ವೈಭವದ ಚಲ್ವಿಕೆಯಿಂದ ರಂಜಿಸುವದು॥
ಅದರೊಳೋಲಗವಿತ್ತು ತನ್ನ ತನು ಭಬರೊಡನೆ ।
ಮುದದಿಂದ ಕುಂತಿಜರು ದ್ಯೂತದಿಂ ರಮಿಸುತ್ತ ।
ಪದುಳದಿಂದಿರಲ್ಲಿಲ್ಲಿ ಕೆಲವು ದಿವಸ ವರನಂ ಕರೆದು ತಾ
ಪೋಗೆಂದನು ।೬೪॥

ಗರಳಮಯ ಸರಸಿಯೋಳ್ಪರಿವ ತಿಳಿನೀರೊ ರುಚಿ ।
ಭರಿತ ಪಾದರಿಯ ಮುಖ ಲಾವಣ್ಯವೋ ಭಯಂ ।
ಕರದುಗ್ರ ಪೈಶಾಚಿಗಳ ವನೆಯ ನಿಧಿಯೊ ಸಲೆ ಭಸ್ಮ ಮುಚ್ಚಿರ್ದ
ಶಿಖಿಯೆ ॥

ವಿದುರನ ಉತ್ತರ

ಕೊರಳಗೊಯ್ಕರ ವಿನಯ ನುಡಿಗಳೋ ಪೇಳೆಂಬೊ ।
ತೆರದಿಂದ ಧೃತರಾಷ್ಟ್ರ ಕೃತ್ರಿಮವ ನೊಳಗಿಟ್ಟು ।
ಪೊರಗೆ ಸಜ್ಜನರಂತೆ ನಸುನಗುತ ವಿದುರನೋಳ್ ಮಾತಾಡ-
ಲಿಂತೆಂದನು ॥೬೫॥

ಮಾತು ದುರ್ಗಂಧವಾಗೆದೆ ಜೀಯ ಕೌರುವಗೆ ।
ಸೋತೆ ವ್ಯಾಮೋಹದಿಂದಕಟಕಟ ವಿಪರೀತ ।
ದ್ಯೂತವೇ ಸುಡಲಿನ್ನು ಕಪಟಗಳ ರಚಿಸುವರೆ ಕೂಗಿ ಮಾರಿಯು
ಕರೆವರೆ ॥

ಘಾತಕವ ಬಿಡು ಭೀಮ ಪಾರ್ಥರಂ ಕೆಣಕಿ ವಿ ।
ಖ್ಯಾತ ಕುಲ ಗಜನಗರದೈಶ್ವರ್ಯ ಕೆಡಿಸದಿರ್ ।
ನೀತಿ ಸಮ್ಮತವಲ್ಲ ತಿಳಿದೆನಾ ನೀ ನೆನೆದ ಛದ್ಮ ಕಾರ್ಯವನೆಂದನು॥೬೬॥

---

ಪಾದರಿಯ=ಜಾರಣಿಯ. ರುಚಿ ಭರಿತ= ಕಾಂತಿ ಒಳ್ಳೇ ಮನೋಹರ ಮುಖಸುಂದರತ್ವಕ್ಕೆ ಮರುಳಾಗಿ ದೇಹ ಕೆಡಿಸಿಕೊಳ್ಳುವಿಕೆ ಒಗರೆ=ಸಮತೆ ಎಣೆ

ಧೃತರಾಷ್ಟ್ರನು ಪುನಃ ಪೇಳ್ದ

ಅನುಮಾನದಿಂದ ಕೆಂಗೆಡದಿರೆಲೆ ವಿದುರನಾ ।
ಮುನಿಯಲಾಪೆನೆ ಪಾಂಡುತನಯರ್ಗೆ ಬಲ್ಲೆ ನ ।
ರ್ಜುನವೃಕೋದರರ ವೀರ್ಯದ ಬಿಂಕಮುಂತಿಳಿಯಲೊಗರೇನ್ನೈವರೆನಗೆ॥
ಘನಯಜ್ಞದೋಳ್ ವ್ರತ ಶ್ರಮದಿಂದ ನವ ದಿರ್ಪ ।
ರನುರಾಗದಿಂದಲೀ ಸಭೆಯೊಳಗೆ ಕೌರುವ ನೊ ।
ಡನೆ ಒಂದು ದ್ಯೂತದಿಂದವರಿಲ್ಲಿ ರಮಿಸಿದರೆ ಹೀನವೇನು
ಸುರೆಂದನು ॥೬೭॥

ವಿದುರನು ನಿಕಾರಿಸುಕೆ

ಪೊದಲಲಿದು ಸದ್ಯೂತ ವವಸಾನದೋಳ್ ತೀಳಿಯೆ ।
ಲಿದುವಿಷಮು ದ್ಯೂತದಲಿ ನಿಲ್ವದು ನಿವಾರಣೆಯು ।
ಹದನ ಬಹುದುರ್ಘಟಂ ತವಸುತನ ದೆಶೆಯಿಂದ
ಕುರುವಂಶ ಮಾಸಳಿಸುವದು॥
ಕದನ ಕಾಲೂರ್ವದ್ಯೆ ನಿಮಗಹಿತ ನಾನೊರವೆ ।
ಹೃದಯದಿ ಬಲೋತ್ಕಾರ ಪಾಂಡುಪುತ್ರರ ಕರೆಸು ।
ವದೆ ಸೊಗಸು ತೋರಿದರೆ ಭೂಪಾಲ ಕೈಕೊಂಡೆನೆಂದು ವಿದುರಂ
ನುಡಿದನು ॥೬೮॥

ಪಾಂಡವರ ಕರೆತರಲು ಕಟ್ಟಾಜ್ಞೆ

ಕರದು ತಾ ನೀಪೋಗಿ ಕುಂತಿಸುತರಂ ಮಧುರ ।
ತರ ವಚನದಿಂದ ಸಂಪ್ರೀತಿ ಇಂದಿಲ್ಲಿಗೈ ।
ವರನ ನಾನುಪಚರಿಸಿ ಸಂತೈಸುವದು ನೋಡು ಮಗನಿಂದ
ಲೇನಾಹದು॥
ದುರುಳ ರವರಿವರೆಂಬ ಸಂಶಯುಬಿಡು ವಿದುರ ।
ತರಳರ ಪರಾಕ್ರಮುವ ಕೀರ್ತಿಯಂ ಕೇಳಿ ಬಹು ।
ಹರುಷಮಯ ನಾಗಿರ್ಪೆ (ನಾಗಿಹೆಂ) ಹರಿಪ್ರಸ್ತ ಕೀಕ್ಷಣಂ ತೆರಳೆಂದು
ನೇಮಿಸಿದನು ॥೬೯॥

ವಿದುರನ ಚಿಂತಾಕುಲತೆ

ಮುರಿದನೇ ಧೃತರಾಷ್ಟ್ರ ಶಶಿವಂಶ ಕಲ್ಪತರು ।

ಕುರುಬ ಕೌರುವ ನೋಡಿ ದುರುಲು ವಲೆ (ಬಲೆ) ಯೋಳ್ ಶಿಲ್ಕಿ ।
ಮರುಳಾಗಿ ಸಿರಿಯು ಹೋಗಾಡಿದನೆ ಹಾಯೆನುತ ವಿದುರ ಮನದೋಳ್
ಮರಗುತಾ ।
ಗುರು ಕೃಪಾಚಾರ್ಯ ಭಿಷ್ಮಾದಿಗಳಿಗೆಚ್ಚರಿಸೆ ।
ಮರುಗಿ ಪಾಪಿಗಳಕಟ್ಟೆ ಪ್ರುತ್ಯುವಿನ ಹೆಷತಲೆಯ ।
ತುರಿಸಿದರ ಪರಿಹರಿಸ ಲಾರಳವು ದ್ಯೆವಗತಿ ಯೆನುತಬಿಸುಸುಯ್ದು
ರವರು ॥೭೦॥

ವಿದುರನು ಪಾಂಡವರಲ್ಲಿಗೆ ತೆರಳ್ದುದು.

ಶುಭಲಗ್ನದೋಳ್ ಬಳಿಕ ವಿದುರ ಧೃತರಾಷ್ಟ್ರನಡಿ ।
ಗಭಿನಮಿಸಿ ಬೀಳ್ಕೊಂಡು ರಥಮೇರ್ದು ತವಕದಿಂ ।
ದಿಭನಗರ ಪೊರವ್ಹಟ್ಟು ಪ್ಯಣಗತಿಯಿಂದ ಲಿಂದ್ರುಪ್ರಸ್ತಪುರಕೆ
ಬರಲೂ ॥
ರಥನಮಿಗಿಲೆ ದಿರ್ಗೊಂಡು ತಂದರಾ ಹರಿಯು ಸ ।
ಸ್ನಿಭ ನನ್ನ ಆಲಿಂಗ ನಂಗೈದು ಪಾಂಡುವರು ।
ಸಭೆಯೊಳಗೆ ಕುಳ್ಳಿರಿಸಿ ಸತ್ಕರಿಸು ತುಪಚರಿಸಿ ಕುಶಲಂಗಳಂ
ಕೇಳ್ದರು ॥೭೧॥

ವಿದುರನು ಧರ್ಮನಿಗೆ ಸಕಲ ಕುಶಲಪೇಳ್ದನು

ಧೃತರಾಷ್ಟ್ರ ಗಾಂಧಾರಿ ಗಾಂಗೇಯ ದ್ರೋಣ ರವಿ ।
ಸುತ ಶಕುನಿ ಗೌತುಮಶ್ವಥ್ಥಾಮ ಕುರುಮಹೀ ।
ಪತಿಯನುಜ ತನುಜರಾ ಭಾನುಮತಿ ಸಾಮಂತ ಸಚಿವ
ಪರಿವಾರ ಜನರು ॥
ಅತಿಶಯದ ಕುಶಲಮಂ ಧರ್ಮಜಗೆ ವಿಸ್ತರಿಸಿ ।
ಕೃತಭೋಜನಾದಿ ಸತ್ಕಾರದಿಂ ಸುಪ್ರಮೋ ।
ದಿತನಾಗಿಕ್ಷತ್ರನತಿ ವಿನಯದಿಂ ನಸುನಗುತ ಪಾಂಡವರಿಗೆ
ಗಿಂತೆಂದನು ॥ ೭೨ ॥

ವಿದುರನು ಧರ್ಮನಿಗೆ ಕರೆಯುಬಂದದು ಪೇಳ್ದನು

ಪೊಡವೀಶ ಕೇಳ್ ನಿಮ್ಮ ಹಿರಿಯಯ್ಯ ಮೋಹದಿಂ ।

---

ಹದನ = ಸಂಗತಿ ಕಾರಣರೀತಿ

ಧೃಥರಾಜ ಸೂಯದೊಳಗೈವ ಕುಮಾರಕರ್ ।
ಬಿಡದೇಕ ಭುಕ್ತಾದಿ ಕರಿಣ ವ್ರತದೀಕ್ಷೆಯಿಂ ದೇಶವಿಭ್ರಮಣೆಯಿಂದ-
ಬಡವಾಗಿ ಬಳಲಿರ್ಪರೀ ಹಸ್ತಿನಾವತಿಗೆ ।
ನಡೆತಂದು ಸಭೆಯೊಳಗೆ ಸುಖದ್ಯೂತದಿಂ ರಮಿಸಿ ।
ಸಡಗರದೊಳಿರಲವರ ಕರದು ತಾಯೆಂದೆನ್ನ ಕೆಳುಹಿದರೆ
ಬಂದೆನಿಂದು ॥ ೭೩ ॥

ನಂಬಿಸುವ ನಂಧನೃಪ ಪೊರಗೆ ವೃದು ವಚನದಿಂ ।
ತುಂಬಿರ್ಪುದೊಳಗೆ ವಿಷ ಗುರು ಭೀಷ್ಮರಿದನು ಬ್ಯಾ ।
ಡೆಂಬುವರ್ ಸಲ್ಲರವರೀ ದುರಾಲೋಚನೆಗೆ ಹಲವು ಮಾತೇನುಜನಪ ॥
ಡಂಬಕರ್ ಶಕುನಿ ಕರ್ನಾದಿಗಳ್ ಮುಸದ ಕೋ ।
ರಂಬಿನಂತಿರ್ಪರಾ ಕೌರವಂ ಕೃತ್ರಿಮದ ।
ಬೊಂಬೆ ನಿಮಗಿನಿತರೋಳ್ ಮನವೆಂತು ಬಂದಪುದು–
ಪೇಳೆಂದನಾ ವಿದುರನು ॥ ೭೪ ॥

### ಧರ್ಮರಾಜನು ಹೊರಡಲು ನಿಶ್ಚಯ

ಕರೆಸುವನೆ ಹಿರಿಯಯ್ಯ ನಮ್ಮ್ಕ್ರವರಂ ಮಹಾ ।
ಕರುಣದಿಂ ಸಲಹಲ್ಕೆ ಲೇಸಾಯ್ತು ಬಹೆವು ನಮ ।
ಗೆರಡು ಮನವೇ ಭಾವ ಭೇದವೇ ಧೃತರಾಷ್ಟ್ರ ಪಾಂಡುಬೊಪ್ಪನ
ಪದದಲಿ ॥

ವರವೆ ದೊರಕಲಿ ಶ್ಯಾಪವೇ ಬರಲಿ ಮೋಣ್ ದೇಹ ।
ಸಿರಿಯು ಶಾಶ್ವತವೇನು ಪಿತನಾತನಾಜ್ಞೆಯಿಂ ॥
ಶಿರದೊಳಾಂತೆನು ವಿದುರ ಭಯವಿಲ್ಲವೆನಗೆಂದು ನುಡಿದನಾ
ಧರ್ಮಸೂನು ॥ ೭೫ ॥

### ಹಸ್ತಿನಾವತಿಗೆ ಹೊರಡಲು ಅನುಜರ ಸಮ್ಮತ

ಅರಸ ಕೇಳೇನಾದಡನುಜರ ನುಮತದಿಂದ ।
ತೆರಳುವದು ನಿಶ್ಚಯವ ಮಾಳ್ಪುದೆನೆ ಧರ್ಮಸುತ ।

---

ಮುಸದ ಕೋರಂಬು = ಹದನಮಾಡಿ ಚೂಪಾಗಿಮುಸೆದ ತುದಿಮುಖ ದಂತೆ ಚೂಪಾದಬಾಣದಂತೆ

ನರ ವೃಕೋದರರ ಮೊಗಮುಂ ನೀಕ್ಷಿಸಲ್ಕೈವರ್ ಜೀಯಾ
ವ್ಯೈನೆಳಲಿಗುಂಟಿ ||
ಮುರಕ ಚೇಷ್ಟೆಗಳೆಮಗೆ ಸ್ವಾತಂತ್ರ ಮಿರ್ದಪುದೆ ।
ನರನಾಥ ನಿಮ್ಮ ಚಿತ್ತಕೆ ಬಂದ ಕಾರ್ಯವೇ ।
ಪರಮ ಶುಭವೆಂದು ಸುಮ್ಮಾನದಿಂ ಕೈಕೊಂಡು ನಡೆದವೆಪ್ಪೊ
ನಾವೆಂದರು ||೭೬||

ಭೀಮಸೇನದೇವರ ಮಹಿಮೆ

ಅರಿಯನೇ ನೀ ಭೀಮ ಮುಂದೊಗೆವ ಕಾರಣವ ।
ಮರುತಸುತ ಸರ್ವಜ್ಞ ನೀತ ಮುಖ್ಯ ಪ್ರಾಣ ।
ಧರೆಯ ಭಾರವ ಕಳೆಯಲೆದುಪತಿಯ ನೇಮದಿಂ ಹರಿಣಾಂಕ
ಕುಲದೊಳುದಿಸಿ ||
ದುರುಳರಂ ಸಂಹರಿಪ ನೆಲೆ ಶೌನಕಾದಿ ಮುನಿ ।
ವರರೆ ಕೇಳೀ ಜಗದ ಜೀವರಂತರ್ಯಾಮಿ ।
ಹರಿಯ ಮತಮುಂ ಬಲ್ಲಲದರಿಂ ಲಗ್ರಜಂ ಗನುಸಾರಿಯಾಗಿರ್ಪನು||೭೭||
ಬಲವಂತ ರನಿಲಜ ಗಿಂದಧಿಕರಾರಿಲ್ಲ ಸುರ ।
ಕುಲ ಪುಣ್ಯಜನರೊಳಗೆ ಮಾರುತನ ಕೃಪೆಯಿಂದ ।
ನಳಿನಾಕ್ಷನರಮನೆಯು ಸಮನಿಪುದು ಜೀವರಿಗೆ ವಾಯುವಿನ
ದ್ರೋಹಮಾಳ್ಪ ||
ಖಳರಿಗೆ ತಮೋಗತಿಯು ಪ್ರಾಪ್ತಿಯಾಗುವದು ದಿಟ ।
ತಿಳಿಯಲೀತನ ಮಹಿಮೆ ಹರಫಣಿಪರಳವಲ್ಲ ।
ಕಲಿತಾಪ ದುಃಖ ಭಯ ನಿರಯ ಬಾಧೆಗಳಿಲ್ಲ ಮೀತನಂ ಸ್ತುತಿ-
ಸುವರ್ಗೆ ||೭೮||
ಈ ಮಾರುತನೆ ಹನುಮನೆಂದೆನಿಸಿ ತ್ರೈತೆಯಲಿ ।
ರಾಮನಂಘ್ರಿಯ ಭಜಿಸಿ ರಾವಣನೆ ಮೊದಲಾದ ।
ತಾವ ಸಾಸುರರ ನುರಿ ಮಥಿಸಿ ಲಂಕೆಯ ದಹಿಸಿ ವೈದೇಹಿಯುಂ
ಕಾಣಿಸಿ ||

---

ಒಗೆ=ಹುಟ್ಟು, ಉಂಟಾಗು. ಮುಂದೊಗೆವ=ಮುಂದೆ ಆಗುವ

ಸ್ವಾಮಿಯಂ ಮೆಚ್ಚಿಸುತ ಲಜ ಪದವಿ ಪಡೆದ ಮ।
ಹಾ ಮಹಿಮ ನೀ ದೇವನೇ ದ್ವಾಪರಾಂತ್ಯದಲಿ।
ಭೀಮಾಭಿಧಾನದಿಂದವತರಿಸಿ ಕೌರವರ ನಾಶನಂ ಗೈದಿಪ್ಪನು ||೭೯||
ಮುಂದೆ ಕಲಿಯುಗದೊಳಗೆ ಬಾದರಾಯಣನಾಜ್ಞ।
ಯಿಂದ ಶ್ರೀ ಮಧ್ವಮುನಿ ಯೆಂತೆಂಬ ನಾಮದಿ ವ।
ಸುಂಧರೆಯೊಳುದ್ಭವಿಸು ತೇಕವಿಂಶತಿ ಕುಮತಗಳ ತರಿದು
ಬುಧಜನರಿಗೆ ||

ಇಂದಿರಾ ರಮಣನೇ ಸರ್ವೇಶ ಗುಣಪೂರ್ಣ।
ನೆಂಬು ಭೇದಜ್ಞಾನ ತಾರತಮ್ಯ ದೊಳರುಹಿ।
ಮಂದಮತಿಯಂ ಕಳೆವನೀ ಸಮೀರನೆ ಮೂರು ಲೋಕಕೆ ಗುರು
ವೆನಿಸುವ ।೮೦||

ಈತನವ ತಾರಗಳಿಗೀತಂಗೆ ಭೇದಮಂ।
ಪಾತಕರ್ ತಿಳಿಯೆ ರವರವ ನಿರಯುವನು ಭವಿಸಿ।
ಭೂತಳದೊಳಂತಿಜರ ಯೋನಿಯೊಳು ಜನಿಸುವರ್ ಗತಿಇಲ್ಲ
ಯೆಂದವರ್ಗೆ ||

ಈತನಿಲ್ಲದ ದೇಹ ಕುಣಪನೆಂದರಿವರಂ।
ನೀತನೇ ಜೀವರಾಧಾರ ಹರಿಸಿರಿಯುಳಿಯೆ।
ಲೀತಗಿಂದುತ್ತುಮಗುರ್ಣದಿಂದ ಲಾರಿಲ್ಲ ಗೀರ್ವಾಣನಿಕರ
ದೊಳಗೆ ||೮೧ ||

ಪವಮಾನನಂ ಭಜಿಸದವನ ಜೀವನವ್ಯಾಕೆ।
ಪವಮಾನನೇ ವೃಷಾಕಪಿಯ ಪ್ರೀತ್ಯಾಸ್ಪದಂ।
ಪವಮಾನನೇ ಶ್ರೀಶನಚ್ಛಿನ್ನ ಭಕ್ತ ನೀತನ ಮತವೆ ಹರಿಯ ಮತವು ||
ಪವನನಿಂದಲೆ ಚತುರ್ದಶ ಲೋಕ ದಳಿ ಉಳಿವು।
ಪವನ ರೋಮದಿ ಕೋಟಿ ಲಿಂಗಗಳುದರಿಸಿಪ್ಪ।
ಪವನನ ಪರಾಕ್ರಮವ ಗುಣಗಳಂ ಕೊಂಡಾಡೆ ಪುಣ್ಯ ದೊರವದು
ನರರಿಗೆ ||೮೨||

---

ವೃಷಾಕಪಿ=ವಿಷ್ಣು

ಶ್ರೀ ಭೀಮನು ಅಣ್ಣನಾಜ್ಞೆಯಂ ಪಾಲಿಪಕಾರಣ

ಇನಿತು ಬಲವಂತ ಸರ್ವಜ್ಞನಾದರು ಭೀಮ ।
ಮನುಜರೋಪಾದಿಯಲಿ ಕಾಣಿಸಿದ ನೀ ಜಗಕೆ ।
ವನಜಾಂಬಕನ ಮನದಭಿಪ್ರಾಯಮಂ ತಿಳಿದು ಧರ್ಮಜಗೆ ತಮ್ಮನಾಗಿ॥
ಅನುದಿನದೊಳಣ್ಣನಾಜ್ಞೆಯ ಮೀರದಲೆ ನಡೆವ ।
ಮುನಿಗಳಿರೆ ಕೇಳಿನ್ನು ಮುಂಗಥೆಯ ನೊರವೆನೆಮ ।
ತನಯನುಜರ ಮಾತಿಗತಿ ಹರುಷಮಂ ತಾಳ್ದು ವಿದುರನೊಡ
ನಿಂತೆಂದನು ||೮೩||

ಹರುಷತಾಳಿ ಧರ್ಮನು ಹೊರಡಲು ನಕುಲನಿಗೆ ನಿರೂಪಿಸಿದುದು

ಹಿರಿಯನಾ ಧೃತರಾಷ್ಟ್ರ ನಮ್ಮಯ್ಯ ಗಿಂದವರ ।
ದರುಶನವೆ ಹಾರೈಸುತಿರ್ದನಾ ಮನದೊಳಗೆ ।
ಕರುಣದಿಂ ತಾವೆಕರಸಿದರಂದು ಲೇಸಾಯ್ತು ನಿನ್ನೊಡನೆ ಬರ್ಪನೆಂದು ॥
ನರ ಕಾಂತ ಗಮನಮಂ ನಿಶ್ಚೈಸಿ ನಕುಲಂಗೆ ।
ಪುರದೊಳಿರ್ದಖಿಳ ಚತುರಂಗಬಲ ಪರಿವಾರ ।
ತ್ವರಿತದಿಂದೆಮ್ಮ ಕೂಡೈತರಲಿ ಭೇರಿಯಂ ಪೊಯ್ಸೆಂದು ನೇಮಿಸಿ
ದನು ||೮೪||

ಪೊಳಲ ಕಾಹಿಂಗಿರಲಿ ಪ್ರಾಮುಖ್ಯ ಭಟಸಚಿವ ।
ರುಳಿದ ವೀರರ್ಬರಲಿ ತಮ್ಮೊಡನೆ ರಾಣಿಯರ್ ।
ಲಲನೆಯರ ಸಂಗದಿಂ ನಡೆತರಲಿ ಸಿಬಿರಮಂ ಪಟ್ಟಣದ ಪೊರೆಗೆ
ನಿಲಿಸು ॥

ಪಲೆ ದಿವ್ಯ ವಸ್ತುವಂ ತೆಗೆಸು ಭಾಂಡಾರದಿಂ ।
ನಿಳಯದಿಂ ತೆರಳಿಸು ಕುಮಾರರಂ ಜನನಿಯಂ ।
ತಳುವ್ಯಾಕ ನಗರದೋಳ್ ಸಾರಿಸೆಂದಾ ಧರ್ಮ ತನಯ
ನಾಜ್ಞಾಪಿಸಿದನು ||೮೫||

ನಕುಲನು ಪೊಃಡಲು ಸಕಲ ಸಿದ್ಧತೆಗೊಳಿಸಿದನು

ಬಳಿಕ ನಕುಲನ ನೇಮದಿಂ ಶಕ್ರ ಪ್ರಸ್ತದೋಳ್ ।
ವೊಳಗಿದವು ನಿಸ್ಸಾಳೆ ಕೋಟಿಗಳ್ ಸಕಲ ದಳ ।

ಘಳಿಗೆಯೋಳ್ ಸನ್ನದ್ಧರಾಗಿ ತವು ತವುಗೆ ಬಹು ವಿಧ ವಾದ್ಯ
ಘೋಷದಿ-ದ ||

ಚಲಿಸುವ ಪತಾಕೆ ಧ್ವಜ ವಜ್ರ ಚಾಮರಪ ಸಂ |
ಕುಲದಿಂದ ಸಂದಣಿಸಿ ತಶ್ವಗಜ ರಥದಿಂದ |
ನಲುವಿನಿಂ ಪೊರಮಟ್ಟುದಾಗಮಿತ ಕೋಶದ ಸುವಸ್ತು ವಂ
ಹೇರಿಸಿದರು ||೮೬||

ಖರ ಊಷ್ಟ್ರ ಕೊಟ್ಟಿಗೆಯ ಕೊಲ್ಲಾರ (ಕೊಲ್ಹಾರ) ಭಂಡಿಗಳ |
ಪೊರೆಯಾಳು ಕಂಬಿಗಳ ಗಜ ವೃಷಭಗಳ ವ್ಯಾಲಿ |
ಪರಿ ಪರಿಯ ಧನ ಹೇಮ ರಜತ ಮಣಿಗಣ ವಸನ ಪೊಸತೆನಿಪೆ
ಸೌರಂ (ರಭ್ಯ) ಭದ ||

ಸರಕು ನಾನಾ ಧಾನ್ಯ ಇಟ್ಟಣಿಸಿ ನೂಕಿದದು |
ಸುರಭಿ ಮಹಿಷಿಗಳಿ ಪರಿಮಿತದ ಕೀರಗಳಾಗ |
ತೆರಳಿದವು ಸಾಲಿಟ್ಟು ಧರ್ಮಜನ ವೈಭವಂ ವರ್ಣಿಸುವ
ರಾರೆಂದನು ||೮೭||

ಧರ್ಮರಾಜನು ಇಂದ್ರಪ್ರಸ್ತದಿಂ ಪೊರಟ ವಿಭವ ವರ್ಣನೆ.

ಸುತ ಸಹೋದರಮಂತ್ರಿ ಮಿತ್ರಭಾಂಧವ ಪುರೋ |
ಹಿತರೊಡನೆ ಸೂತ ಮಾಗಧ ಬಂದಿ ಪಾಠಕರ |
ನುತಿ ಪಠಾಕಗಳಿಂದಲರ ಮನೆಯ ಪೊರಮಟ್ಟ ಮೌಕ್ತಿಕದ ಝಲ್ಲಿ
ಯಿಂದ ||

ಅತಿಕಾಂತಿ ರತ್ನ ಖಚಿತದ ತೊಡಿಗೆ ಗಂಟೆಗಳ |
ವಿತತಿಯಿಂ ಸಿಂಗರಂಗೈದ ಮದವಾರಣವ |
ಕ್ಷಿತಿಪ ಕ್ಷತ್ತ್ರನ ಸಹಿತ ನಡೆದ ನೈರಾವತವ ನಿಂದ್ರ ನೇರುವ ತೆರದಲಿ||೮೮||
ಎಡಬಲ ದೊಳೊಲಿವ ಚಾಮರ ಧವಳ ಛತ್ರಗಳ |

---

ನರಕಾಂತ=ಮನುಜರಿಗೊಡೆಯ, ರಾಜ. ನಿಸ್ಸಾಳೆ=ಭೇರಿ ಕೊಲ್ಲಾರ=ಸರಕು ತುಂಬಿದ ಎತ್ತಿನ ಗಾಡಿ ಕಂಬಿ=ಕಾವಡಿ ಪೊರೆಯಾಳು=ಹೊರುವ ಆಳು ಇಟ್ಟಣಿಸಿ=ದಟ್ಟ ಸಂದಣಿ ಕೀರ=ಕ್ಷೀರ, ಹಾಲು, ಹಾಲುತುಂಬಿದ ನಾನಾ ತರದ ಭಾಂಡೆಗಳು

ಉಡುರಾಜ ನೋಳ್ಮಿರವುತಿರಲರಸ ನಿಕ್ಕೆಲದೋಳ್ ।
ಳಿಡಿದ ಮಣಿಸ್ಯಂದನ ದ್ವಿಪ ಹಯದ ವರ್ಗದಿಂದನುಜ ತನುಜ
ನ್ರಡೆಯಲು ॥

ದ್ರೌಪದಿ ಕುಂತ್ಯಾದಿಗಳ ಪೈಣವಿಭವ

ಮಡದಿ ದ್ರೌಪದಿ ಸುಭದ್ರಾದಿ ಸ್ತ್ರೀಯರ್ ಪಿಂತೆ ।
ಕಡಗ ಕಂಕಣ ದಿವ್ಯಮಾಲ್ಯಾಂಬರವ ನಾಂತು ।
ಸಡಗರ ದೋಳಾಂದೋಳಿಕಾ ರೋಹಣಂಗೈದು ಲೀಲೆಯಿಂದೈ
ತಂದರು ॥೬೯॥

ದಂತಿವ್ಯಾಲೇರಿ ಬಹು ವಿಧದ ಭೂಷಣದಿಂದ ।
ಕುಂತಿ ನಡೆತರಲಾಕೆ ಬಳಿವಿಡಿವುತಾಪ್ತ ಸೀ ।
ಮಂತಿನೀಗಣ ಹಾರ ನೂಪುರದ ರವದೊಡನೆ ಕಚ ಭರದಿ (ಭಾರದಿಂ)
ಕುಚಗಳಲುಗೆ ॥

ಕಂತುವಿನ ಶರಮೂರ್ತಿಗಳತೆರದಿ ತನುದ್ಯುತ ದಿ ।
ಗಾಂತದೋಳ್ ಪೊಳೆಯಲಾ ಚಂಚಲಾ ಪಾಂಗಿಯರ್
ಸಂತೋಷದಿಂದಂದಣಂಗಳ ನಡದ್ರು ತೆರಳಿದರಾಗ ಕೆಲಬಲದೊಳು
॥೭೦॥

ಪೊಳಲೊಳಿರ್ದಖಿಳ ಜನರೆಲ್ಲರುಂ ಸಿಂಗರದಿ ।
ತಳರ್ದರ ರಸನಕೂಡೆ ವ್ಯಾಳವದ ರಚನೆಯಿಂ ।
ದಲಿನಲಿವ ಬಟ್ಟ ಬಲ್ಮೊಲೆಗಳಿಂದೆಸವ ಗಣಿಕಿಯರು ಸುವಿಲಾಸದಿಂದ ॥
ಕಲಹಂಸ ಗಮನದ ವಿಲಾಸಿನಿಯರಂದಣಂ ।
ಗಳ ಕೋಟಿ ಸಂಖ್ಯೆಯಿಂ ನಾಲಿಟ್ಟು ಪೊರಮಟ್ಟು ।
ರುಳಿಯದತಿ ನಿಬಿಡವಾಗಿಟ್ಟಣಿಸಿ ಮಾರ್ಗದೊಳಿಂಬಿಲ್ಲವೆನೆ
ಭರದೋಳು ॥೭೧॥
ಸಂದಣಿಸಿ ತಧ್ವದೋಳ್ ಪಾಂಚಾಲೆಯೊಡನೈದು ।

---

ಮೌಕ್ತಿಕದ ಝಲ್ಲಿ=ಮುತ್ತಿನ ಝಾಲರಿ ಸಾಲು ದ್ವಿಪ=ಎರಡು ಸಾರೆ ಕುಡಿಯುವದು ಆನೆ ಆಂದೋಳಿಕಾ=ಪಲ್ಲಕ್ಕಿ ಕಲಹಂಸ=ರಾಜಹಂಸ ಕಂತುವಿನ ಶರಮೂರ್ತಿ=ಕಾಮಬಾಣಗಳೇ ಮೂರ್ತಿವಂತಾಗಿ ತೋರ್ವ ಸುಂದರಿ ತೊಡೆಗಳಮುಸದ=ತೊಡೆಗಳ ತಿಕ್ಕಾಟ ಪೊಂಬುಡಿ=ಹೊನ್ನಿನಪುಡಿ

ವಿಂದು ಮುಖಿಯರ ವೃಂದ ದೊರ ಸೊರಸಿನೋಳ್ ವೈಯ್ಯೊ
ಳೊಂದಿಸಿದ ತೊಡಿಗೆಗಳ್ ಮಸೆದ ಪೊಂಬುಡಿಯಂತೆ ಕುಂಕುಮದ ರಜ
ಮುಸಕಲೂ ||
ಬಂದಿಸಿದ ಹಾರಂಗಳುಡಿ ದೊಗೆವ ಮೇಲ್ ಕಣ್ಗ |
ಳಿಂದ ಪರಿವಾಕಾಂತಿ ಸೂಸುತಿರೆ ತನು ಮಿಂಚಿ |
ನಂದದಿಂ ಪೊಳೆವುತಿರೆ ಜಲಜ ಕುಟ್ಮಲದಂತೆ ಸ್ತನ ಮೇಲುದಿ
ನೋಳೆಸದವು ||೯೨||
ಭಾರತಿ ಸ್ವರೂಪಾಂಶಳಾದ ದ್ರುಪದಾತ್ಮಜಯು |
ಚಾರು ದಂಡೆಗೆಯ ಬಲವೆಡ ಭಾಗದಲಿ ಕಡಗ |
ಹಾರ ನೂಪುರ ಕಂಕಣಾಭರಣ ಪೊಂಗೆಜ್ಜೆಗಳ ಝುಣತ್ಕಾರದಿಂದ ||
ನೀರೆಯರ್ ಶುಭ್ರ ಚಾಮರವ ಚಿಮ್ಮಿದರಂಬು |
ಜಾರಿ ತರಳೆಯರ ಮುಖ ಲಾವಣ್ಯ ವೃತ್ತದಾ |
ಕಾರಮಂ ಕಂಡು ಲಜ್ಜಿಸಿ ಧರೆಗೆ ಬೀಳ್ವವೋಲ್ ಕಣ್ಗೆಸೆದು
ದೇಳ್ವನು ||೯೩||

ಧರ್ಮರಾಜನ ಸೇನಾದಿ ವೈಭವ

ಆರು ಬಣ್ಣಿಪರಾ ಯುಧಿಷ್ಠಿರನ ಧ್ವಜ ನಿ ವಿ |
ಸ್ತಾರ ಸಿರಿ ಚಲ್ವಿಕೆಯ ಘುಡಿ ಘುಡಿಸಿ ಮೊರವ ಮುಂ |
ಗಾರ ಮೇಘಗಳ ಗರ್ಜನೆಯಂತೆ ಶಂಖ ಭೇರಿಗಳ ನಾದಂ ಮೊಳಗಲು ||
ನೀರಜ ಭವಾಂಡ ಘೀಳಿಡುತಿರ್ದುದೇಕ್ಷೆಸೆಯು |
ವಾರಣಗಳದುರಿ ಕಿವುಡಾದವಾ ವಾಹಿನಿಯ |
ಭಾರದಿಂದಿಳೆ ಕುಸಿದುದಹಿ ರಾಜ ಕೂರ್ಮಗೆ ಧರಿಸಲಸದಳ
ವಾದುದು ||೯೪||
ದಳದೊಳಟ್ಟಣಿಸಿ ನಡವಾ ಕುಂಭಿಗಳ ಕುಂಭ |
ಸ್ಥಳದ ಸಿಂಧೂರಗಳ ಚೂರ್ನಗಳೊ ಪೊಂದೇರ |
ಕುಲದ ಸಂಘರ್ಷಣದೊಳೊಗೆವ ರೇಣುಗಳೊ ಮೇಣ್ ಪಾಂಡುವರ
ದ್ವೇಷಿಯಾದ ||
ಖಳ ಕೌರುವನ ಧರಿಸಲಾರಿವಳ ತರಿಸೆನುತ |

ಲಿಳೆ ವಿರಂಚಿಯು ಪೊರೆಗೆ ಪೇಳಲ್ಕೈದುವ ತೆರದಿ ।
ಬಲದ ಪದಘಾತದಿಂದೇಳ್ವ ಕೆಂಧೂಳಿಗಳ್ ಸಲೆ ಮುಸುಕಿ
ತಂಬರವನು ॥೯೫॥

**ಧರ್ಮಜನಿಗೆ ಅಪ-ಶಕುನಗಳಾಗುವಿಕೆ.**

ಕಳುಹುತ್ತೈತಂದಾಪ್ತ ಮಂತ್ರಿಗಳನುಪಚರಿಸಿ ।
ಪೊಳಲರಕ್ಷೆಗೆ ನಿಲಿಸಿಸೇನಾ ಸಮೂಹದಿಂ ।
ಬಳಿಕಾಯುಧಿಷ್ಠಿರಂ ಮುಂದೆಳೆಯೆ ಲಧ್ವದೋಳ್ ದುರ್ನಿಮಿತ್ಯ
ಗಳಾದವು ॥

ಮೊಲಫಣಿಗಳೆಡಹಾಯ್ದು ಎದಿರಿನಲಿ ಗೋವಾಯು ।
ಬಳಗೊರಲ್ದವು ವಾಯಸಗಳೆಡಕೆ ಪಾರಿದವು ।
ತಲೆಯುವ್ಯಾಲೆರಗಿದವು ಬಕಗ್ರಧ್ರಗಳ್ ಬಲಕೆ ಹಂಗನಿಕರ
ಗಳೆದ್ದವು ॥೯೬॥

ಭೂಮಿಗದ್ಗದನೆ ಕಂಪಿಸಿತುಲ್ಕಗಳ್ ಕಡೆದ ।
ವಾ ಮೋಹರದ ವ್ಯಾಲೆಬೀಸಿದುದು ಬಿರಿಗಾಳಿ ।
ಧೂಮು ಕವಿದದು ಛತ್ರಧ್ವಜ ಪತಾಕೆಗಳಾಗ ಮುರಿದೊರಗಿದವು
ಮುಗ್ಗುತಾ ॥

ಸಾಮಜ ತುರಂಗರಥಗಳ್ಬಿದ್ದವೆಮುಭವನ ।
ಭೀಮನರ ನಕುಲ ಸಹದೇವ ಮೊದಲಾದವರ ।
ವಾಮಾಕ್ಷಿ ಭುಜಗಳುರೆ ಪಾರಿದವು ದ್ರೌಪದಿಯ ದಕ್ಷಣಾಂಬಕ
ವದರಿತು ॥೯೭॥

**ಧೌಮ್ಯಾದಿಗಳು ಪ್ಯಣನಿಲ್ಲಿಸಲು ಧರ್ಮಗೆ ಪೇಳಿದ್ದು**

ಅವಕುಶನ ಅತಿಭಯಂಕರವಾಗಿ ಕಂಗೊಳಿಸು ।
ತಿವೆನೋಡಲಿಭಪುರಿಗೆ ಪೋಗವದು ಲೇಸಲ್ಲ ।
ವವನೀಶ ಕುಲಶಿರೋಮಣಿ ಮರಳಿ ನೀವೈವರಿಂದ್ರಪ್ರಸ್ಥಕೆ ತಿಳಿಯಲು ॥
ಕವಿಸೌರಿ ಭೌಮಾರ್ಕ ಗುರು ರಾಹು ಕೇತುಗಳ್ ।
ತವೆಜನ್ಮ ಸ್ಥಾನದಲಿ ನೆಲಸಿರ್ಪರಿಂದಹಿತ ।
ನಿವಹಕ್ಕೆ ಬಲಮಿಪ್ಪದೆಂದು ಬಹುವಿನಯದಿಂ ಧೌಮ್ಯಾದಿಗಳು
ನುಡಿದರು ॥೯೮॥

ಧರ್ಮನು ಧೌಮ್ಯಾದಿಗಳ ನುಡಿಲೆಕ್ಕಿಸಲಿಲ್ಲ

ಮರಳಬಹುದೇ ಶೌನಕರೆ ದೈವವಿಕ್ಕಿರ್ದ ।
ಕೊರಳ ಕಣ್ಣಿಯ ಕುಣಿಕೆಯಂ ಹರಿಸಲಾರಳವು ।
ಧರಣಿಯೋಳ್ ಸಜ್ಜನರ ವಾಕ್ಯಮಂ ಮೀರ್ದವಗೆ ಹಾನಿ
ಬಹದಾಶ್ಚರ್ಯವೆ ॥

ಮರುಳತನದಿಂದರಸ ಶಕುನ ಕೋವಿದರ ನುರೆ ।
ಜರಿದು ನುಡಿದಂ ಬೊಪ್ಪ ಕರಸಿಪ್ಪ ನಮ್ಮ ನೀ ।
ನರಿ ಮೊಲಗಳುತ್ಪಾತದಿಂದಲೇ ನಪ್ಪುದೆನುತಲಿ ಹರುಷದಿಂ
ನಡದನು ॥೯೯॥

ಧರ್ಮನ ಪ್ರೈಣಗತಿ ಸಂಭ್ರಮುವರ್ಣನೆ

ಭೂವಲ್ಲಭಂ ಪ್ರೈಣಗತಿಯಿಂದ ಮಾರ್ಗದೋಳ್ ।
ಸಾವಧಾನದೊಳಖಿಳ ಭೂಭುಜರ ನೇವೆಸಂ ।
ಭಾವನೆಯ ಕೈಕೊಳುತ ವಿದುರನಿಂ ದೊಡಗೂಡಿ ಸುಮ್ಮಾನದಿಂದ
ಒರಲು ॥

ದೇವೇಂದ್ರನಮರಾವತಿಯ ತೆರೆದೊಳಾ ಹಸ್ತಿ ।
ನಾವತಿಯ ಪಟ್ಟಣಂ ಮುಂದೆ ಕಣ್ಗೆಸೆದದು ಮ ।
ಹಾ ವಿಭದಿಂ ಮನೋಹರವಾಗಿ ಮೇಣ್ ಪುರದ ಸಿಂಗರವ
ಪೇಳ್ವೆನು ॥೧೦೦॥

ಹಸ್ತಿನಾವತಿ ಪುರ ವರ್ಣನೆ

ಮುಗಿಲು ಮುಟ್ಟಿರ್ದ ಪೊಂಗೋಟೆಯಿಂ ವಾತಾಳ ।
ಕೊಗೆದಗಳ ಖಾತದಿಂ ಮಣಿಖಚಿತ ದ್ವಾರದಿಂ ।
ಸೊಗಯಿಸುವ ಚಂದ್ರಕಾಂತದ ಶಿಲೆಗಳಿಂದ ನಿರ್ಮಿಸಿದ ಪ್ರಾಸಾದದಿಂದ॥
ಝುಗಝುಗಿಪ ದೇವಾಲಯಾದಿ ಗೋಪುರದ ಪಂ ।
ಕ್ತಿಗಳಿಂದ ಪೊಳೆವ ಧ್ವಜಮಕರ ತೋರಣದಿಂದ ।

---

ಗೋಮಾಯು=ನರಿ ವಾಯಸ=ಕಾಗೆ ಸಾಮಜ=ಆನೆ ಉಲ್ಕಗಳ್=ಉರಿಯುವ ಕೊಳ್ಳಿ ತುರಂಗ=ಕುದುರೆ ಕವಿ=ಶುಕ್ರ ಸೌರಿ=ಶನೇಶ್ವರ ಭೌಮ=ಮಂಗಳ ಅರ್ಕ ಸೂರ್ಯ

ನಗರವತಿ ಶೋಭಾಯಮಾನವಾಗಿರ್ಪುದಾ ನೃಪನಿ-
ಕೇತನಗಳಿಂದ ॥ ೧೦೧ ॥

ಈಪರಿಯ ಶೃಂಗಾರ ಸೌಭಾಗ್ಯಮಿರ್ದೇನು ।
ಪಾಪಿ ಕೌರವನಾಳ್ವನದರಿಂದ ದುಷ್ಕೀರ್ತಿ ।
ತಾಪಕೊಳಗಾಗಿರ್ಪ ನೀ ಪೊಳಲ ಧಾರ್ಮಿಕವಿಖ್ಯಾತ ಗುಣವಂತನು ॥
ಭೂಪ ಪತಿಯಾಗೆನ್ನ ಸಲಹೆಸುತ ಕರವೆತ್ತು ।
ತಾಪುರಾಂಗನೆ ಧರ್ಮಜಗೆ ನಮಿಸುವೋಲ್ ಜಾತ ।
ರೂಪಮಯ ಮುಗಿಲಟ್ಟುಳೆಯ ಬಳಿಯುಲಿರ್ದಡೇಂ ।
ಕಣಿಗ್ಯೆಗಳೆಸದಿರ್ದವು ॥ ೧೦೨ ॥

ತುರಗಗಳೆ ಧೆರೆಯು ಕಾಂಚನದ ಸೌಧಂಗಳೇ ।
ಗಿರಿಗಳಾ ಸತ್ತಿಗೆಯು ಸಾಲ್ಗಳೇ ಫೇನಂಗ ।
ಳರುಣ ಛವಿಯಾ ತೋರಣಂಗಳೇಪವಳ ಲತೆಚಮರಂಗಳೇಮೀನ್ಗಗಳು॥
ಕರಿಗಳೇ ಮಕರಿಗಳ್ ಮನೆಗಳೇ ಕುರುವಕೆಯು ।
ಮೆರವ ವಾದ್ಯಂಗಳೇ ಜಲ ಘೋಷ ಪ್ರಾಕಾರ ।
ಮೆರವ ತಡಿಯಾಗಲಾ ಶುಂಡಾಲ ಪುರ ಸಮುದ್ರದ ಚಲ್ವಿ
ನಂತಿರ್ದದು ॥೧೦೩॥

ಪರಿ ಪರಿಯ ಕುಸುಮ ಫಲ ಗೊನೆಗಳಿಂ ವನಗಳಿಂ ।
ಪರಿವದುರೆ ಕಾಸಾರ ಕೆರೆಗಳಿಂ ದೊರೆಗಳಿಂ (ಧೆರೆಗಳಿಂ) ಪರಿಮಳದ
ಸಾರಣೆಯ ಗಂಧದಿಂ ಸಿಂಧದಿಂ ಸೀಗುರ ಪತಾಕೆಯಿಂದ ॥
ಪರಿಶೋಭಿಸುವ ರಾಜ ವೀಧಿಯಿಂ ಜೋತಿಯಿಂ
ಮಿರುಪ ಕನ್ನಡಿಗಳ ಸಚ್ಚಿಲ್ವಿನಿಂ ನಿಲ್ವಿನಿಂ ।
ದಿರುವ ಶೀಮಂತಿನಿಯ ರೋಳಿಯಿಂ ಕೇಳಯಿಂ ದಿಭಪುರಂ
ಕಂಗೊಳಿಸಿತು ॥೧೦೪॥

---

ಸುವರ್ಮ್ಯಾನ=ಗೌರವ ಮನ್ನಣೆಗಳ. ಖಾತ=ಆಳವಾದ ಕೆರೆ ಪ್ರಾಸಾದ=ಮೇಲುಪ್ಪರಿಗೆ, ನಿಕೇತನ=ಮನೆ, ಜಾತರೂಪ–ಬಂಗಾರ
ಕುರುವಕೆ=ಬೆಟ್ಟ. ಸಮುದ್ರದಲ್ಲಿರುವ ದ್ವೀಪ ನಡುಗಡ್ಡೆ ಭೇರಿ=ನಗಾರಿ ದುಂದುಭಿ ನಿಸ್ಸಾಳ=ದೊಡ್ಡ ನಗಾರಿ ಪಟಹ=ಹಲಗೆ ತಮ್ಮಟ=ಚರ್ಮವಾದ್ಯ ಇವೆಲ್ಲ ವಾದ್ಯಗಳ ಹೆಸರು ಸೀ ಗುರು=ಸೂರ್ಯಪಾನ ಒಂದು ತರದ ಚಾಮರ

ದ್ರೋಣ ಭೀಷ್ಮಾದಿಗಳು ರಾಜನನ್ನು ಎದಿರುಗೊಂಡದ್ದು

ಅಪ್ರತಿಮ ಹಸ್ತಿನಾವತಿಯ ವಿಭವಂ ನೋಡಿ ।
ಸುಪ್ರಮೋದಿತನಾಗಿ ಧರ್ಮಜಂ ಬಳಿಕ ನಗ ।
ರ ಪ್ರವೇಶಕೆ ಬರಲು ದೂತರೀ ವಾರ್ತೆಯಂ ಧೃತರಾಷ್ಟ್ರ ಭೂಪಾಲಗೆ॥
ಕ್ಷಿಪ್ರದಿಂದರುಹಲ್ಕೆ ಹರುಷದಿಂ ದ್ರೋಣ ಭೀ ।
ಷ್ಮ ಪ್ರಮುಖರಂ ಕಳುಹಲಾ ಪಾಂಡುಸುತರ ಮ ।
ಹ ಪ್ರೀತಿಯಿಂದಿದಿರ್ಗೊಂಡು ಪಟ್ಟಣವ ಪೊಗಸಿದರು
ಸುವಿಲಾಸದಿಂದ ॥೧೦೫॥

ಧರ್ಮಜನ ಪುರ ಪ್ರವೇಶ ವರ್ಣನೆ

ಭೇರಿ ನಿಸ್ಸಾಳ ತಂಬಟೆ ಪಟಹ ಕಹಳೆಗಳ ।
ಭೋರೆಂಬ ರವದೊಡನೆ ಪಾಂಡುವರ್ ಮಘ ಮಘಿಪ ।
ಚಾರುತರ ರಾಜ ಬೀದಿಯೊಳ್ಪೈದೆ ನಡೆ ತರಲ್ಮಲ್ಲಿಗೆಯ ಮಳೆಗರವುತಾ ॥
ನೀರಜಾಕ್ಷಿಯರಗರು ಚಂದನ ಹರಿದ್ರಮಯ ।
ದಾರತಿಗಳಂ ಬೆಳಗೆ ನಸುನಗೆಯೊಳೀಕ್ಷಿಸುತ ।
ಭೂರಮಣ ರಿಕ್ಕೆಲದ ಜನರ ವಂದನೆಗಳಂ ಕೈಕೊಳುತ
ಮುಂದೆಳೆಯಲು ॥೧೦೬॥

ಉನ್ನತುದಯಾದ್ರಿ ಯಂತೆಸೆವ ಮದಮಾತಂಗ ।
ಬೆನ್ನಿನಲಿ ತೊಳಗುವೆಳೆ ನ್ಯಾಸದೋಳ್ ಧಳಧಳಿಪ ।
ರನ್ನದುಡುಪುಗಳ ಮಣಿಕಾಂತಿಯಿಂ ಪಾಂಡುವಂ ವಿಭ್ರಾಜಿಸುತ್ತಿರಲ್ಕೆ ॥
ಕೆನ್ನೈದಿಲಿಯುಗಣ್ಣ ತಿಣ್ಣ ಮೊಲೆಗಳನಾಂತು ।
ಚನ್ನೆಯರ ಮುಖಕಮಲ ತೋಷದಿಂದರಳೆ ಬಾ ।
ವನ್ನ ಗಂಪಿನಹರ್ಮ್ಯ ಗೋಪುರವಡರ್ದು ನೋಡಿದ ರಾಗ ಕೆಲಬಲ
ದೊಳು ॥೧೦೭॥

ಪೌರಜನ ಪರಿಜನರ ಗಡಣದಿಂ ಪಾಂಡುವ ।
ರ್ಚಾರು ಹಾಸದೊಳಾಗ ಲರಮನಿಗೆ ನಡೆತಂದು ।
ವಾರಣವರಾಧಂಗಳಿಳಿದು ಧೃತರಾಷ್ಟ್ರನಂ ಕಂಡು ಪುಳಕೋತ್ಸವ
ದೊಳು ॥

ಸಾರುವಾನಂದಾಶ್ರು ಕಂಗಳಿಂ ದಡಿಯುಗಕೆ ।
ಧೋರ ಮೌಕ್ತಿಕ ಸುರತ್ನಂಗಳಂ ಸುರಿದು ಕರ ।
ವಾರಿರುಹಗಳ್ ಮುಗಿದು ಭಯಭರಿತ ಭಕ್ತಿಯಿಂ ಸಾಷ್ಟಾಂಗದಿಂ
ದೆರಗಲೂ ॥೧೦೮ ॥

ಧರ್ಮಾದಿಗೆ ಧೃತರಾಷ್ಟ್ರಾದಿಗಳ ದರ್ಶನ

ಬಾ ಮಗನೆ ಬಾಕಂದ ಧರ್ಮಸುತ ರಿಪುವಿಜಯ ।
ಭೀಮರಣ ನೀಸ್ಸೀಮ ಬಾಯೆನ್ನ ಮರಿಯಾನೆ ।
ಸೋಮವಂಶಾನಂದಕರ ಧನಂಜಯ ನಕುಲ ಸಹದೇವ ಬಾ-
ಯೆನುತಲಿ ॥

ಪ್ರೇಮರಸ ದಿಂದಂಧನೃಪ ಬ್ಯಾರೆ ಬ್ಯಾರೆ ವರ ।
ಕೋಮಲ ಶರೀರಗಳನಪ್ಪಿ ಮುಂಡಾಡಿ (ಮುದ್ದಾಡಿ) ಪದ ।
ತಾಮರಸ ಕೆರಗುತಿಹ ಕುಂತಿ ಪಾಂಚಾಲೆಯರ ಪರಕೆಯಿಂ-
ಮನ್ನಿಸಿದನು ॥೧೦೯ ॥

ಪಾಂಡುವರು ಗಾಂಧಾರಿ ಭೆಟ್ಟಿಯಾಗುವಿಕೆ

ಆ ಸುಬಲ ಸುತೆಯು ಚರಣ ಕ್ಕ್ರೈಪರೆರಗಲ್ಕೆ ।
ನೂಸುವೆಳೆ ನಗೆಯಿಂದ ಪಿಡಿದೆತ್ತಿ ಪರಸುತ್ತ ।
ಭಾಸುರ ಸುಮಂಗಳಾರುತಿಯ ತರಿಸೆತ್ತಿಸಿದಳಾಗ ಕೆಳದಿಯರ ಕೂಡೆ ॥
ಕೋಶದಿಂ ಗಂಧಮಾಲ್ಯಾದಿ ದಿವ್ಯಾಂಬರ ವಿ ।
ಭೂಷಣವ ತೆಗಸಿತ್ತು ರಾಜೋಪಚಾರದ ವಿ ।
ಲಾಸವಿಭವದಲಿ ಸತ್ಕರಿಸಿದಳ್ ಪ್ರೀತಿಯಿಂ ಮೃದುವಚನ ರಚನೆ-
ಯಿಂದ ॥೧೧೦ ॥

ಕಪಟ ಕೌರವನು ಧರ್ಮಾದಿಗಳ ಭೆಟಿ ಮಾಡಿದ

ತದನಂತರದೊಳಾ ಸುಯೋಧನಂ ನೆನದೆಣಿಕೆ ।
ಒದಗಿತೆನುತನುಜ ತನುಜರ್ ಸಹಿತ ಪಾಂಡುವರ ।
ಮುದದಿಂದ ಕಾಣುತಾಲಿಂಗನಂ ಗೈದು ಬಹು ವಿನಯದಿಂ ಕುಂತಿಗೆರಗಿ॥

---

ತೊಳಗು=ಹೊಳೆಪ್ರಕಾಶಿಸು ವೆಳನ್ಯಾಸ=ನ್ಯಾಸ, ಮುದ್ರೆ, ಚಿನ್ಹ
ಸುಬಲಸುತೆ=ಸೌಬಲರಾಜನ ಮಗಳು=ಗಾಂಧಾರಿ

ಪದುಳವಮಂ ಕೇಳುತುಪಚರಿಸಿದಂ ಕಪಟಿಗಳ ।
ಹೃದಯದೋಳ್ ಪುದಗಿರ್ದ ಘಾತಕವ ಬಲ್ಲರೇ ।
ಸದಮಲ ಚರಿತ್ರರೀ ಖಳರ ಮೃದು ವಾಕ್ಯಕ್ಕೆ ಮರುಳಾದ
ರೇವೇಳ್ವೆನು ॥೧೧॥

ಭೂವರ ಯುಧಿಷ್ಠರಂ ಸಕಲ ಬಂಧುಗಳ ಸಂ ।
ಭಾವಿಸುತ ಸುಖಗೋಷ್ಟಿಯಿಂದ ಕುಳ್ಳಿರ್ದ ಬಳಿ ।
ಕಾವ್ಯಾಳಿಯೋಳ್ ಗತಾಂಬಕ ಪಾಂಡುವರ್ಗೆಂದನೆಲೆ ಮಕ್ಕಳಿರೆ
ನಿಮ್ಮನು ॥

ಆವಾಗೆ ಕಾಣ್ಬೆನೆಂದಭಿಲಾಷೆಯಿತ್ತೆನಗೆ ।
ನೀವೈವರೆನ್ನಾಜ್ಞೆಯಂ ಮೀರದೈತಂದಿ ।
ನೀ ವಿದುರನೊಡನೆ ಬಹು ಲೇಸಾಯ್ತು ಸಂತೋಷಮುಯುನಾದೆ
ನಾನೆಂದನು ॥೧೨॥

ತಮ್ಮನೋಪಾದೆಯಲಿ ನೋಡಿಕೊಂಡಿರ್ಪೆ ನಾ ।
ನಿಮ್ಮೈವರಂ ಪ್ರೀತಿಯಿಂದ ಮಖ ವ್ರತ ದೀಕ್ಷೆ ।
ಇಮ್ಮಹಾ ಶ್ರಮಸಿರ್ಪರೆಂದು ಕರಿಸಿರ್ಪನದರಿಂ ನೀವನುದಿನದೊಳು ॥
ಸುಮ್ಮಾನದಿಂದಲೀ ಪುರದೊಳಗೆ ಕ್ರೀಡೆಯು ।
ತಮ್ಮ ನೂರ್ವರ ಕೂಡೆ ರಮಿಸು ತಿರುತಿರ್ದಡಂ ।
ಸಮ್ಮತಂ ತನಗಿಪ್ಪುದೆಂದು ಕರುಣದೊಳಾಗ ಧೃತರಾಷ್ಟ್ರ ನೃಪ
ನುಡಿದನು ॥೧೩॥

ಧರ್ಮನು ಕಪಟ ತಿಳಿಯದೇ ಬಿನ್ನೈಸಿದ

ಹಿರಿಯಯ್ಯ ನುಡಿದ ವಾಕ್ಯಂಗಳಂ ಕಪಟ ವೆಂ ।
ದರಿಯದೆ ಯುಧಿಷ್ಠರಂ ದಿಟವೆಂದು ತಿಳಿದು ಮಿಗೆ ।
ಹರುಷಮಂ ತಾಳ್ದು ಬಿನ್ನೈಸಿದಂಜೀಯಾನಿಮ್ಮಾಜ್ಞೆಯೆಂತಿರ್ಪನೆನುತಾ
ನೆನುತಾ (ತಪ್ಪೆನೆನುತಾ) ॥

ಚರಣಕಾನತನಾಗಿ ಬೀಳ್ಕೊಂಡು ಸುತ ಸಹೋ ।

---

ಕೈವಾರಿಸುವ=ಹೊಗಳುವ ಪ್ರಶಂಸನಮಾಡುವ ಪಾಠಕರ=ಭಟ್ಟಂಗಿಗಳು
ಮಂತ್ರ್ಯಾದಿ ಸಕಲರು ಧರ್ಮನ ಸಂದರ್ಶನ

ದರ ರಾಣಿಯರ್ ಸಹಿತ ಬ್ಯಾರೆ ರಚಿಸಿರ್ದ ಮಂ ।
ದಿರ ಪ್ರವೇಶಂ ಗೈದನಾಗ ಕೈವಾರಿಸುವ ವಾರಕರ ರಭಸದಿಂದ ॥೧೧೪॥
ಬಂದು ಕಂಡಡುನಕಳ ಪೌರಜನ ಮಂತ್ರಿಗಳ್ ।
ತಂದಿತ್ತು ಕಾಣಿಕೆಯು ತಮ ತಮಗ ಶಿರಬಾಗಿ ।
ವಂದಿಸಿದರಾ ಧರ್ಮತನಯಂಗೆ ಬಳಿಕ ಕಾಣಿಸಿಕೊಂಡ ರುಳಿದ-
ಭಟರು ॥
ಸಂದಣಿಸಿ ನೆರದುದಾಕವಿಗಮುಕಿ ನಾಯಕರು ।
ವೃಂದಮಾಗಧ ಬಂದಿ ನಟನರ್ತಕಿಯು ರೊಲಿದು ।
ಚಂದದಿಂದೋಲ್ಗೈಸಿದರ್ ಮಧುರ ತರವಾದ ಗೀತಾ (ಮಧುರವಾದ
ಗೀತ ವಾದ್ಯಗಳಿಂದ) ಪ್ರಬಂಧದಿಂದ ॥೧೧೫ ॥
ಗೌತಮಶ್ವಥ್ಥಾಮ ಚಾಪಾಗಮಾಚಾರ್ಯ ।
ನೀತಿಕೋವಿದ ವಿದುರ ಗಾಂಗೇಯರ್ಕ್ರತರಲ್ ।
ಮಾತರಿಶ್ವಾತ್ಮಜ ಯುಧಿಷ್ಟರಾರ್ಜುನ ನಕುಲ ಸಹದೇವ-
ರಿದಿರೇಳುತಾ ॥
ಜಾತರೂಪಾಲಂಕೃತಾಸನವನಿತ್ತು ಸಂ ।
ಪ್ರೀತಿಯಿಂದವರ ಸತ್ಕರಿಸಿ ವಂದಿಸಿ ವಿವಿಧ ।
ಮಾತುಗಳ ರಾಜಕಾರ್ಯ ಸ್ಥಿತಿಯ ಕೇಳುತಲೆ ಸಂತಸದೊಳಿರು-
ತಿರ್ದರು ॥೧೧೬ ॥

ಧರ್ಮಾದಿಗಳು ಸುಖದಿಂ ವಾಸಿಸಿದರು

ಅ ದಿವಸ ಮಜ್ಜನ ಸುಗಂಧ ಪರಿಮಳ ಭೋಜ ।
ನಾದಿ ಸಂಭೋಗದಿಂ ಪೌಢತರ ಕವಿಗಳ ವಿ ।
ನೋದಕರ ವಾಕ್ಯದಿಂ ಧರ್ಮ ಪ್ರಸಂಗದಿಂ ಸತ್ಕಥಾಲಾಪದಿಂದ ॥
ಮೇದನೀ ಪತಿಧರ್ಮ ಸಂಭವಂ ಚಿತ್ತದೋಳ್ ।
ಭೂಧರ ಶ್ರೀ ಮನೋಹರ ವಿಠ್ಠಲನ ಲಲಿತ ।
ಪಾದ ಪಲ್ಲವ ಯುಗಳಮಂ ಬಿಡದೆ ನೆನೆವುತಾ **ಗಜಪುರ** ದೊಳಿರು
ತಿರ್ದನು ॥೧೧೭ ॥

---

ಓಲ್ಗೈಸಿದರ್=ಓಲೈಸಿದರು=ಸೇವೆಮಾಡಿದರು
ಚಾಪಾಗಮಾಚಾರ್ಯ=ಬಿಲ್ಲು ಶಸ್ತ್ರವಿದ್ಯೆಗಳಲ್ಲಿ ನಿಪುಣರಾದ ದ್ರೋಣಾಚಾರ್ಯರು

ಇತಿ ಶ್ರೀ ಭವಿಷೋತ್ತರ ಪುರಾಣೋಕ್ತ ಶ್ರೀ ಮದನಂ
ತ ಕಥಾ ಪ್ರಸಂಗೆ ಸಂಧಿ (೪) ಪೀಟಿಕಾ ಸಂಧಿಸಹ ಸಂಧಿ ೫ ಕ್ಕೆ
ಮಂಗಳಮಹಾ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣ ಮಸ್ತು ||

---

ಶ್ರೀ ಗುರುಭ್ಯೋನಮಃ

## ಅಥ ಆರನೇ ಸಂಧಿ

ರಾಗ ತೋಡಿ

### ಸಂಧಿ ಸೂಚನೆ

ಶ್ರೀ ಪತಿಯ ಕರುಣದಿಂ ಪಾಂಡುನಂದನರೈವ |
ರಾ ಫಣಿಧ್ವಜ ನೆಸಗಿದುಪಹತಿಗಳಂ ಗೆಲ್ದು |
ದ್ರೌಪದಿಯ ಮಾನಮಂ ಪಡೆದು ಸಂತೋಷದಿಂ ಗಜ ನಗರ
ಪೊರಮಟ್ಟನು ||

### ಪದನು

ಶ್ರೀ ಕೃಷ್ಣ ಸ್ತುತಿ

ರಂಗ ನೀಲಾಂಗ ಕಾಳಿಂಗ ಮದಭಂಗ ಮಾ |
ತಂಗ ಪುಂಗವ ರಕ್ಷ ನಂಗಪಿತ ಧೀರ ನರ |
ಸಿಂಗ ವರ ಶ್ರೀ ಕೋಮಲಾಂಗನಾ ಸಂಗ ದೋಷೋತ್ತುಂಗ ಹರಿ
ಕೃಪಾಂಗಾ ||

ಸಂಗೀತಲೋಲ ಗಂಗಾಜನಕ ನಿಸ್ಸಂಗ |
ಶೃಂಗಾರ ರೂಪ ಪ್ಲವಂಗ ಪತಿ ಸಕಲ ಜಡ |
ಜಂಗಮಂ ವ್ಯಾಪ್ತ ಶ್ರೀ ಕೃಷ್ಣ ದ್ರೌಪದಿ ವರದ ಹಿಂಗದೀವುದು
ಮಂಗಳ ||೧||

ಶ್ರೀ ಹನುಮಂತ ದೇವರ ಸ್ತೋತ್ರ

ಅಂಜನೆಯ ಗರ್ಭದಿಂ ಬಂದು ಕರುಣಾಸಿಂಧು |
ಕಂಜ ಸಖ ಕುಲತಿಲಕನಂ ಕಂಡು ಮುಂಕೊಂಡು |
ರಂಜಿಸುವ ವಾರಿನಿಧಿಯಂ ಹಾರಿ ದೈತ್ಯಾರಿ ನಾರಿಗೊಂದಿಸಿ ಲಂಕೆಯಾ ||
ಅಂಜದೆ ಸಪ್ತಾರ್ಚಿ ಗುಣಲಿತ್ತು ವನ ಕಿತ್ತು |
ಭಂಜನೆಯ ಮಾಡಿ ರಾಕ್ಷಸ ತತಿಯ ಭೂಸುತೆಯ |

ಮಂಜುಳ ಕುರುಹು ತಂದ ಹನುಮಂತ ಗುಣವಂತ ಕರುಣಿಸೆನಗಮಲ
ಮತಿಯಾ ||೨||

**ಭಾರತೀ ದೇವಿ ಸ್ತುತಿ**

ಭೇರಿನಾಮದ ಖಳನ ಕೊಂದವನ ಕೊಂದವನ।
ನಾರಿಯಂ ಪಡದವಳ ತನುಭವನ ತನುಭವನ।
ವಾರಣವ ತರಿದವನ ಸಂಭವನ ಸಂಭವನ ಮಾತುಳನ ಮಾತುಳನನು||
ಆರಜನಿಯೊಳ್ ಸೀಳ್ದವನ ಸತಿಯು ಪತಿವೃತೆಯ।
ಚಾರು ಚರಣಾಬ್ಜಮಂ ಭಕ್ತಿಯಿಂ ಮುಕ್ತಿಯಿಂ। (ಯುಕ್ತಿಯಿಂ)
ದಾರಾಧಿಸುತ ಸತತ ಸದ್ಗತಿಯ ಸನ್ಮತಿಯ ನಿಶ್ಚೈಸುವೆಂ
ಮನದೊಳು ||೩||

**ಶೌನಕರ ಪ್ರಶ್ನ**

ಎಲೆ ಮುನಿಪ ಕೇಳ್ ಪೂರ್ವಕೃತ ಪುಣ್ಯದಿಂದೆಮಗ।
ನಳಿನಾಂಬಕನ ಕಥಾಮೃತಪಾನ ದೊರಕಿದದು।
ನಲೆಧನ್ಯರಾದೆವಿನ್ನುತ್ತರದ ಸಚರಿತ್ರ ನೀವೊಲಿದು ಪೇಳ್ವದೆಂದು ||
ನಲುವಿನಿಂ ಶೌನಕರ್ ಸೂತಂಗೆ ಕೈ ಮುಗಿವು
ತಲೆಬಿನ್ನ ಪಂಗೈಯ್ಯಲಾತ ಸಂತೋಷದಿಂ।
ದಿಳಿಯೊಳಚ್ಚರಿಯನಿಪ ಪರಮ ಪಾವನ ಸುಪ್ರಸಂಗಮಂ ವಿವರಿಸಿದನು
||೪||

**ಸೂತರು ಪೇಳಿದ್ದರು ಧರ್ಮನಿಗೆ ದುಃಸ್ವಪ್ನ**

ಆಲಿಸಾದಡೆ ಮುನಿಗಳಿರೆ ಸ್ವಸ್ಥ ಚಿತ್ತದಿ ವಿ।
ಶಾಲತರ ಮುಂಗಥೆಯ ಧರ್ಮಜಂ ಹರುಷದಿಂ।
ದೋಲಗವ ಬೀಳ್ಕೊಟ್ಟು ಸುಖ ನಿದ್ರೆಯಿಂದಿರಲ್ಕಿರುಳಿನೊಳ್
ಸ್ವಪ್ನದಲ್ಲಿ ||
ಮೇಲಾದ ಪ್ರಾಸಾದ ಮುರಿದಿಳೆಗೆ ಬಿದ್ದುದಂ।
ಕಾಲ ನಡೆಯಲ್ಲಿ ಕಾನನ ಪರಿಭ್ರಮಣೆಯಿಂ।

---

**ಮುಂಕೊಂಡು=ಮುಂದುವರಿ ಮುಂದಾಗು ೩ ನೇ ಪದ್ಯ ಪಾಪಿ ಶ್ಲೋಕವಿದೆ ಇದರ ವಿಚಾರ ಹಿಂದಿನಿಂದ**

ದಾ ಲಲನೆ ಸಹಿರ್ತಿರ್ಪದಂ ಕಂಡನಾಕ್ಷಣದೊಳುದಯವಾಗೆದ್ದು
ಬಳಿಕ ॥೫॥

ಧೌಮ್ಯರು ದುಃಸ್ವಪ್ನ ಶಾಂತಿಗೈಯಲು ಪೇಳ್ದರು

ಅರಸು ದುಸ್ವಪ್ನಮಂ ನೆನದು ವೈಮನಸಿನೊಳ್ ।
ಹರಿಯ ಚರಣಾಬ್ಜಮಂ ಸ್ಮರಿಸಿ ಸಂಧ್ಯಾದಿಗಳ ।
ವಿರಚಿಸುತ ಸಿಂಹಾಸನದಿ ಕುಳಿತು ಧೌಮ್ಯನಂ ಕರಸಿ ಕನಸಂ ಪೇಳಲು॥
ಧರಣೀಶ ದುಸ್ತರದ ಸ್ವಪ್ನಮಿದು ಶಾಂತಿಯಂ ।
ತ್ವರಿತದಿಂ ಮಾಡೆ ದುರಿ ತೌಘ ಪರಿಹಾರ ವೆಂ ।
ದರುಹಲಾ ಸಮಯದೊಳ್ ಧೃತರಾಷ್ಟ್ರ ಭೂಪನಟ್ಟಿದ ದೂತ
ರೈತಂದರು ॥೬॥

ಶಾಂತಿಗೈಯ್ಯದೆ ಆವಸರದಿ ರಾಜನು ಸಭಗೆ ಪೊರಟ

ಜೀಯ ಚಿತ್ತೈಸು ಧೃತರಾಷ್ಟ್ರ ಬರಹೇಳಿದಂ ।
ರಾಯ ನೈವರನ ಬಿಜಯಂ ಗೈವುದೆನೆ ಕೇಳು ।
ತಾಯುಧಿಷ್ಟರ ಮಹಾ ಸಂಭ್ರಮವ ತಾಳ್ದವರ್ಗುಚಿತಮಂ ।
ಕೊಟ್ಟುಮನದಿ ॥
ಮಾಯ ಜಾಲಗಳ ರಚಿಸಿರ್ಪರೆಂದರಿಯದಲೆ ।
ಪ್ರೀಯದಿಂ ಕರೆಸಿರ್ಪನೆಂದು ಭಾವಿಸಿ ನಗುತ ।
ವಾಯುಸುತ ನರ ನಕುಲ ಸಹದೇವರೊಡಗೂಡಿ ಪೊರಮಟ್ಟೆ
ನರಮನೆಯ ॥೭॥

ಪಾಂಡುವರಿಗೆ ಧೃತರಾಷ ಮಾನ ಮಾಡಿ ಕುಳ್ಳಿರಿಸುವಿಕೆ.

ಬಂದು ಧೃತರಾಷ್ಟ್ರ ಭೂಪಾಲನಡಿ ಗೈವರು ।
ವಂದಿಸಿದಡೆನ್ನ ಮರಿಯಾನೆಗಳಿರೈ ತಂದಿ ।
ರೆಂದು ತರ್ಕೈಸಿ ಮಧುರ ಪ್ರೀತಿವಚನ ದಿಂದೆಳೆದು ಕುಳ್ಳಿರಿಸಿಕೊಂಡು ॥

ಕೌರವನು ಶಕುನಿಗೆ ಜಪಡಿ ಆಟವ ಪೇಳ್ದ

ಮಂದಹಾಸದೊಳಿವರ ನುಪಚರಿಸಿ ತಿರಲಿತ್ತ ।
ಕಂದು ಹೃದಯದ ಕೌರವೇಶ್ವರಂ ಕೇಳುತಾ ।
ನಂದದಿಂ ಸೌಬಲಂ ಗುರುಹಿದಂ ಕಪಟ ಹಾಸಂಗಿಗಳ ವಿರಚಿ
ಸೆಂದು ॥೮॥

ಶಕುನಿಯಿಂ ಪಗಡಿಯಾಟ ಸಿದ್ಧತೆಮಾಡ್ದ

ಬಳಿಕವಂ ಗಣಪ ಯಕ್ಷೇಶ್ವರ ಕುಳಾವತೀ ।
ಛಲಚಂಡಿ ಚಾಮುಂಡಿ ದುರ್ಗಿ ಮಾಯಾವತೀ ।
ಹಲವುಶಕ್ತಿಗಳೆಂಬ ತನ್ನ ಕುಲದೇವತೆಗಳರ್ಚಿಸುತ ಹರಿಸಿ ಕೊಂಡು ॥
ಬಲಿವಿಧಾನದ ಧೂಪ ವಿವಿಧೋಪಹಾ(ಚಾ)ರ ಸಂ ।
ಮಿಳಿತಥರ್ವಣ ಮಂತ್ರ ತಂತ್ರದಿಂ ಕೃತ್ರಿಮದ ।
ಬಲುವಶೀ ಕರಹಲಿಗೆ ಹಾಸಂಗಿಗಳ ಸೃಜಿಸಿದಂ ಗೌಪ್ಯದಲಿ ಖಳನು- ॥೯ ॥

ದ್ಯೂತ ಸಿದ್ಧಿಯಮಂತ್ರ ವಾಗ್ಬಂಧ ಪರಮ ವಿ ।
ದ್ಯಾತಿಶಯ ವಿಚ್ಛೇದ ದೃಷ್ಟಿ ಬಂಧನ ಶತ್ರು ।
ವ್ರಾತ ಜಯ ಯಂತ್ರವರ ಸನ್ಮೋಹ ನೌಷಧಿಯ ವ್ಯಾಳ್ಯೆಸಿ ಧೂರ್ತ ತನದಿ ॥

ಪಾತಕಿಗಳಾ ಶಕುನಿ ಕರ್ನ ಸೈಂಧವ ವಂಶ ।
ಘಾತನವ ದುರ್ಯೋಧನಾದಿಗಳ್ ಕೂಡಿ ತ ।
ಮ್ಮಾತ ನಾಗಿಹ ಗತಾಂಬಕ ನಡಿಗೆ ನಡೆತಂದು ಬಿನ್ನೈಸಿದರ್ ಮುದದಲಿ ॥೧೦॥

ಕೌರವನು ಧೃತರಾಷ್ಟ್ರನಿಗೆ ಬಿನ್ನೈಸುವಿಕೆ

ಚಿತ್ತವಿಸಿದರೆ ಬೊಪ್ಪ ಮಯನೆಂದು ಪಾಂಡುವ ।
ರ್ಗಿತ್ತ ಮಖಮಂಟಪಂ ದೇವನಿರ್ಮಿತವಲಾ ।
ಉತ್ತಮವ ಧಿಟ ಮಹೀ ಮಂಡಲದೊಳಿತರ ಸಭೆ ಸರಿಸವಲ್ಲದಕೆ ನೋಡೆ ॥

ಇತ್ತ ನಿಮ್ಮಾಜ್ಞೆಯಂ ಮಾಡಿಸಿದ ಸಭೆ ಪೂರ್ತಿ ।
ವೆತ್ತಿರ್ಪುದಲ್ಲಿ ಗೈತಂದು ಕುಳ್ಳಿರ್ದರೆನ ।
ಗತ್ಯಂತ ಪರಿತೋಷ ದೊರಕೊಂಬುದೆಂದು ನಗುತಾ ಸುಯೋಧನ ನುಡಿದನು ॥೧೧॥

---

೯ ನೇ ಪದ್ಯದಲ್ಲಿ ವಿವರಿಸಿದ ಶಕ್ತ್ಯಾದಿ ಕ್ಷುಲ್ಲಕ ದೇವತೆಗಳು ಮಾಯಾ ಮಂತ್ರಗಳಿಗೆ ಅಭಿಮಾನಿಗಳು ಪರರನ್ನು ಕಪಟದಿಂ ಗೆಲ್ವ ಉಪಾಯಗಳು

*

**ಧೃತರಾಷ್ಟ್ರನು ಧರ್ಮಜನ ಕರನಿಡಿದು ಸಭೆಗೆ ಬಂದದು**

ಆ ಮಹಾ ಸಭೆ ತನಗೆ ತೋರಿಸುವೆನೆಂಬ ಸು ।
ಪ್ರೇಮ ನಿನಗುಂಟಾದರೆಲೆ ಮಗನೆ ಲೇಸೆನುತ ।
ಲಾ ಮಹಿಪನೆದ್ದು ಪೊರಮಟ್ಟ ನಂತಃಪುರವ ಧರ್ಮಜನ ಕರವ
ಪಿಡಿದು ॥

ಭೂಮಿಶ ರೊಗ್ಗಿನಿಂ ಕರ್ಣ ಭೀಷ್ಮ ದ್ರೋಣ ।
ರಾ ಮಕ್ಕಳೊಡನೆ ಕೈವಾರಿಸುವ ಪಾರಕರ ।
ಸ್ತೋಮದಿಂ ಮಂಟಪಕೆ ಬಂದಲ್ಲಿ ಕುಳ್ಳಿರಲ್ ಮಣಿಕಾಂತಿ
ಕಣ್ಗೆಸೆದದು ॥೧೨॥

**ಸಭಾಮಂಟಪ ವರ್ಣನೆ**

ಬಿಗಿದ ನೀಲದ ಸಿರಿಯ ನೆಲಗಟ್ಟು ಪಚ್ಚೆಯದ ।
ಝಗ ಝಗಿಪ ವಜ್ರ ವೈಡೂರ್ಯ ಭಿತ್ತಿಗಳ ಕೆಂ ।
ಪುಗೆದ ವಿದ್ರುಮದ ಲೋವಿಗಳ ಗೋಮೇಧಿಕದ ವೇದಿಗಳ ಶೃಂಗಾರದ॥
ಬಗೆ ಬಗೆಯ ಮಣಿ ಖಚಿತ ಪುತ್ಥಳಿಯ ಮೌಕ್ತಿಕದ ।
ಸೊಗಯಿಸುವ ಮಾಲೆಗಳ ಮಾಣಿಕದ ಸ್ತಂಭಗಳ ।
ಪೊಗರೊಗುವ ರತ್ನಗಳ ಬಂಧುರದ ತೇಜದಿಂ ರಾಜ ಸಭೆ
ರಾಜಿಸಿದದು ॥೧೩॥

ಅಲ್ಲಿ ವಿಮಳುದ್ಯಾನವೀಧಿಗಳ ವಿಸ್ತಾರ ।
ವಲ್ಲಿ ತಾವರೆಯುಕ್ತ ತಂಗೊಳನ ತಾಣಂಗ ।
ಳಲ್ಲಿ ಮಧುಕರಹಂಸ ಮಯ್ಯೂರ ಕಾರುಂಡ ಶುಕಪಿಕಾನಿನ-
ದಂಗಳು ॥

ಅಲ್ಲಿ ಕೇಳೀಶ್ಶೈಲ ಹಿಮಗೃಹಂ ಜಲಜಂತ್ರ ।
ವಲ್ಲಿ ಮುಕುರಸ್ಥಾನ ಪರಿಪರಿಯ ರಚನಂಗ ।
ಳಲ್ಲಿ ಪಾಂಡುವರ ಮಖಶಾಲೆಯಂತೆಸದುದೀ ಕೌರವೇಶ್ವರನ-
ಸಭೆಯೂ ॥೧೪॥

**ಧರ್ಮಾದಿಗಳು ಸಭೆಗೆ ಬೆರಗಾಗದೆ ಆನಂದದಿಂ ಬರುವಕೆ.**

ಮಂದಮತಿ ಕೌರವನ ತೆರದಿಂದ ಧರ್ಮಜಂ ।

ಮುಂದುಗೆಟ್ಟನೆ ಸಭೆಯನೋಡಿ ಕಳವಳಿಸಿದನೆ ।
ಚಂದದಿಂ ದನುಜರೊಡನಾ ಸ್ಥಾನ ಚಲ್ವಿಕೆಯ ಪೊಗಳುತ್ತ ಕುಳ್ಳಿರಲ್ಕೆ ॥
ಬಂದು ನೆರದದು ಸಚಿವ ಸಾಮಂತ ಭೂಪಾಲ ।
ವೃಂದಂ ಮಹಾರಥಿಕ ಪಟುಭಟಾವಳಿನಿವಹ ।
ಸಂದಣಿಸಿತಪರಿಮಿತ ಸೂತಮಾಗಧ ಬಂದಿ ಕವಿಗಮಕಿ ನರ್ತಕಿ-
ಯರು ॥೧೫॥

ಗುರುನದೀಸುತ ಕರ್ನ ಸೈಂಧವ ಶ್ವಥ್ಥಾಮ ।
ದುರುಳ ಸೌಬಲ ಸೋಮದತ್ತ ಭೂರಿಶ್ರವಂ ।
ಧರಣಿಪತಿ ಬಾಹ್ಲೀಕ ಭಗದತ್ತ ಕ್ಷತ್ರಂ ಕೃಪಾಚಾರ್ಯ ದುಃಶಾಸನಾ ॥
ಕರುಬ ದುರ್ಮುಖ ವಿಕರ್ನಾದಿ ಕೌರವ ಸಹೋ ।
ದರ ರಾಜಪುತ್ರ ಭೂಸುರ ಮುನಿಜನಂಗಳಿಂ ।
ಮೆರೆದುದಾ ಸಭೆ ನೃಪ ನೋಲಗದ ಸೌಭಾಗ್ಯದಂತೆ ರಮಣೀಯ-
ವಾಗಿ ॥೧೬ ॥

ಸಭೆಯಲ್ಲಿ ನೃತ್ಯ ಗಾಯನಾದಿಗಳು

ಒಂದು ಕಡೆಯಲಿ ದ್ಯೂತ ಕೇಳಿ ಚದುರಂಗ ಮೇ ।
ಣೊಂದು ಬಳಿಯಿಲಿ ಗದ್ಯ ಪದ್ಯ ಸುವಿಲಾಸಂಗ ।
ಳೊಂದು ದಿಕ್ಕಿಲಿ ವಾರನಾರಿಯರ ಶೃಂಗಾರ ಸಾರಸಂಗೀತ-
ರಭಸಾ ॥
ಒಂದು ಮೈಯಲಿ ತರ್ಕ ಶ್ರುತಿ ಶಾಸ್ತ್ರವಾದಂಗ ।
ಳೊಂದು ದೆಶೆಯಲಿ ವೇಣು ವೀಣಾದಿ ನಾದಂಗ ॥
ಳೊಂದು ಭಾಗದಿ ಶಕುನಿ ರಚಿಸಿರ್ದ ಲೆತ್ತ ಸಾರೆಗಳಧ್ವನಿ-
ರಂಜಿಸಿದದು ॥೧೭ ॥

ಕವಿಯ ಆಶೆ

ತಾಪಸೋತ್ತಮ ರಾಲಿಸೀಮಹಾ ಭಾರತವ ।

---

ಒಗ್ಗಿನಿಂ=ಸಮೂಹದಿಂದ ಹಿಮಗೃಹ=ತಂಪಾದ ಶಾಂತ (ಮನಿ) ಜಲಜಂತ್ರ=ಕಾರಂಜಿ ತಂಗೊಳ=ತಂಪುಳ್ಳ ಕೊಳ=ತಂಪುಳ್ಳ ಸರೋವರ. ತಾಣ=ಬೀಡು, ಆಶ್ರಯ, ಸ್ಥಳ, ಮುಕುರ=ಕನ್ನಡಿ

ನಾಪೂರ್ವ ಪರವಾಗಿ ನಿಮಗೆಂದು ವಿಸ್ತಾರ ।
**ರೂಪದಿಂ ಪೇಳಿರ್ಪೆ ನೀಗನಂತನ ಕಥಾ** ಸಂಗತಿ ನಿಮಿತ್ಯದಿಂದ ॥
**ಪಾಪಹರಿಸುವ ಸಭಾಪರ್ವ ಪ್ರಸಂಗಗಳ ।**
ವಾ(ನಾ)ಪನಿತು ಸಂಕೋಚದಿಂ ಭಕ್ತಿಯಿಂ ।
ದೀ ಪುಣ್ಯತರವಾದ ಮುಂದಿನ ಚರಿತ್ರಮಂ ಕೇಳೆಂದು ಮುನಿ-
ನುಡಿದನು ॥೧೮॥

ಶಕುನಿ ದುರ್ಯೋಧನನಗೆ ಪೇಳ್ದನು

ಬಳಿಕಾ ಮಹಾಸಭೆಯೊಳಾಡುತಿಹ ಶಕುನಿ ಖಳ ।
ತಿಲಕ ದುರ್ಯೋಧನಂಗೆಂದನೆಲೆ ಧರ್ಮಜ ।
ತಿಳಿಯೆ ದ್ಯೂತಂಗಳಾಡಲ್ಕರಿಯನೋ ವೇಣುಬಲ್ಲಡೇಂ ತನ್ನಕೂಡೆ ॥
ನಿಲಲಿತಾ ಮಾಡುವೆವು ನೋಡಲಿ ವಿನೋದದಿಂ ।
ತಳುಮಾಡ ದೀಕ್ಷಣಂ ಬರಹೇಳುಲೆತ್ತ ಕೌ ।
ಶಲವರಿಯ ದವನಿಪಂ ಮೃಗಜಾತಿ ಯಂದಾಡವರ್ಬಲ್ಲ ಧರೆ-
ಯೊಳು ॥೧೯॥

ಧರ್ಮಜನು ಪೇಳ್ದನೆನೆ

ಲೇಸು ಹೊಲ್ಲಯ ಮಾವದಾಡ ಬಹುದೆಸಲೇ ।
ನಾ ಸಜ್ಜನರ ಕೂಡೆ ನೀವಲಾ ಕುಹಕ ವಿ ।
ದ್ಯಾ ಸಾರ್ವಭೌಮಕರ್ಶಕುನಿ ಕೌರವರು ಸದ್ ಹೃದಯರಿಗೆಕಪಟ-
ಗಳೊಳು ॥
ಆಶೆವರ್ಜಿತ ಭೋಗ ನಿಸ್ಪೃಹರಿಗತಿ ವಿಷಯ ।
ದಾಸಕ್ತಿ ಜನರೊಡನೆ ಸಂಗ ದುಸ್ಸಹಕಣಾ ।
ಮೋಸವಲೆ ದ್ಯೂತ ದುರ್ವ್ಯಸನ ಪ್ರಪಂಚ ವೆಂದನು ಧರ್ಮಸೂನು-
ನಗುತಾ ॥೨೦॥

ಶಕುನಿಯ ಉತ್ತರ

ನೀ ವಿಂದು ಸದ್‌ಹೃದಯ ರಾವು ಕುಟಿಲಾನ್ವಿತರ ।

---

ಮೃಗಜಾತಿ=ಚಿಗರೆಗಳು=ಬೇಟೆಗಾರನ ಅಂಬಿಗೆ ಗುರಿಯಾಗಿ ಚಿಗರೆ ಗಳಗುಂಪು ಬಲಿಯೊಳಗೆ ಬೀಳ್ವಂತೆ ಕರುಬ=ಹೊಟ್ಟೆಕಿಚ್ಚು ಮಾಡುವವ

ನೀವೆ ನಿಸ್ಪೃಹರಾವು ಕುಹಕ ವಿಷಯಾಸಕ್ತ ।
ಆ (ರಾ) ವುನೀ ವೆಂತೆಂಬ ಸ್ಪೃಧುಳ ಭಾವಾವಲಂಬನವ್ಯಾಕ ನಿಜವ-
ನರಿಯಾ ॥

ಕೊವೀದನೆ ದ್ಯೂತ ದುರ್ವಿಷಯ ವೆಂತೆಂಬ ಪರಿ ।
ಭಾವಯುತಿಗಳೀ ವೇಣ್ ರಣಭೀತಿ ಭೂಪರ್ಗೆ ।
ಈವ ಸುವುತೀಶ ಜಾತಿಂಗೆ ಮುಖ್ಯ ವ್ಯೆಸನವೆಂದು ಕುರುಪತಿ-
ನುಡಿದನು ॥೨೧ ॥

ಶಕುನಿ ಧರ್ಮರಾಜನ ಅವಹೇಲನ ಗೈದ

ಅರಸ ಕೇಳ್ ಕಾಳಗಕೆ ಜೂಜಿಂಗೆ ತಾವಾಗಿ ।
ಕರದ ಡೊಸರಿಸಿದಡೇ ಬಳಿಕವಂ ಕ್ಷತ್ರಿಯರ ।
ನೆರವಿಯೋಳ್ಗರುವನೇ ನೃಪನೀತಿ ನೀಬಲ್ಲೆ ಕರದೆ ವೈ
ನಾವಾಟಿಕೇ ॥

ಧರಣಿಪತಿ ಬೇಕಾಯ್ತೆ ಬಾ ರಾಜಧರ್ಮಗಳ ।
ನೊರಸುವರೇ ನಿಲ್ಲಿದರ ರಸವ ನಾಸ್ವಾದಿಸಿದ ।
ನರನೆಜಡ ರೂಪಿಯುಂದಾ ಸುಬಲ ಸುತನು ವೇಕ್ಷಿಸಿ ನುಡಿದ ನಸು-
ನಗುತಲಿ ॥೨೨ ॥

ಹಲವು ಮಾತಿನ್ನೇನು ಪೇಳಿಫಲ ಮನಿಗಳಿರ್ಪೈ (ಋಷಿಗಳಿರ್ಪೈ) ।
ಶಳದು ಕೆಡಹಿತು ಕಾಲಪಾಶ ವಾಕ್ಷಣದೊಳಗೆ ।
ಖಳರೊಡ್ಡಿದಾ ಜಾಲದೊಳಗಾಯುಧಿಷ್ಠರನ ಹರಿಯೊಲುಮೆ ಕವ-
ಲಾಗಲು ॥

ಒಲಿದುದರಸನಮನಸು ದ್ಯೂತದಲಿ ಬಂದನಾ ।
ಕಲಿಗಳಾಡುವ ಲೆತ್ತಸಾರಿ ಯಡೆಗದಕಾಣೊ ।
ತಳಲಿದರ್ ದ್ರೋಣಾದಿ ಸಜ್ಜನರ್ ನಲಿದರಾ ಶಕುನಿ ಕೌರವ-
ವೀರರು ॥೨೩॥

ದ್ಯೂತ ಪ್ರಾರಂಭ

ಬಳಿಕ ಹೇಳುವದೇನು (೧) ಹಲಿಗೆ ಇಕ್ಕಿತು ಹೊನ್ನ ।

---

ನೆರವಿಯೋಳ್=ಸಮುದಾಯದಲ್ಲಿ

ಕಳಸ ಮಣಿ ಖಚಿತ (೨) ಸಾರಿಗಳಿಳಿಹಿದವು ಜನರ ।
ಕಳಕಳವ ನಿಲ ಹೇಳಿಸುತ್ತ ಕಪಟ ಹಾಸಂಗಿಗಳ ಹೊಸದು-
ಗರ್ಜಿಸುತ್ತಾ ॥
ನೆಲಕೆ ಹಾಯ್ಸಿದ (ಹಾಕಿದ) ನಾಗ ಸಡಿಗಡಿಗೆ ಶಕುನಿ ಮಂ ।
ಡಳಿಸಿ ಸಾರಿಯು ಹೊಡಿ ಕುಂತಿಸುತ ನಿನ್ನ ನಾ ।
ಗೆಲಿದೆ ಹೋಗೆನುತೊದರಿದಂ ತೊಡೆಯನಪ್ಪಳಿಸಿ ಕುರು-
ಪತಿಯ ಮುಖ ನೋಡುತಾ ॥ ೨೪ ॥
ಆಟವಾರಂಭಿಸದು ಬರಿದ್ಯಾಕ ಬೊಬ್ಬ್ಯಾಟ ।
ತೋಟಿ ಬೇಕಾದರೇ ಕೈದುಗಳೇ ಶಕುನಿ ಭೂ ।
ತಾಟ ವ್ಯಾತಕೆ ಸುಮ್ಮನಾಡೆನುತ ಶಮನಜಂ ಹಾಸಂಗಿಗಳು-
ಹೊಸವುತಾ ॥
ಮೀಟಿಸುತಲಿರೆ ಕೌರವಂ ನುಡಿದ ನೃಪತಿಯೆ ।
ನ್ನಾಟಕೀ ಮಾವಲೆತ್ತವನುರುಳ್ವವ ನಾರಿ ।
ನೋಟಕಂತಾನಪ್ಪೆ ಪಣವೇನು ಪೇಳೆನಲ್ ಪಾಂಡುಸುತ-
ನಿಂತೆಂದನು ॥ ೨೫

ಧರ್ಮನು ಪಣಹಚ್ಚಿದ್ದನ್ನು ಶಕುನಿಗೆಲ್ದನು

ಹೇಮರತ್ನಗಳ ಭಾರಂಗಳಿವೆ ಪಣವ ನೆಂ ।
ದಾ ಮಹೀಶಂ ನುಡಿಯೆ ಕೌರವೇಶ್ವರ ನೋಡಿ ।
ದಾ ಮಹಾಧನ ಪಾಂಡುಸುತ ಹೇರಿಸಿದ ದಿವ್ಯವಸ್ತು
ಜಾಲಂಗಳೆಲ್ಲ ॥
ಭೂಮೀಶ ರಿತ್ತಂಡ ಗರ್ಜನೆಗಳಿಂ ಗೆಲ್ವ ।
ತಾಮಸದೊಳುಬ್ಬುತಕ್ಷಂಗಳಾಡಲ್ ಕ್ಷಣದಿ ।
ಭೀಮಾಗ್ರಜಂ ಸೋಲ್ದನೇ ವೇಳ್ವೆನಾ ಛದ್ಮದ್ಯೂತಕೌಶಲದ
ಬಗೆಯಾ ॥ ೨೬ ॥

(೧) ಪಗಡಿ ಜೂಜಾಟದ ಬಂಗಾರ ಮಣಿಖಚಿತವಾದ ಹಲಿಗೆ ಇಕ್ಕಿ,
೨) ಸಾರಿಗಳು=ಲೆತ್ತಗಳು ಉರುಳಿಸಿದರು. ೩ ಹಾಸಂಗಿ=ಪಗಡೆಕಾಯಿ
ತೋಟಿ=ಜಗಳ, ಕಾದಾಟ. ಕೈದುಗಳೇ=ಕಾಳಗವೆ ಯುದ್ಧ.
ಛಡ=ಎಲೆ ನೀಚ, ಛಲಾ.

ಗಜರಥಾದಿಗಳನ್ನು ಶಕುನಿಗೆಲ್ದನು

ಸೋತೆಲಾ ನರನಾಥ ಮುನ್ನೇನು ಪಣವಿಡುವೆ ।
ಕಾತರಿಸಬೇಡ ಜೂಜಿನ ಭಯಂ ನಿನಗಾದ ।
ಡ್ಯಾತಕೆಲೆ ಮಾಣೆನುತ ಸೌಬಲಂ ನುಡಿಯಲ್ ಕೃತಾಂತಜಂ
ಹಮ್ಮಿನಿಂದ ॥

ಭೀತನೇತಾನಕಟ ಘಡಯೆನುತ ಬಹಳ ಸ ।
ತ್ವಾತಿಶಯ ಗಜಲಕ್ಷ ಕನಕಮಯ ರಥ ಲಕ್ಷ ।
ಸ್ವೇತ-ವಾಜಿಗಳೆರಡುಲಕ್ಷ ವಡ್ಡಿದನಾಗ ಹಾಸಂಗಿಗಳ
ತಿರುಹುತಾ ॥ ೨೭ ॥

ಧರ್ಮಜನು ಸಕಲ ರಾಜ್ಯವಸ್ತು ಸೋಲ್ದನು

ಮತ್ತೆ ಸೌಬಲನೊಡನೆ ಸಾರಿಗಳ ನಾಡಲಾ ।
ಲೆತ್ತಸೋತದು ನಿಮಿಷ ಮಾತ್ರದಲಿ ದುರ್ಜನರ ।
ಮೊತ್ತ ಕೂಲಿದದು ದೈವಗತಿಯನೇನಂಬೆನಾ ಧರ್ಮಜಂ ಬೆದರು-
ಗೊಳದೆ ॥

ಹತ್ತುಸಾವಿರ ತನ್ನ ಮಾನಿನಿಯ ಪರಿಚಯ ।
ಮತ್ತ ಕಾಸನಿಯರಂ ಪಣಕೆ ಹೂಡುತ ಮದೋ ।
ನ್ಮತ್ತ ರೊಳಗಾಡಿದಂ ಮಗುಳೆ ಬಾಲಕರಂತೆ ಜಾಣತನದಿಂದ-
ನೃಪನು ॥೨೮ ॥

ಏನನಾಡಿದದೇನು ಸುಫಲ ಋಷಿಗಳಿರೆ ದೈ ।
ವಾನು ಕೂಲದ ಬಳಿಕೆ ಬ್ಯಾರಿಪ್ಪ ದದರಿಂದ ।
ಲಾನರೇಂದ್ರನ ಸಾರಿ ಸೋತವರ ಘಳಿಗೆಯೋಳ್ ಬೇಕಾದ-
ದಾಯಂಗಳು ॥

ತಾನೆ ಬೀಳ್ವವು ಸುಬಲ ತನಯುಂಗೆ ವಶವಾಗಿ ।
ಮಾನನಿಧಿ ಕೌಂತೇಯ ಮರುಳನಲ್ಲವೆ ಕಂಡು ।

---

ಸಾರಿಗಳ=ಲೆತ್ತಗಳ ವಹಿಲ=ತ್ವರೆವೇಗ ರಭಸ

*

ಹೀನರೋಳ್ ಜೂಜಂಗಳಾಡಿ ಹೋಗಾಡಿದಂ ಸಕಳಧನ ಸಂಪದ-
ವನು ||೨೯||

ಆವ ಕುಟಿಲದ ಮಂತ್ರ ಯಂತ್ರ ಗಾರುಡವೊ ಮೇಣ್ |
ಣಾವ ಕೃತ್ರಿಮವಿದ್ಯ ದೇವತೆಯ ವರವೊ ಮ |
ತ್ತಾವ ಬಗೆಯ ಶಕುನಿ ನಿರ್ಮಿಸಿದ ಫಾಶಿಗಳ ನೇವೇಳ್ವೆನದ್ಭುತವನು ||
ಆವಾವ ವಸ್ತುಗಳ ನವನಿಪಂ ಪಣಕೊಡ್ಡ |
ಲಾವವಹಿಲದೊಳಂದುರಾತ್ಮಕಂ ನೋಲಿಸುತ |
ಕೈವಳಿಸುವನೊ ಬಲ್ಲರಾರದಂ ಬೆರಗಾದರಾ ಸಭೆಯೊಳಿರ್ದ-
ಜನರು ||೩೦ ||

ಕೊನೆಗೆ ನಾಲ್ವಜನರು ತನ್ನನು ಮತ್ತು ಪಾಂಚಾಲೆಯಂ ಸೋಲ್ದನು.

ಕಡೆಯ ಮಾತೇನಖಿಳ ಧನಕೋಶ ಗಜ ತುರಗ |
ಒಡವೆ ವಸ್ತ್ರಾಭರಣ ರಥ ರತ್ನ ದಾಸಿಯರ |
ಗಢಣವೆಲ್ಲವ ಸೋತನಾಯುಧಿಷ್ಠಿರ ಜೂಜಿನಾಸಕ್ತಿಬಿಡದೆ ಬಳಿಕಾ ||
ಕಡುಗಲಿಗಳಾ ನಾಲ್ವರನುಜರಂ ಪಣಕಿಕ್ಕಿ |
ತಡೆಯದವರಂ ಸೋಲ್ದು ತನ್ನ ತನುವಂ ಸೋತು |
ಮಡದಿಯರ ಮಣಿ ಸ್ಮರನ ಮಂತ್ರ ದೇವತೆಯಾದ ಪಾಂಚಾಲೆಯಂ-
ಸೋತನು ||೩೧||

ಧರ್ಮಜನು ಚಿಂತಾಕುಲನಾದುದು,

ಬೆರಗು ಬಲಿದದು ಬಳಿಕ ಧರ್ಮಜನ ಮುಖಕಾಂತಿ |
ಕರಿಕುವರಿದದು ಮನದ ಮಿಡುಕಿನೋಳ್ ಬೆಂಡಾಗಿ |
ದುರುಳ ರೋಶವಾಯ್ತೆ ರಾಜ್ಯಶ್ರೀಯ ಸೆರಗ ನೊಂದಡಿಗಡಿಗೆ ಬಿಸು-
ಸುಯ್ವುತಾ ||

ತರುಣಿಯರ ಕುಲತಿಲುಕಳಾನರಸಿಯಂ ಸಹೋ |
ದರರ ಹೋಗಾಡಿದೆನೆ ಕುತ್ಸಿತದ ದ್ಯೂತದಿಂ |
ದೊರಕಿತೆನ ಗಪಕೀರ್ತಿಯೆಂಬ ಚಿಂತಿಯೋಳ ರಸಖಿನ್ನನಾಗಿರು-
ತಿರ್ದನು ||೩೨ ||

ಇಟ್ಟ ಮೂಗಿನ ಬೆರಳ ಬಾಡಿದಾನನ ನೇರ್ಕೆ ।
ನಟ್ಟ ಕಂಗಳ ಕಳವೊ ಜೂಜಿನಲಿ ನೋಡಿರ್ದ ।
ಧಿಟ್ಟ ರಾಟಿಕೆ ಬಿಗಿದ ‡ಬೆರಗಿನಲಿ ಬಲಿದಿರ್ದ ‡ಖಾತಿಗಳ
ವೈರಿ ಜನರಾ ॥
ಅಟ್ಟಹಾಸವ ನೋಡಿ ಸೈರಿಸುತ ಧರ್ಮಜನ ।
ಕಟ್ಟನೋಳ್ ಬಿಗಿವಡದು ಮೌನದಿಂ ಕುಳಿತ ಜಗ ।
ಜಟ್ಟಿಗಳ್ ಭೀಮಸೇನಾ । ರ್ಜುನಾದಿಗಳಿರ್ದ್ದರಿಚ್ಛೆಯಲಿ
ದುಗುಡದಿಂದ ॥ ೩೩ ॥

ಕೌರವಾದಿಗಳು ಶಕುನಿಯಂ ಕೊಂಡಾಡಿದರು.

*ಮೊಳೆ ನಗೆಯು *ಕಟಕಿಗಳ ಸಂತೋಷ ದೊಲವುಗಳ ।
ಕಿಲಿ ಕಿಲಿ ಧ್ವನಿಗಳಿಂ ಕೈಸನ್ನೆಯಂ ತೋರಿ ।
ಕೆಲಬಲದೋಳೋರ್ವರಂ ನೋಡಿ ಮಾತಾಡಿಕೊಳುತಾ
ಪುಳಕೋತ್ಸವದೊಳು ॥
ಗೆಲಿದೆನೀ ಪಾಂಡುವರ ನಖಿಳ ಧನಸಂಪದವ ।
ನಿಳಿಯೊಳಗೆ ಜೂಜಿನೋಳ್ ಸರಿಯಿಲ್ಲನಿನಗೆನುತ ।
ಖಳತಿಲಕ ಶಕುನಿಯಂ ಕೊಂಡಾಡಿದರ್ ಕುರುಪ-
ಸೈಂಧವಾದಿಗಳು ನಲಿದು ॥ ೩೪ ॥

ಶಕುನಿ ಕೌರವರಿಗೆ ದ್ರೌಪತಿಯನ್ನು ತರಿಸಲು ಸೂಚಿಸಿದ.

ನ್ಯಾಯದಿಂದೆಮಗ ಸರ್ವಸ್ವಮಂ ನೋಡಿತ್ತೈ ।
ಜೀಯ್ಯಾ ನಿನ್ನನುಜರಾ ಕಮಲ ಮುಖಿ ಸಹಿತ †ನಿ ।
ರ್ದಾಯಮಂ ಮಾಡೆ ಮೈಸಲಿ ಬಲಾತ್ಕಾರದಿಂ ಸರ್ವಜನ-
ರರಿಯೆ ನಮ್ಮಾ ॥
ರಾಯನೊಲಿದದು ಮಾಡಲಿನ್ನು ನಮಗ್ಯಾತಕ ।
ನ್ಯಾಯವರ್ತಿಗಳಲ್ಲವೆಂದು ಕುರುಪತಿಗೆ ಸಂ ।

---

‡ಬೆರಗು= ಆಶ್ಚರ್ಯ, ದಿಗ್ಭ್ರಮೆ. ‡ಖಾತಿ–ಸಿಟ್ಟು, ಕೋಪ.
*ಮೊಳೆನಗೆಯು – ಚಿಗುರುನತೆ ಎಳೆನಗೆ *ಕಟಕಿಗಳ - ವ್ಯಂಗನುಡಿ
ಚುಚ್ಚು ಮಾತು. †ನಿರ್ದಾಯ- ನಿರ್ದಯ– ನಿಷ್ಕರುಣ, ದಯವಿಲ್ಲದೆ,
ಕನಕರವಿಲ್ಲದಿರುವಿಕೆ.

ಪ್ರೀಯುನಹ ಸೌಬಲ ದುರಾತ್ಮಕಂ ಸೂಚಿಸಿದ ನಯನ–
ಸಂಕೇತದಿಂದ ‖ ೩೫ ‖

ಕೌರವನು ವಿದುರನಿಗೆ ದ್ರೌಪದಿ ಕರೆತರಲು ಪೇಳ್ವ

ವಿದುರನಂ ನೋಡಿ ಬಾರನಯ್ಯ ನೀ ಪೋಗಿ ದ್ರೌ ।
ಪದಿಯು ಕರೆ ಜೆಸಗೊಂಬೆ ನವ್ಮಾಕೆ ಲಾ ದ್ಯೂತ ।
ಸದನದಿಚ್ಛೆಯುರಾಣಿವಾಸದಾ ಪೇಕ್ಷಿತವೊ ಬಯಕೆ
ಪೋಣಾವದುಂಟೊ ‖

ಬೆದರದಲೆ ಕರೆದು ತಾಯೆಂದು ಕೌರುವ ನುಡಿಯೆ ।
ಲದುಭುತವ ಕೇಳಿ ಕಿವಿಮುಚ್ಚಿ ಕೊಳುತತಿಪಾಪಿ ।
ಒದದೆಬ್ಬಿಸುವರೆ ವೃತ್ಯುವಿನ ಹಾವಿನ ಹೆಡಿಯ ತುರಸಿ-
ಕೆಡವರೆಯೆಂದನು ‖ ೩೬ ‖

ವಿದುರನು ಕೌರವನನ್ನು ನಿಂದಿಸಿವದು.

ಕಾಳಕೂಟಿದ ಕೆರಗಳಲಿ ಜಲಕ್ರೀಡೆಯೇ ।
ಕಾಲಾಂತಕನ ದ್ರೌಂಷ್ಟ್ರ ದುಯ್ಯಾಲಿಯೆ ನಿನಗೆ ।
ಪೇಳುವವರಿಲ್ಲ ಬುದ್ಧಿ ಭ್ರಮಿಸಿಕೆಡುವರೇ ಪಾಂಡುವರಪಟ್ಟದರಸಿ‖

ಆಳಹಳೆ ಮದದಿಂದ ದುಷ್ಕೀರ್ತಿಗೊಲಿವರೇ ।
ಖೂಳಸೌಬಲ ನೆತ್ತಣವ ದ್ಯೂತವೆತ್ತಣದು ।
ಸೊಲೇತ್ತಣದು ಪೃಥ್ವಿಪಾಲರ್ಗೆ ಬಿಡು ಬಿಡು ದುಷ್ಟ ಚೇಷ್ಟಿಯ
ನೆಂದನು ‖ ೩೭ ‖

ಕುರು ಪುರೂರವ ನಹುಷ ದೌಷ್ಯಂತ ಹಸ್ತಿಯದು ।
ಧರಣಿಪತಿ ಶಾಂತನು ಯಯಾತಿ ಪಾರಂಪರೆಯು ।
ಭರತ ಕುಲಪಿದರೊಳಗೆ ವಂಶೋದ್ಧರಣರೆ ಬೆಳಗಿದರೀ ಜಗತ್ರಯದೊಳು‖

ಮರುಳು ನೀನವತರಿಸಿ ತೊಡಕು ತಂದೈ ಮಾಣು ।
ದುರುಳತನದಿಂಗೆಲ್ಪ ಮೇಲು ಗೈ ನೀನಾದೆ ।
ತರುಳರೈವರ್ ನೋತರೆಂಬ ವಾಸಿಯೆ ಸಾಕು ತೆಗೆಯೆಂದನಾ
ವಿದುರನು ‖ ೩೮ ‖

ಗೆದ್ದ ಧನವಕ್ಕುವದೆ ಸೋಲ್ದ ನರ ಪವನಸುತ ।
ರಿದ್ದ ಪರಿ ಸುಮ್ಮನಳುಕುತ ಕೃಷ್ಣೆ ತೊತ್ತಹಳೆ ।
ಉದ್ಧತ್ತ್ರರಾಕ್ರಮಿಗಳಾ ಬಲುಹ ನರಿಯಬಿಡು ಜೂಜಿನಲಿಗೆಲಿದಪರಿಯಾ॥
ಶುದ್ಧ ಗರಳದ ಮಧುರ ಕೊಲುವದೋ ಮನ್ನಿಪುದೋ ॥
ಬುದ್ಧಿಯುಲತಿಳಿ ನೃಪತಿ ಮರುಳಾಟವ್ಯಾಕಪ್ರ ।
ಬುದ್ಧನೆನಿಸದೆ ಪಾಂಡುವರ ಸಂತವಿಟ್ಟು ಬದುಕುವದೆಂದ
ನಾಕ್ಷತ್ತ್ರನು ॥ ೩೯ ॥

**ಕೌರವನು ದೂತನಿಗೆ ಕಳುಹಿದ್ದು.**

ಇವ ಪಾಂಡುವರ ಪಕ್ಷಪಾತಿ ವ್ಯಾಲವರ ಹಿತ ।
ವೆವಹರಣೆಯೋಳಾತನೆಂಬುದಂ ತಿಳಿದುನಾ ।
ನಿವನ್ಯಾಕೆ ಕೆಣಕಿಪೆನೊ ಬಹುಬೋಧ ಭ್ರಾಂತನಂ ಸಾಕಿವನ
ಗೊಡಿವೆವ್ಯಾತಕೆ ॥
ತವಕದಿಂ ಪೋಗಿ ಪ್ರತಿ ಕಾಮಿತನೆ ಕರದುತಾ ।
ಯುವತಿಯುಳ ನೀನೆಂದು ಕೌರುವಂ ನೇಮಿಸಿದ ।
ಡವ †ಹಾಸಧವ †ಹಾಯ್ಕಿ ಬಂದನಾ ಪಾಂಚಾಲೆನಂದನೆಯ
ರಾಜಗ್ರಹಕೆ ॥ ೪೦ ॥
ಬಂದುಬಾಗಿಲಗಾಹಿ ನವರೆಗೆಚ್ಚರಿಸಲ್ಕೆ ।
ತಂದವರ್ಬಿನ್ನೈಸುತಿವನೊಳಗೆ ಪೊಗಿಸಲ್ಕೆ ।
ನಿಂದು ಕಂಡಂ ದೇವಿಯರ ಸಭೆಯು ಹೊಳವಕಂಗಳ ಕಾಂತಿ
ಥಳಥಳಿಸುವಾ ॥

**ದ್ರೌಪದಿಯು ದಾಸಿಯರ ವರ್ಣನೆ**

ಮಂದಸ್ಮಿತಾನನದ ಸುಲಿಪಲ್ಲ ಲಾವಣ್ಯ ।
ದಿಂದ ಬಹುವಿಧ ರತ್ನಗಳ ಭೂಷಣದ ತೇಜ ।
ದಿಂದ ಬೆಳಗಿನ ಬಳಗವೆನೆ ಬಾಲಕಿಯರಿದ್ದುದಾ ದ್ರೌಪದಿಯ
ಬಳಿಯಲಿ ॥ ೪೧ ॥
ಕೆಲರು ಗಿಳಿಗಳ ಮೇಲುನುಡಿಗಳ ವಿನೋದದಿಂ ।

---

†ಹಾಸಧವ= ಕುಚೇಷ್ಟೆಯುವ, ಅಥವಾ ಹಾಸ್ಯ ಮಾಡುವರಲ್ಲಿ ಹಿರಿಯ=
†ಹಾಯ್ಕಿ=ಹಾಯುವವ ಮೇಲೇರಿ ಬರುವ.

ಕೆಲರು ವೀಣಾರವದ ಸಂಗೀತ ಗೋಷ್ಠಿಯಿಂ ।
ಕೆಲರು ಸರಸ ಸುಗಂಧ ಪರಿಮಳಸುಲೇಪನದ ಸಿಂಗರದ ಲೀಲೆಯಿಂದ ॥
ಕೆಲರು ಚದುರಂಗಲೆತ್ತಗಳಿಂ ಮನ್ಮಥನ ।
ಕಲಭಗಳ ಮಿಂಡಿನಂ ತಾಗ ಕಣ್ಗೆಸದರಾ ।
ಜಲಜಾಯ ತಾಕ್ಷಿಯು ದ್ರುಪದಾತ್ಮಜೆಯು ಸುಮಮಂಚದ ಸುತ್ತ
ವಳೆಯೆದಲ್ಲಿ ॥ ೪೨ ॥

ದ್ರೌಪದಿದೇವಿಯ ಮಹಾಮಹಿಮೆ ಬಣ್ಣನೆ

ಸಕಲಸುರನಾರಿಯರ ಮಧ್ಯದೋಳ್ ಶೋಭಿಸುವ ।
ಲಕುಮಿಯೋಳ್ ಶಕ್ತಿಗಳ ತಂಡದೋಳ್ ರಾಜಿಪಂ ।
ಬಿಕೆಯ ತೆರದಲಿ ಮಂತ್ರದಧಿದೇವತೆಗಳೊಳಗೆ ಮೆರವಗಾಯತ್ರಿಯಂತೆ॥
ವಿಕಟ ರಸ್ಮಿ ನಿಬದ್ಧ ರತ್ನಂಗಳೊಳು ಪೊಳೆವ ।
ಪ್ರಕಟ ಕೌಸ್ತುಭದ ಮಣಿಯಂತೆ ಮಿಗೆನಕ್ಷತ್ರ ।
ನಿಕರದೋಳ್ ರಂಜಿಸುವ ಚಂದ್ರನಂತಿರ್ದಳಾ ಕೃಷ್ಣೆಬಾಲೆಯರ
ನಡುವೆ ॥ ೪೩ ॥
ಇಂದುಮಂಡಲ ಸದೃಶವಾಗಿರಲು ಮುಖ ಪೊಳೆವ ।
ಮಂದಸ್ಮಿತಂ ಚಂದ್ರಿಕೆಯ ತೆರದೊಳಿರೆ ರತ್ನ ।
ಹೊಂದೊಡೆಗೆ ಮೌಕ್ತಿಕದ ಹಾರಂಗಳುಡು ನಿಕರದೋಳ್ ಮೆರೆಯೆ
ಕುಲಿಶಮಣಿಯಾ ॥
ವೃಂದದಿಂ ನಿರ್ಮಿಸಿದ ಮಲ ಮಂಟಪಂ ಗಗನ ।
ದಂದವಾಗಿರೆ ಕೃಷ್ಣೆಕುಳಿತಿರ್ದಳತಿ ತೇಜ ।
ದಿಂದಲ್ಲಿ ನೆರದಾಂಗನೆಯರಾ ಕಂಗಳ ಚಕೋರಗಳಿಗಾನಂದನುಂ
ಕೊಡುತ್ತಾ ॥ ೪೪ ॥
ಭಾರತಿ ಸ್ವರೂಪಾಂಶಳಾದ ದ್ರೌಪದಿಯು ಶೃಂ ॥
ಗಾರಮಂ ವರ್ಣಿಸುವ ಕವಿಯಾವನಾ ದೂತ ।
ಸಾರಿ ಕೈಮುಗಿದು ಬಿನ್ನೈಸಿದಂತಾಯೆ ಚಿತ್ತೈಸು ನಿಮ್ಮರಸನಿಂದು ॥

ದೂತನು ದ್ರೌಪದಿದೇವಿಗೆ ಬಿನ್ನೈಸುವಿಕೆ

ಕೌರುವನೊಡನೆ ಜೂಜಂನಾಡಿ ಸೋತಂ ಸಕಲ ।

ಧಾರುಣಿಯ ಸರ್ವ ಸಂಪತ್ತನುಜರಂ ತನ್ನ ।
ಮೀರಿ ಸೋಲ್ಪಂ ನಿಮ್ಮನಾ ಕುರುವ ಸಭೆಗೆ ಕರೆಯೆಂದೆನಲ್
ಬಂದೆನೆನಲು ॥ ೪೫

ಚಿಂತಾಕುಲಳಾದ ದ್ರೌಪದಿಯ ಉತ್ತರ

ಅರಳ್ವ ಹೊಂದಾವರೆಯ ವನಕೆ ಮಂಜಿನ ಸರಿಯು ।
ಸುರಿವಂದದಲಿ ಸ್ವಚ್ಛ ಬೆಳದಿಂಗಳಿನ ಸಿರಿಯ ।
ಭರದಿಮುಗಿಲೊಡ್ಡು ಮೊಗವಂತೆ ದೂತನ ಮಾತು ಕೇಳ್ದು
ನೀಲಾಳಕಿಯರ
ಅರಸಿಯ ಮುಖಾಬ್ಜಂಗಳಾಕ್ಷಣಂ ಬಾಡಿದವು ।
ಮರುಗುತಲಿ ಚರ ಪೇಳು ಸೋತನೇ ಭೂಪಾಲ ।
ನುರುಲು ಬಲೆಯೊಳಗಾದನೇ ಶಕುನಿ ಕಾಮಿಸಿದ ಹರಕೆ-
ಕೈವಶವಾಯಿತೆ ॥ ೪೬

ದೂತನು ಕೌರವಗೆ ಪೇಳಲು ದುಃಶಾಸನನನ್ನು ಕಳುಹಿದ

ಮುನ್ನೆ ತನ್ನಂ ಸೋತುಬಳಿಕೆನ್ನ ನೂಲ್ಪಡೆ ।
ನಿನ್ನು ಸಲುವದೆ ಗೆಲವು ಹಿರಿಯರರಿದೀ ಪ್ರಶ್ನೆ ।
ಚನ್ನಾಗಿ ತಿಳಿದುತ್ತರವ ಮೆಚ್ಚಿಸುತ ಕೊಟ್ಟರೆ ತಪ್ಪೆನಡೆಯೆಂದೆನೆ
ತನ್ನೊಳಗೆ ಪೆದರುತ್ತ ಬಂದು ಕೌರವ ಗುಸರ ।
ಲನ್ಯಾಯದಿಂದ ತಹುದಿಲ್ಲ ಭಟನಿವನಂಜಿ ।
ಗನ್ನಗತಕವ ಪೇಳ್ವ ತಮ್ಮ ಬಾ ನೀನವಳ ದೆಳದು ತಾ-
ಪೋಗೆಂದನು ॥ ೪೭

ದುಃಶಾಸನನು ವಿಕಾರದಿಂ ದ್ರೌಪದಿಯರ ಮನೆಪೊಕ್ಕು

ಹರಿದನವ ಬೀದಿಯಲಿ ಬಿಟ್ಟು ಮುಂಡೆಯಲಿ ನತಿ ।
ಯರ ಮನೆಯ ಬಾಗಿಲ್ಗೆ ಚರರು ತಡೆಯಲ್ಕವರ ।
ನಿರಿವು ತೊಳವೊಕ್ಕನಾ ಪಾಪಿಷ್ಠ ಖಳ ಗರ್ಜಿಸುತ್ತ ನಿಷ್ಕರುಣದಿಂದ
ತರುಳೆಯರ್ ಬೆದರಿ ಮೊರೆಯೊಕ್ಕರಾ ದ್ರೌಪದಿಯ ।
ನುರುವಣಿಸಿದಂ ಮ್ಯಾಲೆ ರಾಹು ತಾರಾಗಣವ ।

(೧)ನುರುಬುವಂತೇ ಪೆರ್ಬುಲಿಯು ಹುಲ್ಲೆಗಳ ಹಿಂಡತಾಗುವ
ತೆರದೊಳು ॥ ೪೮ ॥

ದುಷ್ಟ ದುಃಶಾಸನ ಪಾಂಚಾಲಿಗೇನಂದನಂ

ನಿಂದನವ ನಿದಿರಿನೊಳ್ ಪಾಂಚಾಲೆಯಂ ಕಾಣು ।
ತೆಂದನೆಲಗೇ ಗರುವತನವಿಂದು ಸಲ್ಲುವದೆ ।
ಬಂದು ಮೆರದಪುದೆಮ್ಮ ದಾಸಿಯರ ನಡುವೆ ನಡೆ ಮಂಚದಿಂದಿಳೆ
ಯೆನುತಲಿ ॥

ದ್ರೌಪದಿಯು ದೈನ್ಯದಿಂ ಬೇಡುವಿಕೆ

ಮಂದಮತಿಜರಿದಬ್ಬರಿಸುತ ಮೇಲ್ವಾಯಲಾ ।
ಸುಂದರಾನನೆ ನುಡಿದಳೆಲವೊ ನೀ ಮೈದುನನು ।
ಮುಂದುಗೆಟ್ಟೇಪರಿಯಲನುಚಿತದ ವಾಕ್ಯಂಗಳಾಡಿ ಹಳಿವರೆ
ಯೆಂದಳು ॥ ೪೯ ॥

ಮೇಲೆ ತಾ ಪುಷ್ಪವತಿಯಾಗಿರ್ಪೆನಿಂದು ಭೂ ।
ಪಾಲರಾಸ್ಥಾನ ಪ್ರವೇಶವನುಚಿತ ತಮ್ಮ ।
ಕೇಳಿನ್ನ ಪ್ರಶ್ನೆ ನಿರ್ಣಯವ ಧರ್ಮಜ ನೋಲ್ದ ಬಗೆಯಂವಿಚಾರಿಸದಲೇ॥
ಬಾಲೆಯರ (೨)ನವಘಡಿಸುವದು ನ್ಯಾಯವಲ್ಲ ವೆಂ ।
ದಾಲ ತಾರಗಿನಿ ದೈನ್ಯದಿಂ ಬೇಡಿಕೊಂಡಡಾ ।
ಖೂಳ ದುಃಶಾಸನಗೆ ದಯ ಹುಟ್ಟುವದೆ ಮತ್ತೆ ಮೇಲ್ವಾಯುದನೆ
ಪೇಳ್ವೆನು ॥ ೫೦ ॥

ದುರುಳನು ದ್ರೌಪದಿಯ ಶಿರಮುಡಿಗೆ ಹಿಡಿದೆಳೆದ

ಎಲ್ಲಿ ಕುತ್ಸಿತ ಪ್ರಶ್ನ ನಿರ್ಣಯಂ ಮರೆ ವಾಕ್ಯ ।
ವೆಲ್ಲಿಯದು ಚಪಳೆ ನೀ ಪುಷ್ಪವತಿಯಾಗು ಮೇ ।
ಣಿಲ್ಲಿ ಫಲವತಿಯಾಗು ನಡೆ ಸುಮ್ಮನೆದ್ದು ನೀ ಕೌರವೇಶ್ವರನ ಸಭೆಗೆ ॥
ಖುಲ್ಲರೈವರ್ ತಮ್ಮ ತನುವ ತೆತ್ತರ್ ನಮಗೆ ।
ಒಲ್ಲೆನೆಂದರೆ ಬಿಡುವನಲ್ಲ ತಾನೆನುತಲಾ ।

---

೧] ಉರುಬು= ರಭಸದಿಂದ ಮೇಲೆ ಬೀಳು ಹಲ್ಲೆಮಾಡು ೩] ಅವಘಡಿಸು= ಅವಗಡಿಸು=ಅಡ್ಡಿಮಾಡು ತೊಂದರೆ ಕೊಡು.

ಚಲ್ಲೆ ಗಂಗಳೆ ದ್ರುಪದ ನಂದನೆಯ ಶಿರಿಮುಡಿಯ ಪಿಡಿದೆಳೆದನಾ
ದೈತ್ಯನು ॥ ೫೧ ॥

ಆ ಮಹೀಶನ ರಾಜಸೂಯದೊಳ್ ಸಕಲ ಮುನಿ ।
ಸ್ತೋಮರಾಶೀರ್ವಾದ ಮಂತ್ರ ವಿರಚಿತ (೧)ಪುಣ್ಯ ।
ಧಾಮ ಪುಷ್ಕರ ವಿಮಲತರ ಸುಗಂಧೋದಕಗಳಭಿಷೇಚನದಿ ರಾಜಿಪಾ॥
ವ್ಯೋಮದಿಂ ನಿರ್ಜರರ ಕರದಲರ್ಗಳಿಂ ಮೆರವ ।
ಶ್ರೀ ಮುಡಿಗೆ ಕೈಯಿಕ್ಕಿ ಖಳನೆಳೆದು ತರಲಖಿಳ ।
ಕಾಮಿನಿಯರಕಟ ಹಾ ಹಾ ಯೆಂಬ ರೋದನ ದೊಳೊದರಿತಲ್ಲಲ್ಲಿ
ಮರುಗೀ ॥ ೫೨ ॥

ದ್ರೌಪದಿಯ ದುರವಸ್ಥೆ

ಉದರಿದವು ಮುಡಿದಿರ್ದ ಸೂಸುಕದ ಮುತ್ತುಗಳ್ ।
ಕೆದರಿದವು ಮೃದುಕೇಶ ಪಾಶಂಗಳಾ ಕ್ಷಣಂ ।
ಮುದರಿದವು ತುರುಬಿರ್ದ ಕುಸುಮಂಗಳಾ ಕರ್ಣ ಪತ್ರಪೇಕಾವಳಿಗಳು॥
ಕದರಿ (ಲಿ) ದವು ಕಸ್ತೂರಿ ತಿಲಕ ಬಿಂದುಗಳಳಕು ।
ತದರಿದವು ಕುಚ ಮಂಡಲಾಯತಾಕ್ಷಿಯ ಪಿಂತೆ ।
ಸುದತಿಯರ್ ಬೆನ್ನಟ್ಟಿ ಘೋಳಿಡುತ ಬರೆ ಜಡಿದು (ಜರಿದು)
ಝಾಡಿಸುತ ಖಳನಡದನು ॥ ೫೩ ॥

ಬಾಗಿದೆಳೆ ಬಾಳಿಯೋಳ್ ಬಗ್ಗಿ ನಡವಾಸತಿಯ ।
ವೇಗಗತಿಯಲಿ ಝುಣತ್ಕಾರಗಳ ನುಡಿವ ಸಂ ।
ಯೋಗ ನೂಪುರದರವ ಕಂಕಣ ಧ್ವನಿಯು ಹೊಂಗಿರುಗೆಜ್ಜೆಗಳ ನಿನಾದ॥
ಆಗರುವೆಯರ ರೋದನದ ರಭಸಗಳಿಗೆ ನೆರ ।
ವಾಗದಿರವೆಂಬಿನಿಂ ತುಂಬಿತು ಮಹಾಶೋಕ ।
ಸಾಗರದ ಘೋಷ ವಾಗಜ ಪುರದ ಪಟ್ಟಣದೊಳೇ ಪೇಳ್ವೆ
ನದ್ಭುತವನು ॥ ೫೪ ॥

---

೧] ಪುಣ್ಯಧಾಮ = ಪುಣ್ಯವೆ ಮನೆಯಾದ, ಪುಣ್ಯಾತಿಶಯವೆಂಬ, ಪುಷ್ಕರ = ಕಮಲಾದಿ ಪೂವುಗಳಿಂದ ಕೂಡಿದ, ಅಲರ್=ಹುವ್ವ

ಸುರಿವ ಕಂಬನಿ ವನಿಗಳಿಂ ಬಿಟ್ಟ ಮಂಡೆಯಲಿ ।
ಜರಿದು ಮೇಲುದಿನ ಬೀದಿಯ (೧)ಧೂಳಿ ಧೂಸರದ ।
ಸರಸ ವದನಾಬ್ಜದಲಿ ಖಳನ ವಾಮದ ಕರದಿ ಬಾಗಿರ್ದ ತನುಲತೆಯಲಿ ॥
ತರುಣಿ ಬಂದಳ್ ರಾಜಸಭೆಗೆ ಹಾ ಹಾ ರವದಿ।
ಮರುಗಿದರ್ ಕಾಣುತಲಿ ವಿಧಿಯ ಪಾಂಡವಪಟ್ಟ ।
ದರಸಿಗೀ ವಿಧಿಯಾಹದಲ್ಲವೆನುತೆಲ್ಲರುಂ ಬಾಷ್ಪ ಲೋಚನರಾದರು॥೫೫ ॥

ಸಭಾಸದರಲ್ಲಿ ದೀನರಾಗುವಿಕೆ

ತುಳುಕಿದವು ಕಂಬನಿಗಳಾ ಮಹಾಸ್ಥಾನಸ್ಥರೋಳ್ ।
ಛಲಿ ಸುಯೋಧನ ಶಕುನಿ ಕರ್ಣ ಸೈಂಧವ ಪಾಪಿ ।
ಖಳತಿಲಕನಾದ ದುಃಶಾಸನನ್ನೆವರನುಳಿಯೆ ನಯನ ಜಲಧಾರೆಯಲ್ಲಿ ॥
ಮುಳಗಿದರ್ ಖೇದದಿಂ ಮುಖಕೆ ವಸ್ತ್ರಗಳೊಂಕಿ ।
ಜಲಜಮುಖ ಕಾಣ್ಬನೆ ದ್ರೌಪದಿಯ ನೆಳನ ನೀ ।
ಕುಲ ವಿನಾಶಕರೋಶಕೆ ನೇರಿದಳೆ ಹಾಯೆಂದೊರಲ್ದರಾಸಭೆಯ ಜನರು ॥ ೫೬ ॥

ಈ ಕುಮಾರಿಯ ದುಃಖವಂ ಕಾಣ್ಬ ಕಂಗಳಿ ।
ದ್ದ್ಯಾಕೆ ಧಿಕು ಬಾಲಕಿಯ ಶೋಕ ರಸವಂ ಕುಡಿವ ।
ವ್ಯಾಕೆ ಕರ್ಣದ್ವಯಂ ಸುಡಲಿ ವಿಧಿ ನಿರ್ಮಿಸಿದ ತಾವ್ಯಾಕೆಸಪ್ರಾಣರೊ ॥
ಈ ಕುಮತಿಗಳನ್ಯಾಕೆ ಸೃಷ್ಟಿಸಿದನೋ ಬೊಮ್ಮ।
ಭೂಕಾಂತೆಗತಿ ಭಾರವಾಗಿ ಶ್ರೀರಾಮ ರಾ ।
ಮೊಕೆಯುಳಲಂ ನಿವಾರಿಪರಿಲ್ಲವೇಯೆಂದು ಮರುಗಿದದು । ಸುಜನವ್ರಾತಾ ॥ ೫೭ ॥

ಭೀಮಾರ್ಜುನರ ಕೋಪ ಧರ್ಮನುಶಾಂತಿ ಗೈದ

ತಾಮರಸ ಮುಖಿಯ ಕಡು ಭಂಗವುಂ ಮರುಳಾದ।
ಭೂಮೀಶ ಧರ್ಮಜನ ನಿರ್ವಿಣ್ಣ ಭಾವವಂ ।
ತಾಮಸ ಸುಯೋಧನನ ದುಶ್ಶ್ಯಾಸನನ ದುಷ್ಟ ಚೇಷ್ಟೆಯಂ ಕಂಡು ಮನದಿ ॥

---

೧ ಧೂಳಿಧೂಸರದ = ಸೂಕ್ಷ್ಮ ಬಿಳಿಮಣ್ಣು ಹುಡಿಯಿಂದ ಮುಚ್ಚಿದ ಮುಖ.

ಭೀಮಾರ್ಜುನರ್ ಕುದಿವ ಕೌರುವರ ಸೀಳ್ವೆಂ ।
ದಾಮಹಾಕೋಪದಿಂದೇಳು ತಿರಲರಿದು (೧)ಸೃತ ।
ಕಾಮನಹ ನೃಪತಿ (೨)ಬ್ಬರು (೩) ಬ್ಬಟೆಯ ನಿಲಿಸಿದಂ ಸನ್ನೆಯಿಂ
ಜೋಡಿಕೊಂಡು ॥ ೫೮ ॥

ತುಟ್ಟಿಸಲಿ ಧನರಾಜ್ಯ ವಭಿಮಾನ ಗರ್ವ (ಶೌರ್ಯ) ದಾ ।
ಬೆಟ್ಟಮುರಿಯಲಿ ತರಣಿ ಪಶ್ಚಿಮಕೆ ಮೂಡಲೀ ।
ಬಿಟ್ಟು ಹೋಗಲಿ ಜೀವ ವಡಲಗ್ನಿ ಜ್ವಾಲ ಸೀತಳ ವಾಗಲೀ
ಧರ್ಮವಾ ॥

ನೆಟ್ಟನೇ ಬಿಡೆನೆನುತ ನಿಶ್ಚಯಂಗೈದು ಪಡ ।
ಹುಟ್ಟಿದರ್ ಮನ್ನಿಸಿದರಲ್ಲದೆ ಮುಂದಿನ್ನು ।
ಹುಟ್ಟುವವರೊಳ್ ಹಿಂದೆ ಕಾಣೆ ನಾ ನೀ ಸಂಯ ತಾಳಿಕೆಯ
ಗುಣದವರನು ॥ ೫೯ ॥

ದ್ರೌಪದಿಯ ವಸ್ತ್ರಾಪಹರಣ

ಇತ್ತಲಬಲೆಯ ವಿಧಿಯ ಕೇಳಿರೆಲೆ ಶೌನಕರೆ ।
ಮತ್ತೆ ದುಃಶಾಸನಂ ಶರಗು ಪಿಡಿದೆಳವ ತೆರೆ ।
ಸುತ್ತನೋಡುತ ನುಡಿದಳೆಲೆ ಕೌರವೇಶ್ವರನೆ ಗೆಲನೆಂತೋ ।
( ಗೆಲವಂತು ) ತನ್ನಸೋತು ॥

ಲೆತ್ತ ಸೋತಂ ( ಲೆತ್ತಸೋಲ್ದಂ ) ಜನವ ಬಳಿಕೆನ್ನಸೊಡ್ಡಿ ಭೂ ।
ಪೊತ್ತು ಮಾಧರ್ಮದಿಂ ತಿಳಿದು ಪೇಳಲಿ ಪ್ರಶ್ನೆ ।
ಗುತ್ತರವನೆಂದಾಕೆ ಹಲುಬಿದಡೆ ಕೇಳ್ವರೇ ಮೂರ್ಖ ನಿಷ್ಕರುಣಖಳರು ।

ದೈನ್ಯದಿಂ ದ್ರೌಪದಿ ಅಂಗಲಾಚುವಿಕೆ

ಅಳುಕಿದನೆ ಸುಡಲವನ ಜೀವನಂ ಪೋಲುದಂ
ಶಳದ ನುನ್ನತ ಕುಚವ ನಳಿ ತೋಳ್ಗಳಿಂ ಮುಚ್ಚಿ ।
ಲಲನೆ ಬೆಚ್ಚಿದ (ಬೇಡಿದ) ಳಾದುರಾತ್ಮಕನ (೪)ಜಂಜಡಕೆ ಗದಗದಿ
ಸುತಲಿ ಕಣ್ಣೆನಾ ॥

---

೧ ನೃತ ಕಾಮನಹ = ಸತ್ಯವಂತನಾದ ೨ ಇಬ್ಬರ= ಈರ್ವರ
೩ ಉಬ್ಬಟೆ = ಪರಾಕ್ರಮ, ಶಿಟ್ಟಿನಿಂದ ರಭಸಗೈಯುವಿಕೆ ಕಾರ್ಯಾತಿರೇಕ
೪ ಜಂಜಡಕೆ = ತೊಂದರೆಕೊಟ್ಟದ್ದಕ್ಕೆ

ಜಲವ ಬೆರಳಲಿ (ವರಿಸುತ್ತ) ಬಿದರ್ಚುತ ನೋಡಿದಳ್ ರಾಜ ।
ತಿಲಕನಂ ಪವನಜ ಕಿರೀಟಿ ಮಾದ್ರೇಯರಂ ।
ಬಳಿಕನಿಬರಾನನವ ತಿರುಹಿದ ನೆಲಕ್ಕಿಕ್ಕು ತಣ್ಣ (ವಣ್ಣ) ನಾಗ್ನೆಯ
ಮೊರದೆ ॥ ೭೧ ॥

ಗಂಪಶ್ಚೈವರ್ ತನ್ನ ಕೈಬಿಟುದಂ ಕಾಣು ।
ತಂಪೊಲಿದಳಾಗ ಕಂಗೆಟ್ಟು ಭೀಷ್ಮ ದ್ರೋಣ ।
ಗಂಡುಗಲಿ ಕೃಪವಿದುರ ಬಾಹ್ಲೀಕಗೆಲೆ ತಂದಿಗಳಿರೆ ಸೀರೆಯ ಶರಗನು॥
ಲೆಂಡ ದುಶ್ಯಾಸನಂ ಪಿಡಿದೆಳವ ಪ್ರಾಣಮಂ ।
ಕೊಂಡರಳುಕುವಳಲ್ಲ ವಭಿಮಾನವಂ ಶಳೆವ ।
ಭಂಡನಿಗೆ ಬುದ್ಧಿಯಂ ಪೇಳಿ ಬಿಡಿಸೈಯ್ಯಗಳಿರೆಂದೊದರಿದಳ್
ಮೃಗಾಕ್ಷಿ ॥ ೭೨ ॥

ದ್ರೌಪದಿ ಧೃತರಾಷ್ಟ್ರ ಗಾಂಧಾರಿಗೆ ಮೊರೆ ಇಡುವಿಕೆ

ಮಾಪವನಲ್ಲವೆ ತನಗೆ ತವ ವಾಕ್ಯಮಂ ನಂಬಿ ।
ನಾವೆಲ್ಲರಿಲ್ಲಿಗೈ ತಂದೆವಲ್ಲೇಯೆನ್ನ ।
ನೀವಿಧಿಯ ಮಾಡಬೇಕೆಂದು ಕರಸಿದೆ ಜೀಯ್ಯ ಧೃತರಾಷ್ಟ್ರಭೂಪಾಲನೆ॥
ಜೀವಕೊಳ್ಳದೆ ವಸ್ತ್ರಮಂ ಸುಲಿವ ಬಿಡಿಸಯ್ಯಾ ।
ದೇವಿ ಗಾಂಧಾರಿ ಸೂಸಿಯಲ್ಲವೇ ನಿನಗೆ ನಾ ।
ನೀವಿಕಾರಿಯ ಕೈಗಳಿಂದ ತೆಗಸೌ ತಾಯೆ ಮೊರೆಯೊಕ್ಕೆ
ನಾನೆಂದಳು ॥ ೭೩ ॥

ಭಾನುಮತ್ಯಾದಿಗಳಂ ಬೇಡುವಿಕೆ

ಹೀನ ನೀ ದುಶ್ಶ್ಯಾಸ ನಿನ್ನ ಪತಿ ಗರುಹಿವನ ।
ಭಾನುಮತಿ ತೆಗಿಸವ್ವ ತಂಗಿಯೆಲ್ಲಿವೆ ತನಗೆ (ನಿನಗೆ) ।
ಮಾನುನಿಯ ಮಾನಭಂಗವ ನೋಳ್ಪದುಚಿತವೇನೆಲೆ ಜಯದ್ರಥನರಾಣಿ॥
ನೀನೆನಾದುನಿಯಲಾ ಶರಗು ಬಿಡಿಸಕಟಕಟಿ ।
ಮೌನದಿಂ ದಿರ್ಪರೇ ನೆಲೆವಿಲಾಸಿನಿಗಳಿರೆ ।
ಮಾನವೇಂದ್ರನ ತಿಳುಹಿರೌ (ತಿಳುಹಿರವ್ವ) ತಾಯಿಗಳಿರೆಂದು
ಬಿದಳ್ ದ್ರುಪದಾತ್ಮಜೆ ॥ ೭೪ ॥

ಸಕಲ ಸಭಿಕರಿಗೆ ದೈನ್ಯದಿಂ ಪಾಂಚಾಲೆ ಬೇಡಿಕೊಂಡದೆನೆ

ಧಾರುಣೀಪತಿಗಳಿರೆ ರಾಜ ಪುತ್ರರೆ ಪರಿ ।
ವಾರ ಪ್ರಧಾನಿಗಳಿರ್ದ್ಯಾ ವಿಪ್ರ ಋಷಿಗಳಿರ್ದ್ಯಾ ।
ನಾರಿಯೋರ್ವಳನೊಪ್ಪಿಸಿದಿರ್ದ್ಯಾ ವೃತ್ತ್ಯಾವಿಗೆ ನ್ಯಾಯುವೇ
ನೋಷ್ಪದೀ ಬನ್ನದಾ ॥
ಊರೊಳುಂಟೆ ಸೀರೆಯುಂ ಸುಲಿವರಿನ್ನು ಕಾಂ ।
ತಾರ ಪೈಸಲೆ ರಾಜ ಸಭೆಯಲ್ಲಿ ನಾಥರೊಳು ।
ಕಾರುಣ್ಯ ಹೀನ ಕಲ್ಲು ಹೃದಯುದವರೆಲ್ಲರೆಂದಳಲಿದಳ್ ಹರಿಣ
ನಯೆನೆ ॥ ೬೬ ॥
ಪತಿಗಳೈವರ್ ತನ್ನ ವರಾರಿ ಖಳರಿಗೆ ಧರ್ಮ ।
ವ್ರತವಕೊಂಡರ್ ದ್ರೋಣ ಭೀಷ್ಮ ಕೃಪ ವೊದಲಾದ ।
ರತಿರಥ ಮಹಾರಥರ್ ಪರಹಿತವ ಬಿಸುಟರಿನ್ನರ್ಥಾಭಿಲಾಷೆಯಲ್ಲಿ ॥
ಸುತನ ಸಿರಿ ಕಡುಸೊಗಸೆಲೀಗತಾಂಬಕ ಧರಣಿ ।
ಪತಿಗೆ ಗಾಂಧಾರಿ ದೇವಿಗೆ ಮುಂದ್ಯೆ ನಾಥಳಿಗೆ ।
ಗತಿಯು ಗಾಣೆನೊ ಕೃಷ್ಣ ನೀಲಲ್ಲ ದನ್ಯೈರ್ಗೆ ಹಲುಬಲೀನಹು
ದೆಂದಳು ॥ ೬೭ ॥

ಆರೂಬಿಡಿಸುವರಿಲ್ಲೆಂದು ಆರ್ತಳಾಗಿ ಶ್ರೀ ಕೃಷ್ಣನನ್ನು ಪ್ರಾರ್ಥಿಸಿದಳ್

ವ್ಯೆದೆಗದ ವೀಪ್ರಾಣ ವ್ಯೆದು ತಾ ಬದುಕುವಿನೆ ।
ಕೈದುಡಿಕಿ ಸಿಂ ಸೀರೆಯುಂ ಸುಲಿವ ಖಳ ನಿವನ ।
ವೈದು ಕೊಲ್ಲುವ (ತ) ತನ್ನ ಶರಗ ಬಿಡಿಸುವರಿಲ್ಲ ನೀನೆ ಪರಮಾತ್ಮ
ಬಂಧು ॥
ಬೈದು ಫಲವೇನೆನ್ನ ದುಷ್ಕೃತವ ಸುಡಲಿ ತವ ।
ವೈದುನರ ಮರುಳಾಟ ಕೆನ್ನ ಕಾಯುಯ್ಯ ಕೃಷ್ಣ ।
ನೈದು ವೊಗನಂ ದೈತ್ಯ ಜೆನ್ನಟ್ಟದರ ಸಲಹಿದಂತೆ ಕರುಣಾ-
ಜಲಧಿಯೆ ॥ ೬೭ ॥
ಗತಿವಿಹೀನರಿಗಕಟ ನೀನೆ ಸದ್ಗತಿಯುಲಾ ।
ಚತುರಾಸ್ಯ ಜನಕ ವರ್ಮ್ಮರಿ ರಕ್ಷಿಸು ಭಕ್ತ ।

ವಿತತಿಯಂ ಪಾಲಿಸುವ ಬಿರಿದಲ್ಲದೇ ಮುಂದೆ ಮೂರ್ಲೋಕದೊಳ್
ನತ್ಸ ಮ್ಯಾಲಿ ||
ಹಿತವ ಬಯಸುವರಿಲ್ಲ ಕೃಪೆ ಮಾಡು ಸತಿ ಸುರಭಿ |
ರತಿಶಯದ ನೀತಿಯುಂಟದು ಹಿಂಗಿತೀ ಸಭೆಯೊಳಗೆಲೆ ದೇವ ಸಲ
ಹೆಂದಳು || ೭೮ ||
ದೇವ ದೇವಕಿ ದೇವಿಯರ ಶರೆಯ ಬಿಡಿಸಿದ್ಯೆ |
ಗೋವರ್ಧನವನೆತ್ತಿ ಗೋಕುಲವ ನುಳುಹಿದ್ಯೆ |
ಪಾವಗಿದ ಗೋವುಗಳ ವಿಂಡು ಸಂತ್ರೈಸಿದ್ಯೆ ರಕ್ಷಿಸಿದೆ ಗೋಪಾಲರ ||
(೧)ಕಾವಸುತನಂ ಪೊರವೆ ಬಾಣನಂ ಸಂಹರಿಸಿ |
ನೋವಿದೆ ಗಜೇಂದ್ರನಂ ಷೋಡಶ ಸಹಸ್ರ ಶತ |
ಕೋವಿದಂಗನೆಯರಂ ಬಂಧನದಿ ತೆಗ ತಂದೆ ತ್ರೀ ವಧೂವರನೆ
ಕಾಯೋ || ೭೯ ||
ಕಾಗಿಗಳ ಬಳಗದೋಳ್ ಶಿಲುಕಿ ಕೆಂಗೆಟ್ಟ ಮರಿ |
ಕೋಗಿಲೆಯ ತೆರನಾದೆನ್ಯೆ ಗಿಡಗ ನೌಕುತಿ |
ಪ್ನಾಗಿಳಿಯವಸ್ಥೆಯಂತಾದೆ ನ್ಯೆ ಕೊಲೆಗಡಕ ವ್ಯಾಧ ನೋಡಿದ
ಬಲಿಯೊಳು ||
ಹೋಗಿ ಬಿದ್ದಿಹ ಹರಿಣನಂತೆ ಬಾಯ್ಬಿಡುವೆನಾಂ |
ಕೂಗಿದರೆ ಕೇಳ್ವರಿಲ್ಲೆನ್ನದೂರಂ ಮಾನ |
ನೀಗಿಸುವ ಖಳನಿವನ ಕ್ಯೆಯಿಂದ ಬಿಡಿಸೆಂದು ಹರಿಗೆ ಮೊರೆ
ಇಟ್ಟಳಬಲೆ || ೮೦ ||
ನೊಕ್ಕಿ (ಸಿಕ್ಕಿ) ದಂತಕ ದೂತ ಯಳದೊಯ್ವ ಜಾಮಿಳನ !
ನಕ್ಕರದಿ ತೆಗಸಿ ಪಾಲಿಸಿದೆಲಾ ಕರುಣಾಬ್ಧಿ |
ಕಕ್ಕಸದ ಋಷಿಶಾಪ ತರಿದಂಬರೀಷನಂ ರಕ್ಷಿಸಿದೆ ಲೋಕವರಿಯೆ ||
ರಕ್ಕಸನ ಶೀಳಿ ಪ್ರಹ್ಲಾದನಂ ಪೊರವೆ ಕಾ |
ಲಿಕ್ಕೆ ಕಲ್ಲಾಗಿರ್ದಳೆಬ್ಬಿಸಿದೆ ಕೃಷ್ಣ ನಾಂ |
ಸಿಕ್ಕಿದೆನು ಕೌರುವರ್ಗೆನ್ನನುದ್ಧರಿಸೆಂದು ಹಲುಬಿದಳ್ ಪದ್ಮಜಾತೆ
(ದ್ರುಪದಾತ್ಮಜೆ) || ೮೧ ||

---

೧ ಕಾವಸುತ = ಕಾಮಸುತ. ಪ್ರದ್ಯುಮ್ನಸುತ = ಅನಿರುದ್ಧ

ಅಡವೆಯೋಳ್ ತಾಯಿ ಬಿಸುಟ ಶಿಸುವಂತಾದೆನೆಲೆ ।
ನೃಡಪಿತ ಮಹಾಹಸುಳ ಧ್ರುವರಾಯುಗೊಲಿದವಗೆ ।
ಧೃಡಪದವಿಯಂ ಕೊಟ್ಟು ರಕ್ಷಿಸಿದೆಲಾಪಿಂತೆ ದಶಕಂಠ ಕಾನುಜಂಗೆ ॥
ಕಡು ಮೋಹದಿಂದ ಸ್ಥಿರರಾಜ್ಯ ವಿತ್ತುಳುಪಿದ್ಯೆ ।
ಪೊಡವಿಯೊಳನಾಥರ್ಗೆನಾಥ ನೀನ್ಯೆದೀನ ।
ರೊಡೆಯ ತನ್ನಭಿಮಾನ ಈ ಸಮಯದೊಳ್ ಕಾಯ್ದುಕೊಳ್ಳೆಂದೊರಲ್ದಳಬಲೆ ॥ ೭೨ ॥

ಶ್ರೀಮದ್ರಮಾರಮಣ ಪೀತಾಂಬರಾಭರಣ ।
ತಾಮರಸದಳ ನೇತ್ರ ಕಮನೀಯ ಶುಭಗಾತ್ರ ।
ಶಾಮಣೀಯಕ ಮುಕುಟ ಕುಂಡಲಕೆಯೂರಮಣಿ ಕೌಸ್ತು-ಭೋದ್ಭಾಸ ಈಶಾ ॥
ಶಾಮ ನೀಲೋತ್ಪಲ ಶ್ಯಾಮ ಭಕ್ತ ಪ್ರೇಮ ।
ಭೂಮಿಧರ ಶ್ರೀವತ್ಸಲಾಂಛನ ಸುಖಾತ್ಮನೇ ।
ಕಾಮಪಿತ ಪುಷ್ಕರ ಗದಾ ಸುದರ್ಶನ ಶಂಖಪಾಣಿ ಸಲಹೆಂದಳಬಲೆ ॥ ೭೩ ॥

ಮಂದರೋದ್ಧಾರ ಗೋವಿಂದ ಕೇಶವ ಭಕ್ತ ।
ಬಂಧು ಪಾಂಡವ ಸ್ಥಾಪನಾಚಾರ್ಯ ವಾಮನಾ ।
(೧)ದಂದ ಶೂಕೇಶ ಪರ್ಯಂಕ ರಿಪುಭಯ ಶೋಕ ।
ಬಂಧನ ವಿಮೋಚಕ ಮುಕುಂದಕ್ಷೀರೋದಧೀ ।
ಮಂದಿರಚ್ಯುತ ಕೃಷ್ಣ ತನ್ನ ವಸನಂ ಬಿಡಿಸಿ ಕಾಯೆಂದಳಾದ್ರೌಪದಿ ॥೭೪॥

ಪುರು ಷೋತ್ತಮನಿರುದ್ಧಧೋಕ್ಷಜ ಪ್ರದ್ಯುಮ್ನ ।
(೧)ನಿರವದ್ಯ (೨)ನಿರುಪಮ (೩) ನಿರಂಜನ (೪) ನಿರಾಧಾರ ।
ನರಕಾರಿ ಖಳವೈರಿ ನಾರಾಯಣಘಹಾರಿ ಶೌರಿ ಶಾರಂಗಧಾರಿ ॥
ಖರಕುಂಭಕರ್ಣ ರಾವಣದೂಷಣಪ್ರಾಣ ।

---

೧ ದಂದಶೂಕೇಶ = ಹಾವುಗಳಿಗೆ ಶ್ರೇಷ್ಠನಾದ ಶೇ.ಷ

೧ ನಿರವದ್ಯ=ನಿರ್+ಅವದ್ಯ ದೋಷದೂರ ಉತ್ತಮ ೨ ನಿರುಪಮ=ಹೋಲಿ ಇಲ್ಲದವ ೩ ನಿರಂಜನ=ದೋಷ ಲೇಪವಿಲ್ಲದ ೪ ನಿರಾಧಾರ=ಪರರಾಶ್ರಯರಹಿತ ನಿಸ್ಪೃಹಯ

ಹರ ಚೈದ್ಯ ಶೀಕ್ಷ ದಾಮೋದರ ಜನಾರ್ದನ ।
ಸರಸಿರುಹನಾಭ ವೈಕುಂಠ ದ್ವಾರಕಿ ವಾಸ ಮಾನವಂ ಕಾಯೆಂದಳು॥೭೫॥

ಲಯವಿವರ್ಜಿತ ಪುಣ್ಯನಾಮ ಸಂಕರುಷಣನೆ ।
ಭಯ ನಿವಾರಣ ಸಕಳ ಸೃಷ್ಟಿಕಾರಣ ಜಗ ।
ನ್ಮಯ ತ್ರಿವಿಕ್ರಮ ವಿಷ್ಣು ಮಧುಕೈಟ ಭಾಂತಕ ಮಹ ಮಹಿಮ
ಲೋಕಪೂಜ್ಯ ॥

ಹಯವದನ ಸಚ್ಚಿದಾನಂದ ಗೋಪಾಲ ಚಿ ।
ನ್ಮಯ ರೂಪಸನಕಾದಿ ಮುನಿವಂದ್ಯ ನತಜನಾ ।
ಶ್ರಯಧೇನು ಶ್ರೀಕೃಷ್ಣ ತನ್ನಶರಗಂ ಖಳನಕೈಯಿಂದಬಿಡಿಸೆಂದಳು ॥೭೬॥

ಭೂಲೋಲ ಸತ್ಯಭಾಮಾಕಾಂತ ವೃಷ್ಣಿಕುಲ ।
ಮೌಳಿ ಕಂಸಾಸುರಧ್ವಂಸಿ ನಿರ್ದೋಷ ವನ ।
ಮಾಲಿ ದಕ್ಷಣ ಸಿಂಧು ಸೇತುಬಂಧನ ಲಕ್ಷ್ಮಣಾಗ್ರಜ ಧ್ವರಪಾಲಕಾ ॥

ವಾಲಿನಿಗ್ರಹ ಮೋಕ್ಷದಾಯಕ ಹೃಷಿಕೇಶ ।
ನೀಲಮೇಘಃಶ್ಯಾಮ ವಸುದೇವ ದೇವಕೀ ॥
ಬಾಲತವ ಪಾದವೇ ಗತಿಯೆಂದು ಮೊರೆಯೊಕ್ಕೆ ಮಾನವಂ
ಕಾಯೆಂದಳು ॥ ೭೭ ॥

ಮಾರುತೀವಲ್ಲಭ ಉಪೇಂದ್ರಘನ ವಿಕ್ರಮಾ ।
ನಾರದ ವಶಿಷ್ಠನುತ ಸಾಮಗಾಯನ ಪ್ರೀಯ ।
ಭೂರಿ ವಿಸ್ಮಯ ಚರಿತನಂತ ಸದ್ಗುಣ ಸಾಂದ್ರ ಕೂರ್ಮಸಮ
ಸತ್ಯಪೋಲಾ ॥

ಪಾರಿಜಾತಪಹಾರ ಕಪಟ ನಾಟಕ ಸೂತ್ರ ।
ಧಾರ ಶ್ರೀ ನರಸಿಂಹ ಶರಣವತ್ಸಲ ತನ್ನ ।
ಮಾರಿಗಳ ಕೈಯಿಂದ ತೆಗಸಿಲಜ್ಜೆಯ ನುಳುಹೊ ಶರಣ್ಹೋಕ್ಕೆ
ನಾನೆಂದಳು ॥ ೭೮ ॥

## ದಶಾವತಾರ ಸ್ತೋತ್ರ

ವೇದಗಳ ಪೊರದೆ ಗಿರಿಮುಳಗ ಲುದ್ಧರಿಸಿದ್ದೆ ।
ಮೇದಿನಿಯ ಕದ್ದೊಯ್ದವನಸೀಳ್ದೆ ಭಕ್ತನಂ ।

ಕಾದೆ ಪಾತಾಳಕದ್ದಿದೆ ಬಲಿಯ ಕಾರ್ತಿವೀರ್ಯಾರ್ಜುನನ ಭುಜ
ಶಿರವನು ||
ಛೇದಿಸೀ ಮೂರ್ಖ ದಶ ಶಿರನ ವಂಶವ ತರಿದೆ |
ಯಾದವೇಂದ್ರನೆ ನೋಡುವಸ್ತ್ರಹೀನಳ ಮಾಳ್ಪ |
ನೀ ದುರಳ ಖಳನ ಸಂಹರಿಸೆನ್ನ ಮಾನವಂ ಕಾಯೋಕಲಿ
ತಾಪಹರನೆ || ೭೯ ||

ಸಿರಿಯ ಸುಖ ಮದದಿಂದ ತವಚರಣ ಕಮಲಮಂ |
ಮರದಿರ್ದೆ ನೆಲೆಹರಿಯೆ ಈ ಮಹದ್ಭಯವೆನಗೆ |
ಬರಲು ಬಾಯ್ಬಿಡುವೆ ನಿನಗಜ್ಞರವ ಗುಣದೋಷಗಳ ನೋಡದೀ
ಕ್ಷಣದೊಳು ||
ಉರುವಣಿಸುತಿಹ ಪಾಪಿಗಳ ಜಾಲದೊಳ್ ಶಿಲ್ಕಿ |
ಮರುಳಾದೆನ್ನೈ ಕೃಷ್ಣ ತೋರಿಸು ಕೃಪೋದಯವ |
ಶರಗು ಬಿಡಿಸುವರಿಲ್ಲ ನೀನಿಲ್ಲದೀ ವ್ಯಾಳ್ಯಯೊಳ್ ಸಲಹು
ಸಲಹೆಂದಳು || ೮೦ ||

ಚರಣ ಭಜಕರ (ಕಳ) ಮಾನ ಹಾನಿಯಂ ನಿನ್ನದೈ |
ಹರಿಯೆ ಕೃಪೆಮಾಡೆನ್ನವ್ಯಾಲೆ ತವನಾಮಗಳ |
ಸ್ಮರಣೆ ಧನಿಕರಿಗುಂಟೆ ಘೋರ ಪಾತಕ ದುಃಖ ದುರಿತಭಯ
ಶತ್ರುಪೀಡೆ ||
ತರಳೆ ತಾ ಶೋಕಾರ್ತಳಾಗಿ ನಿನ್ನಡಿಗಳಿಗೆ |
ಮೊರೆಯೊಕ್ಕೆ ಸೀತೆಯಂ ಕಾಯಂತೆ ಮೋಹದಿಂ |
ಪೊರದರೊಳ್ಳಿತೆ ಕೊಂದರೊಳಿತೆ ಯನ್ನನೆಂದೊದರಿದಳ್ ದ್ರುಪದ
ತನುಜೆ || ೮೧ ||

ಕರವಂದರಿಂದಂಬರವ ಪಿಡಿದು ಮತ್ತೊಂದು |
ಕರವೆತ್ತಿ ಪಾಂಚಾಲೆ ಕೃಷಂಗೆ ಮೊರೆ ಇಡಲ್ |
ಕರದಡಾ ಸರ್ವಜ್ಞ ತಾಕೇಳದಂದಿರ್ದ ಬಳಿಕಾಕೆ ಮನದಿ ತಿಳಿದು ||
ಮರುಗಲ್ಯಾಕಭಿಮಾನವೆಲ್ಲ ನಿನಗರ್ಪಿಸಿದೆ |
ಕರುಣಾಬ್ಧಿ ಕಾಯೆಂದು ದ್ವಯಹಸ್ತಗಳ ನೆಗಹು |

(೧)ತೊರಲಿದಳ್ ಕಣ್ಮುಚ್ಚಿಕೊಳುತ ಶ್ರೀ ರಾಮರಾಮೆನುತ ಗದ್ಗದ
ಸ್ವರದಲಿ ॥ ೮೨ ॥

ನಂದ ನಂದನ ಗೋಪಿ ವೃಂದವಲ್ಲಭದಿವಿಜ ।
ವಂದಿತಾಂಘ್ರಿ ದ್ವಂದ್ವ ಗೋವಿಂದ ನೀನೆನ್ನ ।
ತಂದೆ ತಾಯಿ ಬಂಧು ಬಳಗ ಗುರುಸಖನೆಂದು ಹೊಂದಿದೆನು
ತವಚರಣವ ॥

ನೊಂದೆ ನುಗ್ಗಾದೆನ್ನೈ ಖಳನ ಬಾಧೆಯುಲಿಂದ ।
ಸಂದೇಹವ್ಯಾಕ ದಯಮಾಡೆನುತ (ಪುತಾ) (_)ಹೊರಬಿಗಳೆ ।
ಹಿಂದೆಬಂದೆಡರ ಪರಿಹರಿಸಿದಂತಾಗೆನ್ನ ಅಭಿಮಾನ ।
ಕಾಯೆಂದಳು ॥ ೪ ॥

ದ್ರೌಪದಿಗೆ ಅನಂತವಸ್ತ್ರವಾದುದು

ಚಿತ್ತವಿಸಿರೆಲೆ ಮೌನಿಗಳಿರೈ ಹರಿಲೀಲೆಯಂ ।
ದತ್ತದ್ವಾರಕಿಯೊಳಗೆ ಸತ್ಯಭಾವೆಯು ಕೂಡೆ ।
ಚಿತ್ತವಾಡುತ ಕೇಳಿದಂ ಜಗದ್ವ್ಯಾಪ್ತ ನಾ ಕೃಷ್ಣೆ ಯೊರಲುವ
ಹುಯ್ಲನು ॥

ಚಿತ್ತದೊಳ್ಮರುಗು ತಕ್ಷಯವಾಗಲೆನುತ ಕರ ।
ವೆತ್ತಿಹಾಸಂಗಳಿಗನುರುಳಿದಂ ಶ್ರೀಕೃಷ್ಣ ।
ನುತ್ತುಮರ ಹಾನಿಯಂ ನೋಳ್ಪನೇ ದ್ರೌಪದಿಗನಂತ ವಸ್ತ್ರಗಳಾದವು
॥ ೮೫ ॥

ಸತ್ಯಭಾವೆಗೆ ನಿಜವಾರ್ತೆ ಪೇಳ್ದುದು

ದೇವನೀ ಹೇಳಿದೇನಕ್ಷಯುದವಾಕ್ಯ ಸಂ ।
ಭಾವಿತವೆಲೆತ್ತ ಸಂಗತಿಗೆ ಪಲ್ಲಟವಾಯಿ ।
ತೀವಿಚಾರವಂ ತನಗೆ ತಿಳಿಯದೆಂದಾ ಸತ್ಯಭಾವಾ ನಸುನಗುತು
ಸುರಲೂ ॥

ಶ್ರೀವರಂ ನುಡಿದನೆಲೆ ಬಾಲೆಕೇಳಾ ಹಸ್ತಿ ।
ನಾವತಿಗೆ ಕೌರುವರ ಪಾಂಡು ತನಜಾತರಂ ।

---

೧ ದ್ರೌಪದಿಯು, ಭಾರತಿಯು, ಋಜುಪತ್ನಿಯರು ಅವರಿಗೆ ಗೋಪಿಕಾ ಸ್ತ್ರೀಯರಂತೆ ದೇಹಾಭಿಮಾನವಿಲ್ಲ. ಸಂತತ ಹರಿಸ್ಮರಿಸರು ಆಪತ್ತಿಗೊಳಗಾದಂತೆ ಲೋಕರೀತ್ಯಾ ಅಭಿಮಾನ ಕಾಯೆಂದು ಮೊರೆ ಇಟ್ಟಳು. ೨ ಅನ್ಯಳೇ

ತಾವಾಗಿ ಕರೆಸಿ ಕಪಟದ್ಯೂತದಿಂದವರ ಸರ್ವಸ್ವಂಗೆಲಿದರು ॥ ೮೫ ॥
ಭೂಪಾಲ ಬಳಿಕನುಜರಂ ತನ್ನ ಮಡದಿಯಂ ।
ಪಾಪಿಷ್ಟರಿಗೆ ಸೋಲ್ದು ಮರುಳಾದನಾಖಳ ।
ದ್ರೌಪದಿಯ ಸಭೆಗೆ ಕರತಂದು ವಸ್ತ್ರಾಕರ್ಷಣಂಗೈಯೆ ಕರವನೆಗಹಿ ॥
ಆ ಪತಿವ್ರತೆ ತನ್ನ ಮಾನವಂ ರಕ್ಷಿಸೆಂ ।
ದಾಪಾರ ಸ್ತೋತ್ರವಂ ಮಾಡೆನ್ನ ಮೊರೆಯೊಕ್ಕ ।
ಾಪುಣ್ಯವಧುವಿಗಕ್ಷಯವಾಗಲಂಬರವನೆಂದು ತಾ ನುಡಿದೆನೆಂದಾ ॥೮೬॥

ದುಃಶಾಸನನು ವಸ್ತ್ರ ಸೆಳಸೆಳದು ಸೋಲ್ದು ನೆಲಕೆ ಬಿದ್ದ

ಜಲಸೀನೆ ಸರ್ವಾಂತರ್ಯಾಮಿ ನಿನಗಿದ ।
ಚ್ಕ್ರರಿಯೇ ಶರಣಾಗತರ ರಕ್ಷಾಮಣಿಯೇ ಯೆಂಬ ।
ಬಿರಿದಲ್ಲವೇ ನಿನ್ನ ಮಹಿಮೆಗ ನಮೋಯೆಂದಳಾದೇಪಿ ಬಳಿಕಿತ್ತಲೂ ॥
ತರುಣಿಗಕ್ಷಯ ವಸ್ತ್ರವಾದ ಪಾಪಾತ್ಮ ।
ಸುರವಣಿಸಿ ಸಳ ಸಳೆದು ಕೈಸೋತು ಬಿದ್ದನಾ ।
ಗಿರಿಯಂತೆ ಶೀರೆಗಳ ರಾಸಿ ಕಣ್ಗೆಸೆವವೆಂತುಟೊ ಕೃಷ್ಣಸೊಲ್ಮೆಸತಿಗೆ॥೮೭॥

ದ್ರೌಪದಿಯ ಅಖಂಡ ಭಕ್ತಿ ವರ್ಣನೆ

ಕಂಡುದಲ್ತಾ ಜನಂ ಬೆರಗಾಗಿ ದ್ರೌಪದಿಯ್ಯ ।
ಖಂಡ ಭಕ್ತಿಯ ದೈವ ಪ್ರತ್ಯಕ್ಷಮೊಲ್ಮೆಯಂ ।
ಬೆಂಡಾಗಿ ಬಿರ್ದ ದುಃಶ್ಶಾಸನನು (ನ) ತಮತಮಗೆ ರೋಮಾಂಚನದ ಮುದದೊಳು ॥

ಶ್ರೀ ಹರಿಯ ಸ್ತುತಿ ದೇವತೆಗಳು ಹೂ ಮಳಗರೆಯುವಿಕೆ

ಪುಂಡರೀಕಾಕ್ಷನಂ ಸ್ತುತಿಸಿದರ್ ದೇವ ನೀ ।
ಖಂಡಿಸಿದೆಲಾ ತರುಳೆಯಭಿಮಾನ ಭಂಗಮಂ ।
ಕೊಂಡಾಡಿದರೆ ಕಾಯ್ವ ಕರುಣಿ ದೀನೋದ್ಧರಣ ನೀನೆ ನಿಶ್ಚಯ ಜಗದೊಳು ॥ ೮೮ ॥

ಆ ಸಮಯದೋಳ್ ದ್ರುಪದನಂದನೆಯ ಶಿರಿ ಮುಡಿಗೆ ।
ವಾಸವಾದ್ಯಮರರಾಕಾಶದಿಂ ಪೂಮಳೆಯ ।
ಸೂಸಿದರು ಮನದೊಳಗೆ ಹರುಷವಂ ತಾಳ್ದರಾವಿದುರ ಭೀಷ್ಮದ್ರೋಣರು॥

ಕೌರವನ ದೌರ್ಜನ್ಯ

ಆ ಸುಯೋಧನ ಕೋಪದಿಂ ನುಡಿದ ನೂಕಿವಳ |
ದಾಸಿಯುರ ಆಲಯ (ಧಾಮ) ದೊಳು ತಮ್ಮ ನೀ |
ಶೀರಿಗಳ ರಾಶಿಯಂ ಬೊಕ್ಕಸಕೆ ತೆಗಸು ನೋಡುವೆನೀಕೆಯಂ
ಬಿಡಿಸಿಕೊಂಬ ಭಟರಾ ॥ ೮೯ ॥

ವಿದುರನು ನಿರಾಕರಿಸುವಿಕೆ

ನೆನಪೆ ನೀನಸುರಾರಿತನ ನಾಕಂದತಿರಲಿನ್ನು |
ವನಜಾಯತಾಕ್ಷಿಯಂ ಬಿಡು ಮೂರ್ಖತನವ್ಯಾಕೆ |
ಘನಪ್ಪೈವ ದೊಜ್ತ್ರಯಂ ಕಂಪಳ್ಳಿ ಪ್ರತ್ಯಕ್ಷನಾಗಿ ನೀ ತಿಳಿದು ತಿಳಿದು ॥
ವನಿತೆಯಂ ಕೋರಿದುಷ್ಕೀರ್ತಿ ಘಳಿಸುವರೆ ನೃಪ |
ಕನಲಿದರೆ ಭೀಮ ನಾರ್ಘಟಿಕೆ ಕೆಂಗಡುವೆಲವೂ |
ಜನಪಸ್ತ್ರೈವರ ನೊಲಿದಂತೆ ಮಾಡೆಂದನು ವಿದುರ ಕೌರವಗೆಜರಿದು॥೯೦॥

ಕೌರವನು ಕರ್ಣಗೆ ದ್ರೌಪದಿಯ ನೂಕು ಸೀರೆಗಳೆಲ್ಲ **ಬೊಕ್ಕಸಕ್ಕೆ ಕಳುಹೆಂದ.**

ನೀತಿ ಮರುಳಿನ ವಿದುರನಿನ ಪ್ರಯೋಜಕದ |
ಮಾತಿನಲಿ ಫಲವೇನು ರಾಧೇಯ ಕಳುಹಿವಳ |
ದೂತೆ ಸುರ ಮನಿಗಲ್ಲಿ ದೈವಕೃಪೆ ಹೆಂಗಸಿಗೆ ದೃಷ್ಟಿಬಂಧನಮೋಹನ ॥
ಯಾತರಿಂದೆನಗಡಳೊ ವಸ್ತ್ರ ನಡಲಿದು ಲಜ್ಜೆ |
ಜಾತೆಯುಡದದು ಜಿನವ ಶೀರಯಂ ತೆಗಸಿನ್ನು |
ಭೀತಿ ಯಾಕನುತ ದುರ್ಯೋಧನಂ ತೊಡೆಯನಪ್ಪಳಿಸಿ ಘರ್ಜಿಸಿ
ನುಡಿದನು ॥ ೯೧ ॥

ದ್ರೌಪದಿ ರೋಷಾಗ್ನಿ ಜ್ವಾಲೆಯಿಂ ಸಕಲ ಶೀರೆಗಳು ಭಸ್ಮವಾದವು.

ಆ ಸುಯೋಧನನ ದುರ್ವಚನವುಂ ಕೇಳುತತಿ |
ರೋಷದಿಂ ಪಾಂಚಾಲೆ ಕಣ್ದೆರದು ನೋಡಲಾ |
ರಾಶಿಯಾಗಿರ್ದ ಶೀರಿಗಳುರಿದು ಬಿದ್ದ್ವರದಗ್ನಿಜ್ವಾಲೆ ರಾಜಸಭಿಗೆ ॥

ದ್ರೌಪದಿಯು ಕೌರವಗೆ ಶಾಪ ನೀಡ್ದಳು

ನೂಸಿದದು ಕೃಷ್ಣೆ ಖಳಗೆಂದಳಿಲಿ ಭಂಡ ನೀ |

೧ ದೂಸರವನಾಡುವನೆ ನಿಗ್ನ ತೊಡೆಗಳ ಮುರಿವು ।
ಘೋಷಿಸಿ ಮಾಡುತ ಕೆಡಹಲೀ ಸಮರದ ರಣದೊಳಂದು ಶಾಪವ
ಕೊಟ್ಟಳು ॥ ೯೨ ॥

ಚಪಳೆ ಫಡ ನೂಕಿವಳ ಗರ್ವದಿಂದಪಶಬ್ದ ।
ವಿಪರೀತ ನುಡಿವೆಳಲೆ ತಮ್ಮನೀ ಪಿಡಿದೆಳೆದು ।
ಕುಪಿತ ಮುಖಿಯಂ ಕೊಂಡು ನಪ ತೊತ್ತಿನಾಲಯಕ್ಕೆಂದು
ಕುರುಪತಿ ನುಡಿಯಲು ॥

ದುಃಶಾಸನ ಪುನಃ ಪ್ರೈಮೋಲೆ ರ ಭೀಮನಿಗ ನೆಗಿ ಇಡುವಿಕೆ

ಕಪಟಿ ದುಃಶಾಸನಂ ಮತ್ತೆ ಜರಿದ್ಬರಿಪು ।
ತಪಹಾನ ವಚನಂಗಳಾಡು ಮುರಾ ಸ್ಕ್ವ ।
ದ್ರುಪದ ಸುತೆ ಕಂಪಂಜಿ ನೋಡಿದಳ್ ನಲಿಹೆಂಸು ಬಕಸ್ಕರಿಯಂ
ಸಭೆಯೊಳು ॥ ೯೩ ॥

ಭೀಮನು ಕೋಪಾ ಲಂ ಕೌರವನ ಮೋಲೇರಿದ

ಘುಡುಘುಡಿಪ ಮೋಡದಿಂದೊಡದು ಮುಂದಿನ ಮಹಾ ।
ಸಿಡಿಲಿನಂತಾರ್ಭಟಿಸುತನಿಲಜಂ ಕೋಪದಿಂ ।
ಕಿಡಿಯನುಗುಳುತ ಸಭಾಮಧ್ಯದಿಂ ದಡ ಹಾಯ್ದು ಕಿಳಿಸಿನೆ
ಪಲ್ಮುರಿವುತಾ ॥

ಕುಡಿಸುವೇಂ ಭೂತಗಣಕೀ ಖಳನ ರಕ್ತಮಂ ।
ತಡಿಗಡಿಗೆ ಕೌರುವರನೂರ್ವರಂ ಪಕುನಿಯಂ ।
ಮಡದಿ ನೀಕ್ಷಿಸು ಭೂಪ ಮುನಿದರಂಜುವೆನೆ ತಾನೆನುತ ೨ತಾಗಿದನು
ಭರದಿ ॥ ೯೪ ॥

ಭೀಮನಾರ್ಭಟಕೆ ಕೌರವರೆಲ್ಲ ಲಾಾ ... ಸ್ಪದನೆ.

ನಡುಗಿದದು ಸಭೆಯು ತಲ್ಲಣಿಸಿ ಸತಿ ಕೇಳನೆಪೆ ।
ವಡದ ನಾಕ್ಷಣದಿ ದುಶ್ಯಾಸನಂ ತಾತ್ತು ।
ಲಡಗಿದನೊ ಬಿಟ್ಟೋಡಿದಂ ಸೌಬಲ ಜಯದ್ರಥಾ ಧೃತಿಗೆಟ್ಟು
ಕಂಪಿಸಿದರು ॥

---

೧] ದೂಸರವ = ಸ್ವಲಾಭ, ನಿಸ್ವ, ಕಾಣ, ಸ್ವಾರ್ಥತನ.
೨] ತಾಗಿದನು = ತಾಕಿದನು, ಮೋಲೇರಿ ಹೋದನು.

ಒಡೆಯು ನೈತರಲೀಕ್ಷು (೧) ವಾಟಮುಂ ಪೊಕ್ಕಿರ್ದ ।
ಬಡನರಿಗಳೋಡುವಂತೆಲ್ಲ ಕೌರುವರಂಜೆ ।
ಕಡುಹರುಷ ಭಾರದಿಂದರಮುನಿಗೆ ಹರಿದಳಾ ವಾಂಚಿಲೆ ಬಳಿಕ-
ನಗುತಾ ॥ ೯೫ ॥

ಭೀಮನು ಪುನಃ ಹುಂಕರಿಸುವಿಕೆ

ನಡೆ ತರುಣಿ ತನ್ನಾಣೆ ಬಳಲಿದಿಯಲಾ ಭೀತಿ ।
ಬಿಡಿಸಿದೇಂ ಪೋಗು ಧರ್ಮಜನಾಜ್ಞೆಯಂತೆಂಬ ।
ತೊಡಕುವತಿ ನುಗ್ಗಾಯ್ತುಲಾ ಶರಗು ಪಿಡದೆಳದ ದುಶ್ಯಾಸನನ ಶಿರವನು॥
ಕಡಿದು ಪೊಡೆಬಿಗಿದು ನಿಡಿಗರುಳ್ಗಳಂ ತೆಗೆದು ತವ ।
ಮುಡಿಗೆ ಮುಡಿಸುವೆನೆಂದು ಕುರಳ ನ್ಯಾವರಿಸಿ ವೈ ।
ದಡವಿ ಮಾರುತಿ ಮತ್ತೆ ಹುಂಕರಿಸಿದಂ ವೈರಿಗಳ ಮ್ಯಾಲೆ (ಮೇಲೆ)
ಶೀಘ್ರನೆನುತಾ ॥ ೯೬ ॥

ವಿಜಯನು ಭೀಮನನ್ನು ಶಾಂತಗೊಳಿಸುವಿಕೆ

ವೀರ ಸೈರಿಸು ಸೈರಿಸೆಲೆ ಭೀಮಸೇನ ರಿಪು ।
ಕೌರುವರ ಸಂಹರಿಪ ಹೊತ್ತಲ್ಲ ಧರ್ಮಜಂ ।
ಚಾರು ಸತ್ಯವನುಳಿದು ಬದುಕುವನೆ ಭೂಪತಿಯ ಶಪಥಪೇ ಪೂರೈಸಲಿ॥
ನಾರಿಯುಂ ಬಿಡಿಸಿದ್ದೈ ಲೇಸಾಯ್ತು ನಾಕಿನ್ನು ।
ಸಾರು ನಾರೆಂದಾ ಧನಂಜಯುಂ ಪಿಡಿಯಲಾ ।
ಮಾರುತ ಸುತಂ ಮುಂದಿನಾಗತವ ಬಲ್ಲನದರಿಂದ ಕೋಪವ
ಮಾಣ್ದನು ॥ ೯೭ ॥

ಹಸ್ತಿನಾವತಿಯಲ್ಲಿ ಉತ್ಪಾತಗಳಾಗುವಿಕೆ

ಅವಾಳ್ಯಯೊಳ್ ಋಷಿಗಳಿರೆ ಕೇಳಿ ವಿಸ್ಮಯುವ ।
ತೀವಿದದು ಬಿರುಗಾಳಿ ಹಗಲುಗತ್ತಲೆ ಹಸ್ತಿ ।
ನಾವತಿಯ ಪಟ್ಟಣದೊಳರುಣಾಂಬು ಮಳೆ ಸುರಿದು ದದರಿನೆಲ
ಬಾಯ್ಬಿಟ್ಟಿದು ॥

---

೧ ಇಕ್ಷುವಾಟವಮಂ = ಕಬ್ಬಿನ+ವಾಟವಮಂ=ತೋಟವನ್ನು ಕಬ್ಬಿನ ತೋಟವನ್ನು

ದೇವತಾ ಪ್ರತಿಮೆಗಳು ಹೂಂಕರಿಸಿದವು ಗೋಪು ।
ರಾವಳಿಗಳುಡಿದುದು ತ್ರಾಪತಂಗಳಮಿತ ಸ ।
ಭಾವಲಯಮೊಳ್ ಕೆಡಿಯು ಉಲ್ಲೆಲ್ಲಿ ಪುದುಗಿದದು ಭೀತಿಗರ
ಹೊಡದು ಜನರು ॥ ೯೮ ॥

ಭೀಷ್ಮನು ಧೃತರಾಷ್ಟ್ರನಿಗೆ ಪಾಂಚಾಲೆಯು ಸಂತೈಸಿ ಕಳುಹೆಂದನು.

ನೋಡಿದೈ ಧೃತರಾಷ್ಟ್ರ ದುರ್ನಿಮಿತ್ಯಂಗಳಂ ।
ಕೇಡಹದು ಕುರಕುಲಕೆ ನಿಶ್ಚಯಂ ತವಸುತರ್ ।
ಕಾಡಿದರ್ ಬರಿದೆ ಪಾಂಚಾಲಿಯುಂ ಪತಿವೃತೆಯ ಬಳಲಿಕೆಯು
ತಾಗದಿಹುದೆ ॥

ಆಡಲೇನಹುದಿನ್ನು ಕೃಷ್ಣೆ ನರ ಮಾನಿನಿಯೆ ।
ಮೂಢ ನೀನರಿಯೆ ಮುಖಜಾತೆಯೆಲ್ಲವೆ ಪೋಗಿ ।
ಬೇಡಿಕೊಂಡಾಕೆಯಂ ಸಂತೈಸಿ ಕಳುಪು ನಡೆನಡೆಯೆಂದನಾ-
ಭೀಷ್ಮನು ॥ ೯೯ ॥

ಯುಧಿಷ್ಠಿರನು ದ್ರೌಪದಿಗೆ ಬೇಡಿಕೊಳ್ಳುವಿಕೆ

ಆ ದೇವವ್ರತನ ಮಾತಂ ಕೇಳ್ದು ಧೃತರಾಷ್ಟ್ರ ।
ಖೇದಮಿಗೆ ನಡೆತಂದು (ಹರಿತಂದು) ದ್ರೌಪದಿಯನುಪಚರಿಸು ।
ತಾದರದೊಳೆಂದನೆಲೆ (ತಾಯೆ) ತನ್ನಯ ಮಾತು ಮನ್ನಿಪದು
ಪಾಪಿಷ್ಠರು ॥

ಭಾದಿಸಿದರಪಕೀರ್ತಿಕಂಜದಲೆ ಒಳಲಿ ನೊ ।
ಪ್ಪಾದೆಲಾ ಮುಗುಳೆ ಮತ್ಸರದಿಂದ ಮನದೊಳ್ ವಿ ।
ಷಾದವಂ ಬಿಡು ನೀಕ್ಷಿನೆನ್ನ ಖಳರೆಸಗಿದಪಕಾರವುಂ
ಮರಿಯೆಂದನು ॥ ೧೭೦ ॥

ಧರ್ಮ ನಿಮ್ಮದು ತಾಯೆ ಪಂಚಮುಖವಾತಕದ ।
ಕರ್ಮವೆಮ್ಮದು ಲೋಕ ಮೆಚ್ಚಲಿಕೆ ಸತ್ಯಗುಣ ।
ನಿರ್ಮಳ ಚರಿತ್ರರ್ಕೈ ಸಲೆ ನೀವು ಜಗವರಿಯೆ ಕುಹಕಿಗಳ್ ತಾವೈಸಲೆ ॥
ದುರ್ಮತಿಗಳೆನ್ನ ತನುಜಾತರಪರಾಧ ಸಾ ।
ವಿರ್ಮನದೊಳೆಣಿಸದಲೆ ಮರದು ಕಳವದು ಪಾಂಡು ।

ವರ್ಮರ್ಳಿದರುಳಿದಪರೆ ತನ್ನವರ್ ತರುಳಾಕ್ಷಿ ಕರುಣದಿಂ
ನೋಡೆಂದನು ॥ ೧೦೧ ॥

ಅಂಧನೃಪನು ಪಾಂಡವರನ್ನು ಸಂತೈಸುವಿಕೆ

ಮಕ್ಕಳಮರೆನಗಲ್ಲ ಕಡಿಗೆ ಸದ್ಗತಿ ಕೊಡುವ ।
ಮಕ್ಕಳೈವರ್ ನೀವೆ ಧರ್ಮಸುತ ಬಾ ಕಂದ ।
ಮಕ್ಕಳಾಟಿಕೆಯಾಯ್ತು, ಈಶಕುನಿ ದೆಸೆಯಿಂದ ಪಾಪಿಮಗನಿಮ್ಮನಿನಿತು॥
ತಿಕ್ಕಿದನಲಾ ವೈರಿಸಿದರಕಟ ನಿನ್ನ ಸ ।
ತ್ಯಕ್ಕೆ ಕುಂದಿಲ್ಲ ಕುರುರಾಯನೆನ್ನಾಜ್ಞೆಯಂ ।
ಮಿಕ್ಕಿ ನಡೆವವನ ಗುಣದೋಷಗಳ ನೋಡಬ್ಯಾಡಂದಪ್ಪಿದನು
ಭೂಪನ ॥ ೧೦೨ ॥

ಧೃತರಾಷ್ಟ್ರನು ಧರ್ಮಾದಿಗಳನ್ನು ಮನ್ನಿಸಿ ಬೀಳ್ಕೊಟ್ಟ

ಪಾಲಿಸಿನ್ನವನಿಯಂ ಮಗನೆ ದುರ್ಯೋಧನನ ।
ಖೂಳತನವಂ ಮನಕೆ ತಾರದಲೆ ತೆರಳ್ವದಿಂ ।
ನ್ನಾಲಸ್ಯ ವ್ಯಾಕೆನುತಲಂಧ ನೃಪಪಾಂಡುನರ ಸಲೆ ಮನಸ್ತಾಪ ಬಿಡಿಸಿ॥
ಬಾಲೆಯಂ ಸಂತೈಸಿ ದಿವ್ಯ ವಸ್ತ್ರಾಭರಣ ।
ಮಾಲೆಗಳ ಉಡುಗರೆಯ ನಿತ್ತು ಮನ್ನಿಸಿ ಪುರಕೆ ।
ಬೀಳ ಕೊಡಲೈವರತಿ ಸಂಭ್ರಮಾನ್ವಿತರಾಗಿ ಪೊರಮಟ್ಟರರ
ಮನೆಯನು ॥ ೧೦೩ ॥

ಧರ್ಮರಾಜನು ಬಲದೊಡನೆ ಇಂದ್ರಪ್ರಸ್ಥಕೆ ತೆರಳುವಿಕೆ

ಭೂಮೀಶ ಧರ್ಮಜಂ ತನ್ನ ಬಲದೊಡನೆ ಸು ।
ತ್ರಾಮ ಪ್ರಸ್ತಕೆ ಅನುಜರೊಡಗೂಡಿ ಸತಿ ಸಹಿತ ।
ಸಾಮಜ ನಗರದಿಂದ ಪೊರಮಟ್ಟನಾ ದ್ರೋಣ ಭೀಷ್ಮ ವಿದುರಾದಿಗಳಿಗೆ॥
ಪ್ರೇಮದಿಂದೆರಗಿ ಕಳುಹಿಸಿಕೊಂಡು ಕೃಪೆಯಿಂದ ।
ತಾಮುಸರುಪದ್ರವಂ ಕಳದು ರಕ್ಷಿಸುಯೆಂದು ।
ಶ್ರೀ ಮನೋಹರ ವಿಠಲನ ಮಹಿಮೆ ಪೊಗಳುತ ತೆರಳಿದಂ ಅತಿ
ಹರುಷದಿಂದ ॥ ೧೦೪ ॥

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ ಶ್ರೀಮದನಂತ
ಕಥಾ ಪ್ರಸಂಗೆ ಆರನೇ ಸಂಧಿ ಸಮಾಪ್ತ ಮಂಗಳಮಾಹ

॥ ಶ್ರೀ ಗುರು ಮಧ್ವ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋನಮಃ ॥

## ಶ್ರೀ ಮದನಂತ ಕಥಾ

## ಅಥ ಏಳನೆ ಸಂಧಿ ಪ್ರಾರಂಭ

**ಸಂಧಿ ಸೂಚನೆ** ರಾಗ ರೇಗುಪ್ತಿ.

॥ಪಲ್ಲವಾ॥ ಮಾನವಾಧೀಶ ಧರ್ಮಾತ್ಮಜಂ ವನದಿ ದು ।
ವಮ್ಮಾನದಿಂದಿರೆ ಭಕ್ತ ವತ್ಸಲಂ ಬಂದು ಸು ।
ಮ್ಮಾನದಿಂ ಸಂತೈ ಸುತಪ್ರತಿಮನಂತನ ಚರಿತ್ರೆಯಂ ವಿವರಿಸಿದನು ॥

### ॥ ಪದನು ॥

ಶ್ರೀ ವೆಂಕಟೇಶನ ಸ್ತೋತ್ರ

ಪಂಕಜಗದಾ ಶಂಖ ಚಕ್ರಶೋಭಿತ ನಿಷ್ಕ ।
ಳಂಕದ ಚುತುರ್ಭುಜದಿ (ದ) ಶ್ರೀ ವತ್ಸ ಕೌಂಸ್ತುಭಾ ।
ಲಂಕಾರದಿಂದ ಮಣಿಮುಕುಟ ಮಂಡಿತ ಪೂರ್ಣ ಚಂದ್ರ ಸಮ
ವದನದಿಂದ ॥
ಕುಂಕುಮ ಛವಿಯನವ ಹಾಟಕಾಂಬರದಿ ಮೀ ।
ನಾಂಕಶತಕೋಟಿ ಲಾವಣ್ಯದಿಂ ಮೆರವ ಶ್ರೀ ।
ವೆಂಕಟೇಶ್ವರನೆತವ ದಿವ್ಯ ವಿಗ್ರಹವ ಧ್ಯಾನಿಸುತಲೀ ಕೃತಿಪೇಳೆನು ॥೧॥

ಶ್ರೀ ಭೀಮಸೇನ ದೇವರ ಸ್ತುತಿ

(೧)ಹರಿಣಾಂಕ ವಂಶ ಸಂಜಾತನಂ ಖ್ಯಾತನಂ ।
(೨)ಹರಿಜಾಕ್ಷ (೩) ನಚ್ಛಿನ್ನ ಭಕ್ತನಂ ಶಕ್ತನಂ ।

---

೧ ಹರಿಣಾಂಕ=ಚಿಗರೆ ಚಿನ್ಹವುಳ್ಳ ಚಂದ್ರನವಂಶದಲ್ಲಿ ಪುಟ್ಟಿದ. ೨ ಹರಿಜಾಕ್ಷ= ನೀರಿನ ಪ್ರವಾಹ = ನೀರಿನಲ್ಲಿ ಪುಟ್ಟಿದ ಕಮಲದಂತೆ ಕಣ್ಣುಳ್ಳ ಶ್ರೀ ಹರಿಯ ೩ ಅಚ್ಛಿನ್ನ=ಛಿನ್ನವಾಗದೆ ಒಂದೇ ಪ್ರಕಾರದಿಂದಿರುವ ಏಕಾಂತಭಕ್ತ.

(೪) ಹರಿ ಧ್ವಜನ ಜೀವಾಪಹಾರನಂ ವೀರನಂ ದ್ರೌಪದಿ
ಮನೋಹಾರನಾ ||
(೫)ಹರಿಸುತನ ಮೋಹಿದಿಂ ಪೊರದನಂ ಮೆರದನಂ |
ಹರಿದ್ವೇಷಿಗಳನ್ನೆಲ್ಲ ಮುರಿದನಂ ವರದನಂ |
(೬)ಹರಿತನಯು ಸಂಪೂರ್ಣ ಕಾಮನಂ ಭೀಮನಂ ಸ್ಮರಿಸಿ ಮುಂಗತೆ
ಪೇಳ್ವೆನು || ೨ ||

ಶೌನಕರ ಪ್ರಶ್ನೆ

ಆವಜನ್ಮಾಂತರದ ಪುಣ್ಯ ಪ್ರಭಾವವೋ !
ಕೋವಿದ ಪುರಾಣೀಕ ನೀನೆಮಗೆ ಸಮನಿಸಿದೆ |
ನಾವೆಧನ್ಯರು ಲೋಕದೊಳಗೆಲೇ ಸೂತಮುನಿ ಹರಿಕಥಾಕೌತುಕವನು||
ಭಾವಶುದ್ಧಿಯಲಿ ತವಮುಖದಿಂದ ಕೇಳ್ದ ಸ |
ಜ್ಜೀವಿಗಳಿಗುಂಟೆ ಜನನಾದಿ ದುಃಖಂ ಪರಮು |
ಪಾವನ ಚರಿತ್ರೆಯಂ ಕರುಣದಿಂದರುಹೆಂದು ಶೌನಕರ್
ಬೆಸಗೊಂಡರು || ೩ ||

ಕೌರವನು ದುಮ್ಮಾನದಿಂದ ತಂದೆಯಡಿಗೆ ಬಂದನು.

ಹರಿಕಥಾ ಶ್ರವಣದಾಸಕ್ತಿಯೊಳ್ ನಿಮ್ಮ ಮನ |
ನಿರತವಾದುದೇ ಲೇಸು ಲೇಸು ಕೇಳಾದಡು |
ತ್ತರ ಪ್ರಸಂಗವ ಮುನಿಗಳಿರೆ ಬಳಿಕ ಧರ್ಮಜಂ ಧೃತರಾಷ್ಟ್ರನಾಜ್ಞೆ
ಯಿಂದ ||
ಹರಿಪ್ರಸ್ಥಕನುಜರೊಡಗೂಡಿ ದ್ರೌಪದಿ ಸಹಿತ |
ತೆರಳಿದಂ ಪೈಣಗತಿಯೆಂದಿತ್ತ ದುರ್ಬುದ್ಧಿ |
ಕುರುಪನೀ ವಾರ್ತೆಯಂ ಕೇಳ್ದು ದುಮ್ಮಾನದಿಂ ಪಿತನಡಿಗೆ
ನಡೆತಂದನು || ೪ ||

---

೪ ಹರಿ ಧ್ವಜ–ಹಾವೇ ಧ್ವಜವಾಗಿರುವ ದುರ್ಯೋಧನ ೫ ಹರಿಸುತ– ಯಮಸುತ– ಧರ್ಮರಾಜ ಅಥವಾ ೬ಹರಿ– ಇಂದ್ರಸುತ = ಅರ್ಜುನ ಹರಿ = ದೇವರು ವಿಷ್ಣು. ಸಂಕರುಷಣನ ಮಗ ವಾಯು. ೭ ಸಮನಿಸಿದೆ=ದೊರಕಿದೆ.

ಕೌರವನು ಪಾಂಡವರ ಪುನಃ ಗೆಲ್ಲಲುದ್ಯೋಗ

ತಾತ ಚಿತ್ತೈಸು ಸರ್ವಸ್ವವಂ ಸೋಲ್ದಿಮಗೆ ।
ದೂತರಾಗಿರ್ದ ಪಾಂಡುವರನಂ ಸಂತೈಸಿ ।
ಪ್ರೀತಿಯಿಂದವರ ನಿಜರಾಜ್ಯಕ್ಕೆ ಬೀಳ್ಕೊಟ್ಟರೆಂಬುದಂ ಕೇಳ್ದೆನಿಂದು ॥
ನೀತಿಯೇ ಸರಿ ಲೇಸು ಮಾಡಿದ್ದೈ ಜೀಯ್ಯ ನಾ ।
ವ್ಯಾತಕೀ ನೂರ್ವಿಂಗೆ (ನೂರ್ವರ್ಗೆ) ವನಕೆ ನೇಮವ ಕೊಟ್ಟು ।
ಭೂತಳದ ಸಿರಿಯನನು ಭೋಗಿಸ್ವೆವರ ಕೂಡಿಕೊಂಡು
ಸುಖದೋಳೆಂದನು ॥ ೫ ॥

ನಾನಾ ಪ್ರಯತ್ನದಿಂ ದ್ಯೈವರನ ಗೆಲ್ದವರ ।
ಮಾನಿನಿಯ ಲಜ್ಜೆಯಂ ಕೊಂಡೆಸ್ಸೆ ಮುಂದಿನ್ನು ।
ಕಾನನಕೆ ಕಳುಹುವಾಲೋಚನೆಯನೆಸಗಿರರ್ (ನೆಸಗೆನಲ್ಕೆ) ನೀವೆ
ಕಾರುಣ್ಯದಿಂದ ॥

ಮಾನದಿಂ ಪಗೆಗಳನ ಬೀಳ್ಕೊಟ್ಟು ಕುರುಕುಲವ ।
ಹಾನಿಯಂ ಮಾಡಲುದ್ಯೋಗಿಸಿದೆ ನರನಾಥ ।
ತಾನೆ ವಸಕ್ಕೈದಿ ಪ್ರಾಣವ ಬಿಡುವೆನೀಕ್ಷಣದೊಳಾಜ್ಞೆಯಂ
ಸೀಡೆಂದನು ॥ ೬ ॥

೧ ಇರುಬಿನೊಳ್ ಸಿಲ್ಕಿರ್ದ ಪೆರ್ಬುಲಿಗಳಂತೆಗೆದು ।
ಹೊರಗಿಕ್ಕಿ ತಮ್ಮ ನೂರ್ವರ್ಗೆ ಮರಣವ ತಂದೆ ।
ಇರಿಸಿಕೊಂಡೆಕ್ಕಲನ (ಕ್ಕೆಲಿಯ) ತೆರದಿಂದ ಪೈರಿಗಳ ದ್ವೇಷ-
ವೆನ್ನೋಳೀಹದು ॥

ನರ ಭೀಮರಬ್ಬರಕೆ ತಾನಾರ ಲಾಪಿಸೇ ।
ನರಸ ಕೈಸಾರ್ದ ಕಾರ್ಯವ ಕಳದೆ ನಾಕಿನ್ನು ।
ಮರುಗಲೇನಹುದೆನುತ ಕೌರುವಂ ಬಿಸುಸುಯ್ವುತೆದ್ದನತಿ
ದುಗುಡದಿಂದ ॥ ೭ ॥

ಅಂಧನೃಪನ ಹೃದಯ ನೀರಾದದ್ದು.

ಕಲಕಿತಂಧನ ಹೃದಯ ಮಗನ ಮೇಲಿನ ಮೋಹ ।
ದಲಿ ನುಡಿದ ನೆಲೆ ಕಂದ ಬಾ ಕೌರುವೇಂದ್ರ ನಿ ।

೧ ಇರುಬು = ತಗ್ಗು, ಇಕ್ಕಟ್ಟು.

ನ್ನುಳಿದು ತಾ ಬದುಕುವಿನೆ ಬಾರೆನುತ ಶರಗ ಪಿಡಿದೆಳದು
ಕುಳ್ಳಿರಿಸಿಕೊಂಡು ||
ತಿಳಹು ನಿನ್ನಂತಸ್ಥ ವೇನುಂಟು ಕೈಕೊಂಬೆ ।
ಬಲವಂತರಾ ಪಾಂಡುವರನಾವ ಬಗೆಯಿಂದ ।
ಗೆಲಲುಪಾಯವ ಚಿಂತಿಸಿರ್ಪೆ ( ಚಿಂತಿಸುವರೈ ) ನಿನ್ನಯ ವಾಕ್ಯ
ಮಿರುವಿನೆ ಹೇಳೆಂದನು || ೮ ||

ಕೌರವನ ಬಿನ್ನಹ

ಅರಸೆನೆನ್ನಂ ಸಲಹ ಬೇಕಾದಡಿನ್ನೊಮ್ಮೆ ।
ಕರಸಿಕೊಡು ಪಾಂಡುವರ ಜೂಜಿನಿಂ ಗೆಲ್ದವರ ।
ಸಿರಿಯ ನಪಹರಿಸುವೇಂ ಸಮಯ ನಿರ್ಬಂಧಮಂ ಮಾಡಿ
ಹದಿಮೂರಬ್ದವಾ ||
ತರುಣಿ ದ್ರೌಪದಿ ಸಹಿತ ವನದೊಳಗ ಚರಿಸುವಂ ।
ತರ ಘಳಿಗೆ ಯೋಳ್ಮಾಳ್ಪೆ ಚರರ ಕಳುಹೆಂದು ಪದ ।
ಕೆರಗೆ ಕುರುಪತಿ(ಯು) ಬೇಡಿಕೊಂಡಡಾ ಧೃತರಾಷ್ಟ್ರೊ
(ಪ್ರೊ)ಡಂಬಟ್ಟನಾಕ್ಷಣದೊಳು || ೯ ||

ಪುನಃ ಧರ್ಮಜನನ್ನು ಕರೆಸುವಿಕೆ

ಘಾತಕ ಗತಾಕ್ಷನಾ ಪ್ರೀತಿ ಕಾಮಿತನೆಂಬ ।
ದೂತಗೆ ನಿರೂಪಿಸಿದ ನೀ ಹೋಗಿ ಧರ್ಮ ಸಂ ।
ಭೂತನಂ ಕರುದು ತಾ ಸಂಪ್ರೀತಿ ವಚನದಿಂ ತೀವ್ರದಿಂ ನಡೆ ಎಂದೆನೆ ||
ಆತ ತಕ್ಷಣ (ನಾಕ್ಷಣ) ತೆರಳಿದಂ ಹಸ್ತಿನಾವತಿಯ ।
ಭೂತಳವ ಕಳೆದೊಂದು ಪಯಣ ಬರಲಘ್ವದೊಳ ।
ಜಾತ ಶತ್ರುವ ಕಂಡವಂ ನಮಿಸಿ ಬಿನ್ನೈಸಿದಂ
ಬಂದಹದನವೆಲ್ಲಾ || ೧೦ ||

ಧರ್ಮಜನು ಪುನಃ ಹಸ್ತಿನಾವತಿಗೆ ಬರುವಿಕೆ

ಕೇಳುತ ಯುಧಿಷ್ಠರಂ ಚಿತ್ತದೊಳ್ ಪರಿತೋಷ ।
ತಾಳಿ ನುಡಿದಂ ಜನಕ ನಾಜ್ಞೆಯಂ ಮಿರುವಿನೆ ।
ಪಾಳ್ಯೆಯವ ತಿರಗ ಹೇಳಲಿದೂತ ನಿನ್ನೊಡನೆ ತಾ ನೀಗ ಬಾಹೆನೆಂದು ||

ಕಾಲಪಾಶಾಬದ್ಧ ನಾಗುತಾಪ್ತರ ನುಡಿಯ |
ಲಾಲಿಸದೆ ಹಸ್ತಿನಾ ನಗರಿಗಭಿ ಮುಖನಾಗಿ |
ಬಾಲೆ ಸಹಿತನುಜರೊಡಗೂಡಿ ನಡೆ ತಂದಾಗ ಧೃತರಾಷ್ಟ್ರನಂ
ಕಂಡನು || ೧೧ ||

ಧೃತರಾಷ್ಟ್ರನು ಧರ್ಮನನ್ನು ಸತ್ಕರಿಸಿ ಪುನಃ ದ್ಯೂತನಾಡಿಸುವಿಕೆ

ಬಂದ ಪಾಂಡುವರನುಪಚರಿಸುತತಿ ಪ್ರೀತಿಯಿಂ ||
ದಂಧಕಂ ನುಡಿದನೆಲೆ ಮಕ್ಕಳಿರ್ಯ್ನೀವ್ಯೆವ |
ರಿಂದು ಸುಖದ್ಯೂತದಿಂ ರಮಿಸುತಲಿ ಕೆಲವು ದಿನವಿಲ್ಲಿರ್ಪುದೆಂದು
ನಯದಿ ||

ಮಂದಿರಕೆ ಬೀಳ್ಕೊಟ್ಟು ಬಳಿಕ ಮರುದಿನ ಧರ್ಮ |
ನಂದನರ ಕರಸು ತನುಜೂಜುನಾಡಲ್ ಸಭೆಗೆ |
ಮಂದಮತಿ ಕೌರುವರ್ ನೆರದರುತ್ಸಹದಿಂದ ರಿಪುಗಳಂ
ಗೆಲ್ವೆನುತಾ || ೧೨ ||

ಪುನಃ ದ್ಯೂತಕ್ಕೆ ಭೀಮ ನರರು ಮೌನ ತಾಳ್ವರ್

ಕಪಟಿ ಖಳರಿವರೆಂದು ತಿಳಿತಿಳಿದು ಮರುಳಾಗಿ |
ನೃಪ ಮತ್ತೆ ಜೂಜುನಾಡಲ್ಕೆ ಮನ ಮಾಡಿದಂ |
ವಿಪರೀತ ಬುದ್ಧಿಯು ವಿನಾಶಕಾಲಕ್ಕೆಂಬ ಗಾದೆ ಸಂಪ್ರಾಪ್ತಿಯಾಗೆ ||
ಕೃಪವಿದುರ ದ್ರೋಣ ಭೀಷ್ಮಾದಿಗಳು ಇದಿರಾಗಿ (ಬೆರಗಾಗಿ) |
೧ ತಪಸಿದರ್ ದ್ಯೂತ ವ್ಯಸನ ಸುಡಲೆನುತ ನರ |
ದ್ರುಪದ ಸುತೆ ಭೀಮರಾ ಧರ್ಮಜಗೆ ನುಡಿಯಲಮ್ಮದೆ
ಸುಮ್ಮನಿರುತಿರ್ದರು || ೧೩ ||

ಧರ್ಮನು ಶಕುನಿಗೆ ಪಣವೇನೆಂದು ಕೇಳ್ದುದಕೆ ಉತ್ತರ

ಆಡಲಿನ್ನೇನು ಮುನಿಗಳಿರ್ಯ್ಶಮನಜ ಲೆತ್ತ |
ವಾಡುತಾ ಸೌಬಲಂ ಗೆಂದ ನಿನ್ನಾಟಕ್ಕೆ |
ಹೂಡಲೇನ್ನೈ ಪಣವ ಹೇಳು ಹೇಳೆನೆನಗುತ ಶಕುನಿ ನುಡಿದಿತ್ತಂಡದ ||
ನಾಡನೊಡ್ಡುವದಾವ ಭೂಪ ಸೋಲುವನವನೆ |

---

೧ ತಪಸಿದರ್ = ನೊಂದರು, ಬೆಂದರು.

ಮಾಡುವದು ವನವಾಸ ದ್ವಾದಶಾಬ್ದದ ಮೇಲೆ ।
ಗೂಢವಾದಜ್ಞಾತವಾಸ ವಂದೇ ವರುಷ (ವಂದೊರುಷ) ಮಾಡಿ
ಪುರವಂ ಪೊಗುವದು ॥ ೧೪ ॥

ಮರೆಯಲಿಹುದಜ್ಞಾತವಾಸವಂದಬ್ದದೊಳ ।
ಗರಿತರಾದಡೆ ಮತ್ತೆ ಚರಿಸುವದು ವನದೊಳಗೆ ।
ವರುಷ ಹನ್ನೆರಡಕೀ ಪರಿ ಸತ್ಯ ಭಾಷೆಯೋಳ್ ನುಡಿದು ತಪ್ಪಿದ
ಜನಪರಾ (ನಾ) ॥

ಪೊರೆಯನೀಶ್ವರನಿಂತು ಪಣವಿಟ್ಟರಾಡುವದು ।
ಧರಣೀಶ ರಾಯ (ರಾಜ) ಧರ್ಮವನುಸರುವೆ ನಿಲ್ಲು ।
ಪರಮ ದ್ಯೂತಾವ್ರತವ ಸವಿವವನೆ ಧನ್ಯ ಲೋಕದೊಳೆಂದ ಶಕುನಿ
ನಗುತಾ ॥ ೧೫ ॥

**ಇತರ ಸರ್ವೇಜನರು ವನವಾಸದ್ಯೂತಕ್ಕೆ ಮುರಿದಾಡಿದರು.**

(೧)ಉಗ್ರಭಾಷೆಯ ನ್ಯಾಕೆ ಮಾಳ್ಪರ ಕಟಕಟ ನಿ ।
(೨)ವಗ್ರ ಚರಿತರ್ ವಿಷಮ ದ್ಯೂತವಿದು ತಪ್ಪಿದರೆ ।
(೩)ವಿಗ್ರಹದ ಮುಖದಿಂದ ಬೆಂದುಪೋಗದೆ ಭರತಸಂತಾನ ಗರ್ವದಿಂದ॥
ವೆ (ವ್ಯ) ಗ್ರದಿಂ ನುಡಿವದೊಳಿತಲ್ಲ ಈ ಜೂಜುಗಳ ।
ನಿಗ್ರಹಕ್ಕೊಳಗಾಗಿ ಬನ್ನಬಟ್ಟವನಿ ಪಾ ।
ಲಾಗ್ರಣಿಗಳುಂಟೊ ಪಣಲೇಸಲ್ಲವೆಂದು ಮುರಿದಾಡಿದರು ।
ಸರ್ವ ಜನರು ॥ ೧೬ ॥

**ಧರ್ಮನು ಪುನಃ ಸೋಲ್ದದು.**

ಧರೆಯ ಭಾರವ ನಿಳುಹಲೀಪರಿಯ ವಿಪರೀತ ।
ಮರಳು ಬುದ್ಧಿಯಂ (ಮರುಳು ಬುದ್ಧಿಯ) ಕಾಲಜಂಗೆಪ್ರೇರಿಸಿದ ಶ್ರೀ ।
ಹರಿಯ ಸಂಕಲ್ಪಮಂ ಮೀರಲಾರಳವು ಋಷಿಗಳಿರೆ ಕೇಳಾಶ್ಚರ್ಯವಾ ॥
ದುರಳ ಸೌಬಲ ನುಡಿದ ಶಪಥಮಂ ಭೂಪ ಪತಿ ।
ಕರಿಸಿ ಬಳಿಕಾಡಲ್ಕೆ ಸೋಲ್ದನರಘಳಿಗೆ ಯೋಳ್ ।

---

೧ ಉಗ್ರಭಾಷೆ-ಶಿಟ್ಟಿನ ಕೆಟ್ಟಭಾಷೆ ೨ ಅಗ್ರಚರಿತರ್-ಮುಖ್ಯರಾದ ಸುಚರಿತ್ರ ಸದಾಚಾರರತನು ೩ ವಿಗ್ರಹದ ಮುಖದಿಂದ—ಅಗ್ನಿಜ್ವಾಲೆಯಿಂದ ದುಗುಡ-ಚಿಂತೆಯಿಂದಿಳಿದ ಬಾಡಿದ.

ಕುರುರಾಯ ಗೆಲಿದು ಬೊಬ್ಬಿರಿದು ಕುಣಿದಾಡಿದಂ ಶಕುನಿ ಕೈಗಳ
ಹೊಯ್ದುತಾ ॥ ೧೭ ॥

ಧರ್ಮತಾ ಸೋಲ್ದುದಕೆ ಉಲ್ಲಾಸಹೀನನಾಗುವಿಕೆ

ಎಲ್ಲರುಂ ಬೆರಗಾಗಿ ಮರುಗಿದಾ ಧರ್ಮಜಂ ।
ಗಲ್ಲದಲಿ ಕೈಯಿಟ್ಟು ಮೌನದಿಂ ಕುಳಿತನಾ ।
ಬಲ್ಲಿದರ್ಜುನ ಭೀಮ ನಕುಲ ಸಹದೇವರಾಗೋರ್ವರೋರ್ವರ
ನೋಡುತಾ ॥

ಉಲ್ಲಾಸ ಹೀನರಾಗಿರ್ದರಾ ದ್ರೌಪದಿಯ ।
ಚಲ್ಲೆ ಗಂಗಳೊಳಶ್ರು ತುಳುಕುತಿರೆ ಕೌರುವರ್ ।
(೪)ಭುಲ್ಲವಿಸಿದರ್ ಸಕಲ ಸಾಂಬ್ರಾಜ್ಯಮಂ ಗೆಲ್ದೆವೆಂಬ
ಸಂತೋಷದಿಂದ ॥ ೧೮ ॥

ಧರ್ಮನೃಪತಿ ವನವಾಸಕ್ಕೆ ಪೊರಟನೆನೆ

ಬಳಿಕ ಧರ್ಮಜ ಸತ್ಯಸಂಧನಾ ಸಭೆಯಿಂದ ।
ತಳರ್ದನನುಜರ ಕೂಡೆ ಸತಿ ಸಹಿತ ವಿದರನ್ನ ।
ಬಳಿಯಲಿರ ಹೇಳಿಕುಂತೆಯ ತನ್ನ ಪರಿವಾರ ಸುತರ ದ್ವಾರಕಿಗೆ ಕಳುಹಿ॥
ಖಳರಿಗೈಶ್ವರ್ಯ ಧಾರುಣಿಯನೊಪ್ಪಿಸಿ ದುಗುಡ ।
ತ(ದಿ)ಳಿತ ಮುಖದಿಂದ ಧೃತರಾಷ್ಟ್ರನಂ ಬೀಳ್ಕೊಂಡು ।
ಪೊಳಲ ಪೊರಮಟ್ಟರಾ ದ್ರೋಣ ಭೀಷ್ಮಾದಿ ಪುರಜನರ–
ಸಂದೋಹದಿಂದ ॥ ೧೯ ॥

ಹರನ ನೂರ್ಮಡಿ ಬಾಹುಬಲದಿಂದಲಧಿಕರಾ ।
ಮುರಹರನ ಪರಮ ಪ್ರೀತಿಯಾಸ್ಪದದ ಶರಣರಾ ।
ಸರಸಿರುಹ ಭವನ ಸಮ ಧೊರೆಗಳಾ ಶಕ್ರಾದಿ ದಿಕ್ಪಾಲರಿಂದ ಮಿಗಿಲು ॥
ತರಣಿ ಶಶಿಗಳ ಕಾಂತಿಯುಂತೆ ಪೊಳವವರಿಗೀ ।
ಪರಿಭವ ವಿಪತ್ತು ಸಂಘಟಿಸಿತಿನ್ನೀ ನರರ ।
ನೊರಜು ಕೌರುವರ ಪಾಡೇನು ವಿಧಿ ನಿಷ್ಕರುಣಿಯೆಂದಖಿಳ ಜನ
ನುಡಿದದು ॥ ೨೦ ॥

---

೪ ಭುಲ್ಲವಿಸು= ಉಬ್ಬುಸ, ಸಂತೋಷಪಡು ತಳಿತ=ಚಿಗಿತಂತ

### ಧರ್ಮರಾಜನ ಕಾಮ್ಯಕವನ ಪ್ರವೇಶ

ಕುಳುಹುತ್ತೈತಂದ ವಿದುರಾದಿಗಳಿಗೆರಗಿ ಸಂ ।
ಚಲಿತ ನಯನೋದಕದೊಳರ್ಘ್ಯ ಪೂಜೆಯ ಮಾಡಿ ।
ಬಳಿವಿಡಿದು ಬಂದ ಪುರಜನರನೊತ್ತಾಯದಿಂ ತಿಳುಹಿ ಧೃತರಾಷ್ಟ್ರ
ನೃಪನ ॥
ಸಲಹಿಕೊಂಡಿಹುದೆಂದು ಸಂತೈಸಿ ಬೀಳ್ಕೊಟ್ಟು ।
ಕಳುಹಿ ಗಾಂಗೆಯನಾಗಲೈಯ್ವರಂ ಧೌಮ್ಯನಂ ।
ಜಲಜಾಯತಾಕ್ಷಿಯುಂ ಕೂಡಿಕೊಂಡಱವಧಿಯಿಂ ಕಾಮ್ಯವನಕೈ-
ತಂದರು ॥ ೨೧ ॥

### ಕಾಮ್ಯವನ ವರ್ಣನೆ ೫ ಪದ್ಯ

ಪರಿಪರಿಯ ಲತೆಗುಲ್ಮ ಕುಜಗಳಿಂ ಗಜಗಳಿಂ ।
ದುರುತರದ ವೃಕ ವ್ಯಾಘ್ರ ಹರಿಗಳಿಂ ನರಿಗಳಿಂ ।
ಭರಿತವಾದದ್ರಿ ಕಂದರಗಳಿಂ ಸರಗಳಿಂ ರಮ್ಯಕಾನಾರದಿಂದ ॥
ಉರಗ ಸೂಕರ ಕ್ರೂರ ಮೃಗಗಳಿಂ ಖಗಗಳಿಂ ।
ದಿರುವ ಉದ್ಯಾನ ಸುಸ್ಥಳಗಳಿಂ ದಳಗಳಿಂ ।
ದರಳ್ದ ರಾಜೀವ ಸಂಕುಲಗಳಿಂ ಫಲಗಳಿಂ ಕಾಮ್ಯವನಕೆಣ್ಗೆಸ-
ದದು ॥ ೨೨ ॥
ಕರಿಕಪೋಲದಿ ನೋರ್ವ ಮದದ ಸುರಭಿಯನುಂಡು ।
ಪರಿಪರಿಯ ಪುಷ್ಪಗಳ ಖಂಡನಾಸ್ವಾದಿಸುತ ।
ಲರಳಿದಾ ಹೊಂದಾವರಿಯ ಮಕರಂದಮುಂ ಸವಿದು ಬದುಕುವರ್ಗೀ
ಸಮಯದಿ ॥
ನಿರಸ ೧ ಬೊಬ್ಬುಲಿ ಕುಸುಮ ೨ ಅರ್ಕ ೩ ಧತ್ತೂರಿ ಪುಷ್ಪಿ ।
ಗೆರಗಿ ಕಾಲಂ ಕಳೆವ ತೆರನಾಯ್ತು ಫಣಿಯಲ್ಲಿ ।
ಸರಸಿಜೋದ್ಭವ ಬರದದನುಭವಿಸಬೇಕೆಂದು ಭೃಂಗಗಳ್
ಮೊರೆವುತಿಹವು ॥ ೨೩ ॥

---

೧ ಬೊಬ್ಬುಲಿ = ಜಾಲಿ, ೨ ಅರ್ಕ = ಯಕ್ಕೆ, ೩ ಧತ್ತೂರ = ಮದ್ದುಗಣಿಕೆ

ದ್ರೌಪದಿ ಚಲ್ವಿಕೆಗೆ ವನದ ಸಾಮ್ಯತ್ವ ವರ್ಣನೆ ಸಾದೃಶ್ಯ

ಪರಿಪಕ್ವ ಫಲಮುಖದ ಚೂತ ಪಲ್ಲವದ ಪದ ।
ಕರತಳದ ಕೇತಕಿಯ (ನಖ) ದುತ್ಪಲಾಂಬಕದ ।
ಪರಮೆ ಕುಲ ಕುಂತಳದ ಕಂಜ ಕುಟ್ಮಲ ಕುಚದ ಕದಳಿ ಪತ್ರದವಾಸದ॥
ವರಲತಾಂಗದ ಕುಂದರದನ ದರಗಿಳಿ ಸ್ವರದ ।
ಬಿರಿದ ಮಲ್ಲಿಗೆ ಮಂದಹಾಸದಿಂ ಮೆರೆವ ವನ ।
ಸಿರ ಸವತಿಯಾದಳೀ ಪಾಂಚಾಲೆಗೆಂದನಾ ಧೌಮ್ಯಮುನಿ
ನಸುನಗುತಲಿ ॥ ೨೪ ।

---

ವನದಸಿರಿಸಂಪತ್ತೆಂಬ ಸ್ತ್ರೀ ದ್ರೌಪದಿಯ ಹೋಲಿಕೆಗೆ ಸರಿಸವತಿಯಾದಳಂತೆ

| | | |
|---|---|---|
| ವನದಲ್ಲಿ ಫಲಾದಿಗಳು | — | ದ್ರೌಪದಿಯ ಅಂಗಗಳು |
| ಪರಿಪಕ್ವ ಫಲಗಳೇ | — | ಮುಖದಂತೆ |
| ಚೂತ ಪಲ್ಲವಗಳೇ | — | ಕೆಂಪಾದ ಮೃದುಪದಕರತಳದಂತೆ |
| ಕೇತಕಿಗಳೇ | — | ನಖವೋ |
| ಉತ್ಪಲವೇ | — | ಅಂಬಕ ಕಣ್ಣಿನಂತೆ |
| ಪರಮೆ ಕುಲ ಭ್ರಮರಗಳೆ | — | ಕುಂತಳ ಮುಂಗೂದಲಗಳು |
| ಕುಂಜ ಕಟ್ಮಲಗಳೆ | — | ಲತೆಯಲ್ಲಿಪ್ಪ ಮೊಗ್ಗಿಗಳೇ ಕುಚಗಳೆಂಬ ತೆರ. |
| ಕದಳಿಪತ್ರ ಬಾಳೆಯಲಿಗಳೆ | — | ವರ ಲತಾಂಗದ ಸುಂದರವಾದ ಕೋಮಲ ದೇಹಕ್ಕೆ ವಾಸ ಪೀತಾಂಬರ |
| ಕುಂದ=ಮಲ್ಲಿಗೆ ಮುಗ್ಗಿಗಳೆ | — | ಹಲ್ಲುಗಳಂತೆ |
| ಅರಗಿಳಿಗಳ ಸುಸ್ವರವೇ | — | ದ್ರೌಪದಿಯ ಸುಸ್ವರವೋ |
| ಬಿರಿದ ಮಲ್ಲಿಗೆ=ಅರಳಿದ ಮಲ್ಲಿಗೆ ಹುವುಗಳೇ | - - | ದ್ರೌಪದಿಯ ಮಂದಹಾಸದಂತೆ |

ವನಸಿರಿ ದ್ರೌಪದಿ ದೇವಿಗೆ ಸವತೆಯಾದಳೆಂದು ಧೌಮ್ಯಮುನಿಗಳು ನಸುನಗುತ ಊಹಿಸಿದರೆಂತೆನೆ ಅಲಂಕಾರ ವರ್ಣನೆ

---

ಭೀಮನು ಕಿರ್ಮೀರನ ಸಂಹರಿಸಿದ

ಅಲ್ಲಿ ಕೀರ್ಮೀರನೆಂಬಾ ಬಕನ ತಮ್ಮನಂ ।
ಬಲ್ಲಿದ ನಿಲಜ ತರಿದು ದ್ವಿಜರ ರಕ್ಷಿಸಿ ವನವ ।
ನೆಲ್ಲ ನಿರ್ಭಯವಮಾಡಿ ಸೂರ್ಯಂ ತರ್ಗತನಾದ ನಾರಾಯಣನಪ್ರಾರ್ಥಿಸಿ ॥
ಸಲ್ಲುವಕ್ಷಯ ಪಾತ್ರೆಯಂ ಪಡೆದು ಪ್ರತಿ ದಿನದಿ ।
ವಲ್ಲಭೆಯ ಕರದಿಂದ ಷಡ್ರಸಾನ್ನವ ಹರುಷ ।
ದಲ್ಲಿ ಭುಂಜಿಶುತಿರ್ದ ರೈವರುಂ ಲಕ್ಷ ಸನ್ಯಾಸಿ ಋಷಿಗಳ
ಪಂಕ್ತಿಯಲ್ಲಿ ॥ ೨೫ ॥

ಶ್ರೀ ಕೃಷ್ಣನು ಪಾಂಡವರಿಗೆ ಸಂದರ್ಶನವಿತ್ತ.

ಇಂತು ಸುಖದಿಂದ ಪಾಂಡವರು ವನದೊಳಿರಲಿತ್ತ ।
ಕಂತುಪಿತ ದ್ವಾರಕೆಯೊಳಿವರ ವಾರ್ತೆಯಂ ಕೇಳು ।
ತಂತರಿಸದ್ಯೆತಂದ ಗರುಡ ವಾಹನ ನಾಗುತಾ ಸತ್ಯಭಾಮೆಯೊಡನೆ ॥
ಕುಂತಿತನು ಭವರಚ್ಚುತನ ಕಾಣುತಲಿ ಮುಹ ।
ಸಂತೋಷಮಂ ತಾಳ್ದು ಪದಕೆರಗಿ ನುತಿಸುತಿರ ।
ಲಂತರಾತ್ಮಕನವರ ತೆಗೆದು ಬಿಗಿದಪ್ಪಿದಂ ( ತಕ್ಕೈರ್ಸಿದಂ )
ಕೃಪೆಯಿಂದ ಮೈದಡವು ತಾ ॥ ೨೬ ॥

ದ್ರೌಪದಿಯು ಬಿನ್ನಹ

ದ್ರೌಪದಿಯು ಬಂದಾಗ ಹರಿಯಂಘ್ರಿಯಲಿ ಪೊರಳು ।
ತಾಪಾರ ಶೋಕದಿಂ ನುಡಿದಳೆಲೆ ಶ್ರೀಕಾಂತ ।
ನೀ ಪೊರದೆಲಾ ತನ್ನ ಮಾನವಂ ಕೌರುವರ ಸಭೆಯಲ್ಲಿ ಶರೆಯಬಿಡಿಸಿ ॥
ಆಪತ್ತುಕಾಲ ಬಾಂಧವನೀ ನೆಲಾ ಜಗ ।
ದ್ವ್ಯಾಪಕಂ ನೀನೆ ಸರ್ವಾತ್ಮ ಸರ್ವಜ್ಞತೆಯ ।
ವ್ಯಾಪಾರ ಮಂ ತನಗೆ ತೋರಿಸಿದೆಲಾ ಕೃಷ್ಣ ಕರುಣಾಬ್ಧಿ
ನೀನೆಂದಳು ॥ ೨೭ ॥

ಪತಿಗಳಿರ್ದೇನು ಮಾಡಿದರೆನ್ನ ಬಹುಮಾನ ।
ಚ್ಯುತಿಯ ಪರಿಹರಿಸಿದ್ದೈ ನೆನದ ಮಾತ್ರದಿ ನಿನ್ನ ।
ನುತಿಸಲಜ ಮೃಡ ಫಣಿಪರಳವಲ್ಲ ತವದಿವ್ಯ ವಿಗ್ರಹಂ ತಪವ ಮಾಳ್ಪಾ॥

ಯತಿಗಳಿಗಗೋಚರಂ ತಮಗೆ ಮೈದೋರಿದ್ದೈ ।
ಕ್ಷಿತಿಯೊಳಗ ಧನ್ಯರಾದೆವೆಲೆ ದೇವ ಪಾಪಿಗಳ ।
ಕೃತಕದಿಂದೆಮಗೆ ವನವಾಸ ಸಂಘಟಿಸಿತಿನ್ನುದ್ಧರಿಸಬೇಕೆಂದಳು ॥ ೨೮ ॥

ಶ್ರೀಕೃಷ್ಣನ ಉತ್ತರ ಪಾಂಡುವರ ಸಂತೈಸುವಿಕೆ

ಏಳಂಬುಜಾಕ್ಷಿ ದುಃಖಿತವ ಬಿಡು ಕೌರುವರ ।
ಶೀಳುವೆಂ ಚಕ್ರದಿಂ ಕ್ಷಣದೊಳಗೆ ಧರ್ಮಜಂ ।
ಗಾಳಿಸುವೆ ರಾಜ್ಯಮಂ ನಿಕ್ಷಯುವ ನೋಡೆಂದು ಕರಕಂಜದಿಂದೆತ್ತುತಾ ॥
ಬಾಲಕಿಯ ಸಂತೈಸಿದಂ ನರಗ ಪಿಡಿದೆಳದ ।
ಖೂಳ ದುಶ್ಯಾಸನನ ೧ಪೊಡೆಬಗದು ಕರುಳುಗಳ ।
ಮಾಲೆಯಂ ನಿನ್ನ ಸಿರಿಮುಡಿಗ ಮುಡಿಸುವೆನೆಂದು ನುಡಿದನಾ ।
ದಾನವಾರಿ ॥ ೨೯ ॥

ಭೂನಾಥ ಕೇಳ್ ಬಳಿಯ ತಾನಿರ್ದಡೀ ಪರಿಯ ।
ಹಾನಿ ವನವಿಭ್ರಮಣೆ ನಿಮಗಾಗವಾ ಸಾಲ್ವ ।
ದಾನವನ ಕೊಲ್ಲಬೇಕೆಂದು ಪೋಗಿರ್ದೆನಲ್ಲಿಂದ ದ್ವಾರಕಿಗೆ ಬರಲು ॥
ಕಾನನಕೆ ಒಂದರೆಂಬುದು ಕೇಳುತ್ತೆ ತಂದೆ ।
ಹೀನರನ್ಯಾಯ ಮಾಡಿದರೆಂದು ಮೈದುನರ ।
ಮಾನವರ ತೆರದಿಂದ ಕೃಷ್ಣನುಪಚರಿಸುತಿರೆ ಒಳಿಕ
ನೃಪನಿಂತಂದನು ॥ ೩೦ ॥

ಧರ್ಮಜನು ದುಃಖಾಬ್ಧಿಯಿಂ ಪಾರುಮಾಡೆ ಪ್ರಾರ್ಥಿಸಿದನೆನೆ ಅನಂತನಂ ಪೂಜಿಸ ಆಜ್ಞೆ

ದೇವ ಚಿತ್ತೈಸು ತಾನಪರಿಮಿತ ದುಃಖಿಯಂ ।
ಬಾವಾರ್ಧಿ (ಬ್ಧಿ) ಯೊಳನುಜರಿಂ ಸಹಿತ ಮುಳಿಗಿರ್ಪ ।
ನೀಪಿಪತ್ತಿನ ದೆಶೆಯುಲಿಂದೆತ್ತೊ ಕಡೆ ಬೀಳ್ವ ಪೇಳೆಂದು ಬಿನ್ನೈಸಲು ॥
ಶ್ರೀವರಂ ನುಡಿದನೆಲೆ ನೃಪತಿ ಕೇಳ್ ನಿನಗೊಂದು ।
ಪಾವನೋಪೇತನಂತನ ವ್ರತವ ಸೂಚಿಪಂ ।
ಭಾವಶುದ್ಧಿಯೊಳು ಪೂಜೆಯ ಮಾಡಲದರಿಂದ ಶೋಕಾಬ್ಧಿಯಂ
ದಾಟುವಿ ॥ ೩೧ ॥

---

೧ ಪೊಡೆಬಗದು = ಪೊಡೆ = ಹೊಟ್ಟೆಯನ್ನು ಶೀಳಿ

# ಶ್ರೀ ಅನಂತನ ಕಥಾ ಪ್ರಾರಂಭ

ವರಭಾದ್ರಪದ ಶುಕ್ಲ ಪಕ್ಷದ ಚತುರ್ದಶಿಯೊ ।
ಳರಸ ಸ್ತ್ರೀಪುರುಷರ್ಗೆ ಬಯಸಿದಿಷ್ಟವ ನೀವ ।
ಪರಮ ಮಂಗಳ ಪುಣ್ಯಕರವಾದನಂತಾಖ್ಯ ವ್ರತವ ನೀವಿಧಿಯಿಂದಲಿ ॥
ಹರುಷದಿಂ ನೋತುಅಂಗಳ ಜೈಸಿ ದುಃಖಭಯು ।
ದುರಿತ ಪೀಡೆಗಳಿಂದ ಮುಕ್ತನಾಗುತ ಸರ್ವ ।
ಧರಣಿಗಧಿಪತಿಯಾಗಿ ಮೆರೆವೆಂದು ಹರಿನುಡಿಯೆ ಧರ್ಮಸುತ-
ನಿಂತೆಂದನು ॥ ೩೨ ॥

ಅನಂತನಾರು ?

ಕೇಶವನೆ ನೀ ಪೇಳ್ದನಂತನಂ ತಿಳಿಯಲ್ಕೆ ।
ಶೇಷನೋ ತಕ್ಷಕನೊ ನಾರಾಯಣನೊ ಪರಸಿ ।
ಜಾಸನನೊ ಪರಿಪದವೊ ಪೆಸರುಂಟೆ ನಂತನೆಂಬರಿಸಿಬರಿಗೆ ಲೋಕದಲ್ಲಿ॥
ಶ್ರೀಶ ಕೃಪೆಯಿಂದವರ ಮಧ್ಯದೊಳನಂತನೆಂ ।
ಬೀಶಬ್ದ ವಾಚ್ಯವುಳ್ಳವನಾರು ನಿಶ್ಚಯದ ।
ಭಾಷೆಯಂ ನ(ತ)ನಗರುಹುಬೇಕೆಂದು ಬೆಸಗೊಳುಲಾವಾಸು ದೇವಂ
ನುಡಿದನು ॥ ೩೩ ॥

ಅನಂತ ದೇವರ ಮಹಿಮೆ ೭ ಪದ್ಯದಿ

ಭೂಪಕೇಳ್ ತಾ (ನಾ) ನೇಪೆನಂತನಾಮಕನಂತ ।
ರೂಪವುಳ್ಳವನಾನಂತನೆಂಬ ವನಾನೆ ।
ವ್ಯಾಪಕಂ ತಾ ಸರ್ವ ಕಾಲದಿ ಮುಹೂರ್ತದಲಿ ಪಗಲಿರಳು ದಿನಗಳಲ್ಲಿ ॥
ಆ ಪಕ್ಷವೆರಡರಲಿ ಮಾಸದಲಿ ವರುಷದ ।
ಶ್ಲೀ ಪುಣ್ಯ ಯುಗಗಳಲಿ ಕಲ್ಪದಲಿ ಬಿಡಪೆ ತಾ ।
ನೇ ಪೂರ್ಣನಾಗಿರ್ದನಂತನೆಂಬಭಿಧಾನದಿಂಕರಸಿಕೊಂಬೆನೆಂದಾ ॥ ೩೪ ॥
ನಾರಾಯಣಂ ತಾನೆ ಉತ್ಪತ್ತಿ ಸ್ಥಿತಿಲಯದ ।
ಕಾರಣೀಕಂ ತಾನೆ ಬ್ರಹ್ಮರುದ್ರೇಂದ್ರು ವೃಂ ।
ದಾರಕ ಸಮಸ್ತ ಮುನಿಗಂಧರ್ವರಮಲ ಹೃತ್ಕಮಲದೊಳ್ ವಾಸತಾನೆ ॥
ಭೂರಮಣ ಕೇಳ್ ಮಚ್ಛಕೂರ್ಮಾದಿ ನಾನಾವ ।

ಕಾರ ರೂಪಂ ತಾನೆ ವಿಶ್ವರೂಪಕ ನಾನೆ ।
ಶ್ರೀ ರಮಾಪತಿಯಾದನಂತ ಶಬ್ದದಿ ವಾಚ್ಯ ನಾನೆಂದು
ತಿಳಿಯೆಂದನು ॥ ೩೫ ॥

ದ್ವಾದಶಾದಿತ್ಯಷ್ಟ ವಸುವಾಯು ಶೇಷರೇ ।
ಕಾದಶಗಿರೀಶರಲಿ ಸಪ್ತಋಷಿ ಸಪ್ತಾಬ್ಧಿ ।
ಮೇದಿನೀ ಧರಗಳಲಿ ಪದಿನಾಲ್ಕು ಮಂದಿಂದ್ರರೆರಡೇಳು ಮನುಗಳಲ್ಲಿ ॥
ಪಾದಪಂಗಳಲಿ ನದಿನದಿಗಳಲಿ ಪಾತಾಳ ।
ವಾದಿ ಭುವನತ್ರಯಗಳಲ್ಲಿ ತಾನೇ ವ್ಯಾಪ್ತ ।
ನಾದಿ ಮಧ್ಯಾಂತರಹಿತಂ ತ್ರಿಗುಣ ವರ್ಜಿತಾನಂದಾತ್ಮ
ನೆಂದರಿವುದು ॥ ೩೬ ॥

ಯೋಗೀಶರೆನ್ನನೇ ಧ್ಯಾನಿಸುವರಣಿಮಾದಿ[1] ।
ಯೋಗದಿಂ ಭಕ್ತಿಯೋಳ್ ನಿತ್ಯದಿ ಮಹಾಪ್ರಳಯ ।
ಭಾಗದೋಳ್ ವಟಪತ್ರ ಶಯನನಾಗಿರ್ದವಂತಾನೆ ಶ್ವೇತದ್ವೀಪದಾ ॥
ಸಾಗರದಿ ಮಲಗಿರ್ದವಂತಾನೆ ಧರಣಿಧರ ।
ನಾಗೇಂದ್ರ ಪರಿಯಂಕ ನಾನೆ ಧಿಟ ಭೂಪ ಚ ।
ನ್ನಾಗಿ ಸಂದೇಹವಂ ಬಿಟ್ಟನಂತಾನಂತರೂಪ ನಾನೆಂದರಿವುದು ॥ ೩೭ ॥

ರವಿಶಶಿಗಳೆನ್ನಯ ನಿರೂಪದಿಂದುದಿಸುವರ್ ।
ಪವನನೆನ್ನಾಜ್ಞೆಯಲಿ ಗಾಳಿ ಬೀಸುವನಬ್ಜ ।
ಭವನೆನ್ನ ನೇಮದಿಂ ಲೋಕಸೃಷ್ಟಿಯ ಮಾಳ್ಪನಿಂದ್ರ ತನ್ನಾಜ್ಞೆಯಿಂದ ॥
ಅವನಿಯೊಳ್ಮಳೆಗರಿವನಗ್ನಿ ಜ್ವಲಿಸುವ ಸಕಳ ।
ಭುವನವೆನ್ನಾಧೀನ ತಾನೋರ್ವನೊಶವಲ್ಲ ।
ಭವವೌಷಿಗಳಿಗೆನ್ನ ಮಾಯ ಮೀರಲ್ಕರಿದು ಜಗನಾಥ
ಕೇಳೆಂದನು ॥ ೩೮ ॥

ಜೀವರಸ್ವಾತಂತ್ರ ನಾನೇ ಸ್ವಾತಂತ್ರಖಿಳ ।
ಜೀವರ್ಗೆ ಕರ್ಮಾನುಸಾರ ಫಲಮುಂ ಕೊಡುವ ।

---

೧. ಅಣಿಮಾದಿಯೋಗ = ಅಣಿಮಾ, ಗರಿಮಾ, ಲಘಿಮಾ ಮುಂತಾದ ಅಷ್ಟಸಿದ್ಧಿ ಸಾಮರ್ಥ್ಯ. ಸಣ್ಣಾಗುವಿಕೆ, ದೊಡ್ಡದಾಗುವಿಕೆ, ಹಗುರಾಗುವಿಕೆ ಇತ್ಯಾದಿ.

ದೇವ ನಾನೇ ಚರಾಚರರಲ್ಲಿ ವ್ಯಾಪ್ತನಾಗಿರ್ದವಂ ತಾನೆ ಪುಣ್ಯ ॥
ಜೀವಿಗಳಿಗಾನಂದವುಂ ಕೊಟ್ಟು ಕರುಣದಿಂ ;
ಕಾವವಂ ತಾನೆ ಪಾಪಾತ್ಮರಿಗಘೋಗತಿಯ ।
ನೀವನಂ ತಾನೆಂದು ನಿಶ್ಚಯುವ ತಿಳಿನೃಪತಿ ಸಂಶಯುವ
ಬಿಡುಯೆಂದನು ॥೩೯॥

ಈ ಮಹಿಮೆಯುಳ್ಳವಂ ಯುಗ ಯುಗದೋಳ್ಯಾತಕಿ ।
ನ್ನೀ ಮಹಿಯೊಳವತರಿಪೆ ನೀನೆಂದು ನೃಪಕೇಳಿ ।
ಭೂಮಿ ಭಾರಕರಾದ ದಾನವರ ಸಂಹರಿಸಬೇಕಾಗಿ ವಸುದೇವನಾ ॥
ಧಾಮದೋಳ್ ನರರೂಪದಿಂದ ಉದ್ಭವಿಸಿರ್ಪೆ ।
ಸೋಮಕುಲ ಮೌಳಿ ಧರ್ಮಾತ್ಮಜನೆ ತನ್ಮನಂ ।
ನೀ ಮನೋವಾಚದೆ ಅನಂತ ನಾಮಕನೆಂದು ತಿಳಿಯೆಂದು
ಹರಿ ನುಡಿದನು ॥ ೪೦ ॥

ಧರ್ಮನು ಅನಂತ ವ್ರತಾಚರಣೆ ಪ್ರಶ್ನೆ

ಹರಿಯ ವಚನಂ ಕೇಳುತಾ ಯುಧಿಷ್ಠರ ತೋಷ ।
ಶರಧಿಯೋಳ್ಳಾಡಿ ಮತ್ತೆ ಬೆಸಗೊಂಡನೆಲೆ ।
ಪರಮೇಶ ಪರಮಾತ್ಮ ಕೃಷ್ಣತವ ಮಹಿಮೆಯಂ ತಿಳಿಯೆಲೆನ್ನೊ
ಶವೆ ದಯದಿ ॥

ಅರಹುವದನಂತನ ಮಹಾತ್ಮೆಯ ವ್ರತವಾವ ।
ತೆರದಿಂದ (೧) ನೋಸಬೇಕಾ ವಿಧಾನವ ಪುಣ್ಯ ।
ಪುರುಷಾರ್ಥವೇನು ಸಂಪ್ರಾಪ್ತಿ ಪೂಜಾಸಾಧನ ದ್ರವ್ಯಬಗೆಗಳಿನ್ನು ॥೪೧॥
ದಾವ ಪುರುಷ ಸ್ತ್ರೀಯರಿಂದರಿದೀ ವ್ರತವ ।
ಭೂವಲಯದೋಳ್ ಪೂರ್ವದಲ್ಲಿ ನೋತವರುಂಟೆ ।
ನಾವ ಮನುಜಂಗಾವ ನೀನೋಪಿ ವಿಧಿಗಳಂತೋರಿದವನುಂಟೆನಯದೀ॥
ಕೋವಿದ ಶಿಖಾಮಣಿಯೆ ವಿಸ್ತಾರವಾಗೆನಗ ।
ನೀ ವೊಲಿದು ಪೇಳ್ವದೆಂದಾ ಪಾಂಡುತನಯ ಸ ।

---

೧ ನೋನ=ವ್ರತವನ್ನು ಆಚರಿಸುವದು

ದ್ಭಾವದಿಂ ಬಿನ್ನೈಸಲಚ್ಯುತಂ ನಗುತ ನಂತನಕಥೆಯ

ಬಣ್ಣಿಸಿದನು ॥ ೪೨ ॥

ಶ್ರೀ ಕೃಷ್ಣನು ಅನಂತ ವ್ರತ ಮಹಿಮೆ ಪೇಳ್ದನೆನೆ.

ಕ್ಷಿತಿಪಕೇಳಾದಡಿನ್ನಾದಿ ಯುಗದೋಳ್ ಮಹಾ ।
ಮತಿವಂತ ಭೂಸುರ ಸುಮಂತನೆಂಬೋರ್ವ ಬಹು ।
ಶ್ರುತಿ ಶಾಸ್ತ್ರ ಸಂಪನ್ನನಾಗಿರ್ದವಂ ವಶಿಷ್ಟನ ಗೋತ್ರಭವನಾಗಿಹ ॥
ಯತಿ (ವ್ರತ) ವರ್ಯ ಭೃಗು ಋಷೀಶ್ವರನ ಮಗಳಾದ ಗುಣ ।
ವತಿ ಚಲ್ವೆಯಾದ ದೀಕ್ಷಾ ಎಂಬ ಪೆಸರುಳ್ಳ ।
ಸತಿಯ ವೇದೋಕ್ತ ವಿಧಿಯಿಂದ ವೈವಾಹವಂ ಮಾಡಿಕೊಂಡಂ

ಮುದದೊಳು ॥ ೪೩ ॥

ಸುಮಂತ ಋಷಿಯ ಚರಿಯೆ

ಕಾಲಕಾಲದ ಜಪಾನುಷ್ಠಾನ ಪೂಜೆಗಳಿ ।
ಗಾಲಸ್ಯವಿಲ್ಲದಾ ಪತಿಯ ಪರಿಚರಿಯ ಕನು ।
ಕೂಲೆ ಯಾಗಿರ್ದಳಾ ಪತಿವ್ರತಾದೀಕ್ಷೆಯಿಂ ದೀಕ್ಷೆ ಸುಖದಿಂದ ಬಳಿಕಾ॥
ಶ್ರೀಲೋಲನೊಲ್ಮೆಯಿಂದಾಬಾಲೆ ಕೆಲದಿನದ ।
ಮೇಲೆ ಗರ್ಭಂ ತಾಳ್ದು ಪಡೆದಳತಿ ರೂಪ ಗುಣ ।
ಶೀಲಯುಳ್ಳಣುಗೆಯಂ (ಅಸುಗೆಯಂ) ಶುಭಮುಹೂರ್ತದೊಳಂದು

ಬಂಧುಜನ ನಲಿದಾಡಲು ॥ ೪೪ ॥

ಸುಮಂತನಿಗೆ ಶೀಲೆ ಎಂಬ ಕನ್ಯೆ ಹಟ್ಟುವಿಕೆ. ಲಾಲನೆ.

ಸಂತೋಷದಿಂದ ತನುಜಾತೆಯಂ ನೋಡುತ ಸು ।
ಮಂತ ದ್ವಿಜ ಶುಭ ದಿನದೊಳವನಿ ವೃಂದಾರಕರ ।
ಸಂಧಿಣಿಯನೆರಹಲವರತಿಶಯದ ಗುಣಶೀಲೆ ಶೀಲೆಯೆಂಬಭಿಧಾನದಿಂ ॥
ಸಂತತಂ ಕರೆಯೆಂದು ನಾಮಕರಣಂಗೈಯೆ ।
ಸಂತಾನದಭ್ಯುದಯ ತನಗೊದಗಿತೆನುತಲಾ ।
ಕಂತುವಿನ ಮರಿಯಾನೆಯಂತೆ ನಲಿದಾಡುತಿಹ ಕುವರಿಯಂ

ಪೋಷಿಸಿದನು ॥ ೪೫ ॥

ಮಗಳನಂ ಕಣ್ತುಂಬ ನೋಡುವಂ ಬೇಡುವಂ ।

ನಗುತ ಚುಂಬನ ಪ್ರೀತಿ ಮಾಡುವಂ ತೀಡುವಂ ।
ಮೊಗಕೆ ಕುಂಕುಮ ತಿಲಕನಿಡಿಸುವಂ ತೊಡಿಸುವಂ ವಸ್ತ್ರ
ವರಭೂಷಣವನು ॥
ಬಗೆಬಗೆಯ ಪಣ್ಗಾಯಿ ಮೆಲಿಸುವಂ ಕಲಿಸುವಂ ।
ಸುಗುಣ ಬುದ್ಧಿಯ ಪುಷ್ಪ ಮುಡಿಸುವಂ ನುಡಿಸುವಂ ।
ಪಗಲಿರಳು ಮೋಹದಿಂ ಕರದಪಂ ಪೊರದಪಂ ವಿಪ್ರೇಂದ್ರ
ನನುದಿನದೊಳು ॥ ೪೬ ॥

ಸುಮಂತನ ಪತ್ನಿಯು ವಿಯೋಗವಾಗುವಿಕೆ

ಈ ತೆರದೊಳಾದ್ವಿಜಂ ಸತಿಸುತರ ಬಹಳ ಸಂ ।
ಪ್ರೀತಿಯಿಂ ಸಾಕುತಿರಲಾ ಶೀಲೆ ದಿನದಿನಕೆ ।
ಮಾತಾಪಿತರ ಪೋಷಣೆಗಳಿಂದ ವರ್ಧಿಸುತಲಿರೆ ಬಳಿಕ ಕಾಲವಶದಿ ॥
ನೀತಿ ಪತ್ನೀ ದೀಕ್ಷೆಯೆಂಬಾಕೆ ಜ್ವರದಿ ಮ ।
ಹಾ ತಪ್ತಳಾಗುತಘನಾಶವೆಂಬೋ ನದಿಯ ।
ಲಾ ತನುವನುಳಿದು ಸ್ವರ್ಗಾಲಯವ ನಾರಿದಳು (ಳ್)
ಭೂಪಾಲ ಕೇಳೆಂದನು ॥ ೪೭ ॥

ಸುಮಂತ ಎರಡನೆ ಲಗ್ನಮಾಡಿಕೊಳ್ಳುವಿಕೆ

ಭಾರ್ಯಾ ವಿಯೋಗವಾಗಲ್ಕಾ ಸುಮಂತ ಮುನಿ ।
ಧೈರ್ಯ ಮಂತಾಳ್ದು ಶೋಕವಂ ತೂರವುತುತ್ತರದ ।
ಕಾರ್ಯಮಂ ಮುಗಿಸುತಾಶೀಲೆಯಂ ಸಂತೈಸಿ ಕೆಲವುದಿನಪೋದಮೇಲೆ॥
ಆರ್ಯನಹ ಧರ್ಮ ಪೋಷಾ ಯೆಂಬ ದ್ವಿಜನ ಚಾ ।
ತುರ್ಯದೊಳೊಡಂಬಡಿಸುತವನ ನಂದನೆಯ ಮಾ ।
ಧುರ್ಯ ವಚನದೊಳಗ್ನಿ ಸಾಕ್ಷಿಯಿಂ ಮದುವೆಯಂ ಮಾಡಿಕೊಂಡಿರು
ತಿರ್ದನು ॥ ೪೮ ॥

ಎರಡನೇ ಹೆಂಡತಿ ದುಸ್ಸೀಲೆಯ ಕರ್ಕಶತನ

ತನ್ನ ತವರ್ಮನೆ ಬಂಧುಬಳಗ ಬರೆ ಮಂದಿರದಿ ।
ಮನ್ನಿಸುವಳಾದರದಿ ಪತಿಯ ತನು ಸಂಬಂಧಿ ।
ಯನ್ನುಕಂಡರೆ ಮಾತನಾಡಿನಳ್ ಜರಿವಳತಿ ಕಟುವಚನಮಂನುಡಿವಳು॥
ಕುನ್ನಿಯಂತೊದರುವಳು ನೆರೆಹೊರೆಯ ಜನರೊಡನೆ ।

(೧)ಗನ್ನಗಾತಕದಿ ಕೊಡುವಳ್ ಕಾಂತನೊಳ್ ವಿರಸ ।
ವನ್ನೆಸಗುವಳ್ ನಾರಿಯವಳಲ್ಲ (೨)ಹೆಮ್ಮಾರಿ ಕ್ರೂರಿ
ಕರ್ಣಕಠೋರಿ ॥ ೪೯ ॥
ಗಂಡಂಗೆ ಪ್ರತಿಕೂಲೆ ದುಸ್ಶೀಲೆ ಚಂಡಾಲೆ (ಚಂಚಲೆ) ।
ಚಂಡಿ ನಿಷ್ಠೂರಿ ಕಲಹಾರ್ತಿ ಬಹುಕೋಪಿ (೩) ಯು ।
ದ್ದಂಡ ಭಾಷಿಣಿ ಕುಟಿಲೆ ಕಪಟೆಯೆಂಬಿನಿತು ದುರ್ಗುಣದ
ಕರ್ಕಶ ನಾಮದಾ ॥
ಹೆಂಡತಿಯ ಮಾಡಿಕೊಂಡಾ ಸುಮಂತ ಬಹಳ ।
(೪)ಬೆಂಡಾಗಿ ವಗತನವ ನೆಸಗು ತಿರುತಿರ್ದ ಗೃಹ ।
ಮಂಡಲದೊಳಾಶೀಲೆ ಪಿತನ ಪೋಷಣೆಯಿಂದ ಸದ್ವೃತ್ತಿ
ಯೋಳಿರ್ದಳು ॥ ೫೦ ॥

ಮಂಗಳಾದ ಶೀಲೆಯು ಸದಾಚರಣೆ

ಪ್ರತಿದಿನದೊಳರುಣೋದಯಕೆ ಸ್ನಾನವಂ ಮಾಡು ।
ತತಿಭಕ್ತಿಯಿಂದ ದೇವರ ಮಂದಿರದ ಸಮಾ ।
ವೃತಭಿತ್ತಿ ಸ್ತಂಭಗಳ ಸುಸ್ಥಳವ ಗಂಧ ಸಾರಣೆಯಿಂದ ಶೃಂಗರಿಸುತಾ ॥
ಸತಿ ಶಿರೋಮಣಿ ಧ್ವಜಪತಾಕೆ ತೋರಣದಿ ಸಂ ।
ಭೃತವಾದ ತರುಣ ಪಲ್ಲವ ಕುಸುಮ ಮಾಲೆಗಳ ।
ವಿತತಿಯಿಂ ಶೋಭಿಸುವ ಮಂಟಪಂ ರಚಿಸುತಲ ದೀಪಗಳ
ಪ್ರಜ್ವಲಿಸುತ ॥ ೫೧ ॥
ನಗಧರನ ಮಂಡಿಸುವ ಜಗುಲಿಯುಲಿ ರಂಗವಾ ।
ಲೆಗಳ ಸಿತಾಸಿತ ಕೆಂಪು ಪಳದಿ ಪಚ್ಚೆಯುದ ಬ ।
ಣ್ಣಗಳಿಂದ ಶಂಖ ಚಕ್ರಾಬ್ಜಗದೆ ೫ ಸ್ವಸ್ತಿಕಂ ಮೊದಲಾದ ಚಿತ್ರಂಗಳ ॥
ಬಗೆಬಗೆಯ ರಚನೆಯಿಂದರ್ಚನೆಯ ಮಾಡುತಾ ।
ಸುಗುಣೆ ಗಣಶೀಲೆ ವಂದನೆ ಪ್ರದಕ್ಷಣೆಗಳ ನೆ ।
ಸಗುತಿರ್ದಳಳೆ ಜವ್ವನೋಪೇತಳಾಗಿ ಕಣ್ಗೆಸೆದಳೇವೇಳ್ವೆ ನೃಪತಿ ॥ ೫೨ ॥

---

೧ ಗನ್ನಗಾತಕದಿ=ವಂಚನೆ, ಕಪಟ, ಮರೆಮೋಸ. ೨ ಹೆಮ್ಮಾರಿ = ಶಿಟ್ಟಿನವರು ಕ್ರೂರಪಿಡಗು ಮುಖವುಳ್ಳವಳು ೩ ಉದ್ದಂಡ ಭಾಷಿಣಿ=ಬಹುಕರ್ಕಶ, ಮಾತಾಡುವಳು ೪ ಬೆಂಡಾಗಿ=ಸಾರವಿಲ್ಲದೆ ನಿರಸನಾಗಿ

೫ ಸ್ವಸ್ತಿಕ – ನಾಲ್ಕು ಕಡೆ ಬಾಗಿಲಿದ್ದ ದೊಡ್ಡ ಅರಮನೆ. ಶುಭಚಿನ್ಹ.

### ಯವ್ವನಳಾದ ಶೀಲೆಯ ಸೌಂದರ್ಯ ಬಣ್ಣನೆ ೨ ಪದ್ಯ

ಬಡನಡುವು ನಲಿಯೆ ಗತಿ ಮಂದತ್ವಮಂ ತಳೆಯೆ ।
ಜಡಜಕುಟ್ಮಲದಂತೆ ಕುಚಯುಗಂ ಡೂ (ಪೂ) ಣ್ಕೆ ಕೆಂ ।
ಪಿಡಿದಧರ ಬಿಂಬಫಲದಂತೆಸಿಯೆ ನುಣ್ಗಲ್ಲ ಮುಕುರದೋಳ್ ವಿಭ್ರಾಜಿಸೆ।
ಕುಡಿವರಿವ ನಸುಲಜ್ಜೆ ನಗೆಮೊಗದೊಳುಂಕರಿಸೆ ।
ಕುಡತೆಗಂಗಳೆ ನೋಟ ಹೊರಸೂಸೆ ದೇಹ ಸೊಂ ।
ಪಡರ್ದು ನುಂಪಿಡಿದುದಾ ಕಂಪ್ರೊಗೆಯಲಾ ಶೀಲೆ ಜವ್ವನದೇಳ್ಗೆಯಿಂ
ಮೆರದಳು ॥ ೫೩ ॥

ಮಂದಗತಿಯಿಂದ ನಳಿತೋಳಿಂದ ಮೊಳೆದೋರ್ವ ।
ದ್ವಂದ್ವ ಕುಚದಿಂದ ನುಣ್ದವುಗಳ ಶೃಂಗಾರ ।
ದಿಂದ ಕುಡಿವರಿವ ನಸುಲಜ್ಜೆಹರಹಿದ ಮುಖದ ಚಂಚಲಾಪಾಂಗದಿಂದ॥
ಸಿಂಧೂರದಿಂದಲಾ ರಾಜಿಸುವ ಸೀಮಂತ ।
ದಿಂದ ತಿಲಕಾಛವಿಯದಿಂದವಳಿತ್ರಯದಿಂದ ।
ಛಂದವಾಗಿರ್ದಳಾ ಶೀಲೆ ಭದ್ರಾಕಾರದಿಂದ ಸುವಿಲಾಸದಿಂದ ॥ ೫೪ ॥

ಕುಂದಕುಟ್ಮಲರದನೆ ಪಲ್ಲವಾಧರೆ ಚಾರು ।
ಚಂದಿರಾನನೆ ಭೃಂಗ ನೀಲ ಕುಂತಳೆ ಕುಸುಮ ।
ಗಂಧಿ ಚಂಪಕವರ್ಣೆ ಮಲ್ಲಿಕಾಸ್ಮಿತ ರುಚಿರೆ ಮೃದುಮಧುರ ಕೀರವಾಣಿ॥
ಇಂದೀವರಾಕ್ಷ ಕಲಹಂಸಗಾಮಿನಿ ಕಂಬು ।
ಕಂಧರೆ ಸುಮಧ್ಯ ಸುಶ್ರೋಣಿ ಫಣಿವೇಣಿ ವರ ।
ಸುಂದರಾಂಗಿನಿ ಶೀಲೆ ಶೋಭಿಸಿದಳಾದ್ವಿಜನ ಮನೆಯೊಳತಿ
ಸಿಂಗರದಲಿ ॥ ೫೫ ॥

(೧) ಅರಸಂಚೆ ಗತಿಗೆ ಕೋಕಿಲೆ ಗಿಳಿಗಳಿಂಚರಕೆ ।
ಪರಮೆ ಕುಲ ಕುಂತಳಕೆ ಸಾರಂಗ ಕಂಗಳ್ಗೆ ।
ಹರಿಮಧ್ಯಕೆಣೆವಕ್ಕಿ (೨) ಸ್ತನಗಳ್ಗೆ ಶೋಭಿಸುವ ರೋಮರಾಜಿಗೆ
ಭುಜಗವೊ ।

---

೧ ಅರ+ಸಂಚೆ=ಅರಸು ಅಂಚೆ ರಾಜಹಂಸ.

೨ ಪಸುಳೆ=ಹಸುಳೆ=ಚಿಕ್ಕವಳು–ಕೂಸು

ಮೆರವಾಂಗ ಲಾವಣ್ಯ ಕಂಡು ಮನಸೋಲ್ದು ಸು ।
ಸ್ಥಿರವಾಗಿ ನಿಂದವವಯವದೊಳಿನಲಾ ಬಾಲೆ !
ಯರ ಶಿಖಾಮಣಿ ಶೀಲೆಯನುಪಮ ಕಳೇವರದ ಸೌಂದರ್ಯ
ರಾಜಿಸಿದದು ॥ ೫೬ ॥

ಪೊಳೆವ ಕಂಗಳ ಬೆಳಗು ಮನ್ಮಥನ ಮಸ ದಲಗು ।
ಲಲಿತ ಪುಬ್ಬಿನ ಮಾಟ ಸ್ಮರನ ಚೌಪದಥಿಟ್ಟ (ಧೀಟ) ।
ತೊಳಗುತಿಹ ಸದ್ವದನ ಲೋಕ ಮೋಹನ ಸದನ ಕಾಂತಿ ಮುನಿಜನರ
ಭ್ರಾಂತಿ ॥

ತಲೆದೋರ್ವನವ ಪ್ರಾಯ ವಿಟರಿ (ಪುರುಷ) ಗಿಕ್ಕಿದ ಮಾಯ ।
ಮೊಲಿವುತಿಹ ಕೇಶಗಳು ಮದನ ಜಯ ಪಾಶಗಳು ।
ಇಳೆಯೊಳಚ್ಚರಿಬಾಲೆ ಸಾತ್ವೀಕ ಗುಣಶೀಲೆ ಶೀಲೆ ಕಣ್ಗೆಸೆದಿರ್ದಳು ॥೫೭॥

ಆರಳಿರ್ದ (ಅರಳ್ದ) ಕಮಲವೋ ಕಮಲ ಬಂಧೊದನವೊ ।
ಸ್ಮರಶರವೊ ಶಫರವೋ ನಯನವೋ ವಿದ್ರುಮವೊ ।
ವರಬಂಡುಗಯ ಕೆಂಪದುಟಿಯೊ ಕುಲಿಶವೂ ಕುಂದ ಕೋರಕವೊ
ರದನಂಗಳೊ ॥

ಕರಿಕುಂಭವೋ ಚಕ್ರವಕ್ಕಿಗಳೊ ಗುರು ಕುಚವೊ ।
ಮಿರುಪ ಸೌದಾಮಿನಿಯೊ ಕನಕಲತೆಯೋ ತನುವೊ ।
ಕುರುಪಿಡುವಪರಿದುದಾ ಶೀಲೆ ಚಲ್ವಿಕೆಯ ವರ್ಣಿಸುವರಾರೆಂದನು ॥೫೮॥
ಈ ಪರಿಯ ಸೌಂದರ್ಯ ಮಂ ತಾಳ್ದ ಶೀಲೆ ಸ ।
ದ್ವಾತ್ಸ್ಯವಾರದಿಂ ಜನಕ ನಾಲಯ ದೊಳಿರುತಿರ ।
ಲಕ್ಕಿ ಪಾರ್ವನೊಂದು ದಿನ ಪ್ರಾಯೆ ಚೆಸ್ಥಿಯನಾಂತ ತನುಜಾತೆಯಂ
ಕಾಣುತಾ ॥

ಈ ಪರಮ ರೂಪವತಿ ಗನುಕೂಲನಾದವರ ।
ನೀ ಪೊಡವಿಯೊಳಗೆಲ್ಲಿ ದೊರದಪಂ ಸತ್ವರದೊ ।
ಳೀಪಸುಳೆಗಿನ್ನು ವೈವಾಹವಂ ಮಾಡಬೇಕೆಂದು
ಚಿಂತಿಸುತಿರ್ದನು ॥ ೫೯ ॥

### ಕೌಂಡಣ್ಯಋಷಿಯು ಕನ್ಯಾರ್ಥಿಯಾಗಿ ಸುಮಂತನಿಗೆ ಬಿನ್ನೈಸಿದಂ

ಅನ್ನೆಗಂ ಮುನಿಗಳ ಸಮೂಹದಿಂ ಜ್ಞಾನ ಸಂ |
ಪನ್ನ ಕೌಂಡುಣ್ಯ ಋಷಿ ಬರಲಾತನಂ ಕಂಡು |
ಮನ್ನಿಸಿದನಾ ಸುಮಂತುಸನರ್ಘ್ಯಾದಿ ಪೂಜಗಳಿಂದ ಸತ್ಕರಿಸುತಾ ||
ಕನ್ಯಾರ್ಥಿಯಾಗೀ ದ್ವಿಜೋತ್ತಮಂ ಒಂದುದಂ |
ಚನ್ನಾಗಿ ಕೇಳು ೧ ತರಷುವಬಳ್ಳಿ ತ್ವರಿತದಿಂ |
ತನ್ನ ತಾನೇವೆ ೨ ಕಾಲ್ತೊಡಕಿತೆಂದಾಪ್ತಿಸುತ ಸುಮ್ಮಾನಮಂ
ತಾಳ್ದನು || ೬೦ ||

### ಶೀಲೆಯ ವಿವಾಹ

ಬಳಿಕಾ ಸುಮಂತ ಶುಭಲಗ್ನದೋಳ್ ಹರುಷದಿಂ |
ಕುಲವಿವರ್ಧನಳಾದ ಶೀಲೆಯಂ ಶೃಂಗರಿಸು |
ತುಲಿವ ವಾದ್ಯಗಳಿಂದ ವೇದೋಕ್ತ ವಿಧಿಯಿಂದ ಕೌಂಡುಣ್ಯ
ಮುನಿವರಂಗೆ ||
ಸುಲಭದಿಂ ವೈವಾಹಮಂ ಮಾಡಿಕೊಟ್ಟಿಳಿಯ |
ಗೊಲವಿನಿಂ ಶಕ್ತ್ಯಾನುಸಾರ ವಸ್ತ್ರಾಭರಣ |
ದೊಳು ಪೂಜೆಯಂ ಮಾಡಿ ಮನ್ನಿಸಿದ ೩ ನಕ್ತಿಯಿಂ ಧರ್ಮಸುತ
ಕೇಳೆಂದನು || ೬೧ ||

### ಕೌಂಡಿಣ್ಯ ಶೀಲೆ ತವರ್ಮೂರಿಗೆ ಪ್ರಯಾಣ

ಅರಸಿಯಂ ಕೂಡಿಕೊಂಡಾಗ ಕೌಂಡುಣ್ಯ ಋಷಿ |
ಹರುಷದಿಂ ಮಾವನಂ ಬೀಳ್ಕೊಂಡು ಗ್ರಾಮಕ್ಕೆ |
ತೆರಳುತಿರಲಾ ಸುಮಂತಂ ತನಗೆ ಸತಿಯಾದ ಕರ್ಕಶಿಗೆ ನುಡಿದ ನೆಲಗೆ ||

### ಕರ್ಕಶಿಯ ಆಕ್ರೋಶ

ತ್ವರಿತದಿಂಪಥ್ಯದ ಪದಾರ್ಥದನುಕೂಲವಂ |
ತರಳೆಗೋಸುಗ ಮಾಡಿಕೊಡುವವೆನೆ ಕೋಪದಿಂ |
ದುರುಳೆ ಭ್ರುಕುಟಿಬದ್ಧಳಾಗಿ ಬಾಗಿಲನಿಕ್ಕಿಕೊಂಡು
ಘರ್ಜಿಸುತೆಂದಳು || ೬೨ ||

---

೧ ಅರಸುವ ಬಳ್ಳಿ = ಹುಡುಕುವ - ವಲ್ಲಿ ಬಳ್ಳಿಹಬ್ಬುವದು.
೨ ಕಾಲ್ತೊಡಕಿತು = ಕಾಲಿಗೆ ಸಿಕ್ಕಂತಾಯಿತು. ೩ ಆಕ್ತಿಯಿಂ = ಪ್ರೀತಿಯಿಂದ

ಎಲ್ಲಿದೆ ಪದಾರ್ಥ ನೀ ನೋಡಿಕೋ ಬೇಕಾದ ।
ಡೆಲ್ಲಿನ್ನು ಪೋಗೆನುತ ಚಂಡಿ ನುಡಿಯಲು ಕೇಳಿ ।
ಮೆಲ್ಲನಾದ್ವಿಜ ತಾನೆ ಪಾಕಶಾಲೆಯ ಪೊಕ್ಕು ನಾಲ್ದೆಶೆಯೊಳರಸಲುಳಿದ ॥

### ಸುಮಂತನ ಸಾವ್ಯಾಚರಣೆ

ಬೆಲ್ಲ ಘೃತ ಗೋಧೂಮ ಮೊದಲಾದ ಪಾಥೇಯ ।
ವೆಲ್ಲ ಜೋಡಿಸಿ ಶೀಲೆ ಕೈಗಿತ್ತು ಬೀಳ್ಕೊಟ್ಟ ।
ನುಲ್ಲಾಸದಿಂದಶ್ರುಜಲ ಸುರಿಯಲಾ ಮಗಳ ಜಾಮಾತನೊಡನೆ
ಬಳಿಕ ॥ ೬೩ ॥

### ಶೀಲೆ ಸಹ ಕೌಂಡಿಣ್ಯ ರಥವೇರ್ದು ಹೊರಡುವಿಕೆ

ಸತಿಸಹಿತ ಕೌಂಡಿಣ್ಯ ದಿವ್ಯ ಸ್ಯಂದನವೇರು ।
ತತಿ ತೇಜದಿಂ ತನ್ನ ಪಟ್ಟಣಕೆ ಬರುತಿರಲು ।
ಪಥದೊಳಗೆ ಕಂಡನಾ ಶೀಲೆ ತನು ಲಾವಣ್ಯ ರಸದ ಪ್ರವಾಹವೆನಲು
( ಮೆನುತಾ ) ॥

### ಯಮುನಾ ನದಿಯ ವರ್ಣನೆ

ಅತಿಶಯದ ಗಂಭೀರ ಘೋಷದಿಂ ಬುದ್ಬುದದ ।
ಸುತರಂಗ ಮಾಲೆಯಿಂ ಘನವಾಹಿನಿಯ ಅಪರಿ ।
ಮಿತ ಜಲ ಚರಂಗಳಿಂ ನಿರ್ಮಲೋದಕದಿಂದ ಶೋಭಿಸುವ ವರ
ನದಿಯನು ॥ ೬೪ ॥

ಎಲ್ಲಿಯುಂ ಸುಳಿವ ಘನ ಮೀನ್ಗಳಿಂ ಫೇನ್ಗಳಿಂ ।
ದೆಲ್ಲಿಯುಂ ನಲಿವ ಹಂಸಾಳಿಯಿಂ ಕೇಳಿಯಿಂ ।
ದೆಲ್ಲಿಯುಂ ಕಾರಬಕ ಚಕ್ರದಿಂ ನಕ್ರದಿಂ ಸುಳಿ (೧)ಮೃಣಾಳಗಳಿಂದಲಿ॥
ಎಲ್ಲಿಯುಂ ಮುಳು ಮುಳುಗಿ ಸ್ನಾನಮಂ ಪಾನಮಂ ।
ನಲ್ಲಲ್ಲಿ ಮಾಳ್ಪದ್ವಿಜ ಮುನಿಗಳಂ ಧ್ವನಿಗಳಿಂ ।
ದೆಲ್ಲಿಯುಂ ಸ್ತ್ರೀಯರ ಸಮಾಜದಿಂ ತೇಜದಿಂದಾ ನದಿ
ವಿರಾಜಿಸಿದದು ॥ ೬೫ ॥

---

೧ ಮೃಣಾಳ=ಕಮಲದದಂಟು.

ಮಾಧ್ಯಾಹ್ನಿಕಕೆಗೆ ಕೌಂಡಿಣ್ಯನ ಪ್ರಯಾಣ ಶೀಲೆಯು ಅನೇಕ ಸ್ತ್ರೀಯರ ಕಾಣುವಿಕೆ.

ಭಾನು ಮಧ್ಯಾಹ್ನ ಗತ ನಾಗಲ್ಕೆ ಕೌಂಡುಣ್ಯ ।
ಮೌನಿ ನೋಡುತ ಜಪಾನುಷ್ಠಾನಕಾಗ್ಹೊಳೆಯ ।
ಸ್ನಾನಕುದ್ಯುಕ್ತನಾಗಿರೆ ಶೀಲೆ ಮೆಲ್ಲನಾ ರಥದಿಂದಲಿಳಿದು ಬರಲೂ ॥
ನಾನೊಂದು ಮುಖದಿಂದ ನಂತನ ಮಹತ್ಮೆಯ ವಿ ।
ಧಾನವೀ ತರಳಾಕ್ಷಿ ಗರುಹಲೊಶವಲ್ಲಿವೆಂ ।
ದಾನದಿಯನೇಕ ರೂಪಾದಳೆಂಬಂತಲ್ಲಿ ನೆರದಬಲೆಯರಕಂಡಳು ॥ ೬೬ ॥

ಯಮುನಾ ತೀರಸ್ಥ ಸ್ತ್ರೀಸಮೂಹ ವರ್ಣನೆ ೭೩ ಪದ್ಯದ ವರೆಗೆ

ಸಣ್ಣನಡುವಿನ ಸೊಕ್ಕುಜವ್ವನದ ಪೊನಮಿಸುನಿ ।
ವಣ್ಣದಂಗದ ಬಾಲೆಯರ್ ನೀಲಕುಂತಳದ ।
ಹುಣ್ಣಿವೆಯ ಶಶಿಯಂತೆ ನವ ಬಟ್ಟೆ ಮೊಗದ ನಿರೆಯರು ಮೌಕ್ತಿಕದ ಹಾರದಾ ॥
ತಿಣ್ಣ ಮೊಲೆಗಳನಾಂತು ಚದುರೆಯರ ಚಿಕ್ಕರಳೆ ।
ಗಣ್ಣ ಕೋಮಲೆಯ ರೋಮಮ್ಮಾರು ವೇಣಿಯ ತೊಂಡೆ ।
ವಣ್ಣ ಧರ ಕುಲಿಶಾಭಿ ರದನೆಯರ್ ಮೋಹನದ ಸದನೆಯರ್ ಕಣ್ಗೆಸೆದರು ॥ ೬೭ ॥
(೧) ಮದದ್ವಿರದ ಯಾನೆಯರ್ ಮಣಿಕನಕ (೨)ನಿಗಳೆಯರ್ ।
ಮಧುತರ ವಾಣಿಯರ್ ಮಲಯಜದ ಗಂಧಿಯರ್ ।
(೩) ಮಧುಪಾಳಿ ಕಾಳಿಯರ್ ಮಹಾಕಾಂತಿ ಭರಿತೆಯರ್ ಮಂದಸ್ಮಿತಾ ನನೆಯರು ॥
(೪) ಮದಿ (ರುಧಿ) ರಾಂಬಕ ಬಲೆಯರ್ ಮನೊಹರ ಸುಗಾತ್ರೆಮೃಗ ।
ಮದತಿಲಕ ಶೋಭೆಯರ್ ಮಾಂದಳಿರ ವಾಣಿಯರ್ ।
ಮದನಶರ ಮೂರ್ತಿಯರ್ ಮಂಗಳ ಚರತ್ರೆಯರ್ ಕಣ್ಗೆಸೆದರಾ ನದಿಯೊಳು ॥ ೬೮ ॥

---

೧ ಮದ=ಸೊಕ್ಕಿದ ದ್ವಿರದ ಆನೆಯ ಕುಂಭಸ್ಥಳದಂತೆ ಕುಚದಿ ಶೋಭಿಸುತ್ತ ಉಲಿದಾಡುವರು. ೨ ನಿಗಳೆಯರ = ಕಾಲಲಂದುಗೆಯಾದಿ ಆಭರಣದಿಂದ ಶೋಭಿಸುವರು. ೩ ಮಧುಪಾಳಿ = ಭೃಂಗದಂತೆ ಕಾಳಿಯರ್ = ಕಪ್ಪಾದ ಮುಂಗೂದಲುಳ್ಳವರು. ೪ ಮದಿರಾಂಬಕ = ಆರಕ್ತ ನೇತ್ರ ಉಳ್ಳವರು [ ರುಧಿರಾಂಬಕ=ಅರುಣಮಯ ಕೆಂಪು ಗಣ್ಣುಳ್ಳವರು ]

ಆರಡಿ ಸಮೂಹಗಳ ನ್ಯಾವರಸಿ ಮಸ್ತಕವ ।
ನೋರಣಂಗೈದುಕ್ಕೆಮುಡಿಯಿಡೆ ನಿಲ್ಲದಹಿ ಬಹಿರ ।
ಸಾರುಪ್ಯಮಂ ಪಡೆವೆವೆಂದಧೋಮುಖವಾಗಿ (೧) ತೊಡವಿ(ರಿ)ಟ್ಟು
ಹಿಂದುಲಿಯಲು ॥

ನೀರೆಯರ್ ಕಂಡಚ್ಚ ಸಂಪಿಗೆಯ ಕರದಿಂದ ।
ತೋರಲ್ಕೆ ಭಯದಿಂದ ಪದಕೆರಗುವ್ರೋಲ್ ಜೋಲ್ವ ।
ಚಾರು ಕೇಶರಗಳಿಂ ರಂಜಿಸಿದರಾ ನದಿಯೊಳಗೆ ನಿಂದ
ಕೋಮಲೆಯರು ॥ ೬೯ ॥

ಕೆಲರುದಕದೋಳ್ ಕ್ರೀಡೆಯಾಡುವರು ಸರಸದಿಂ ।
ಕೆಲರು ಮೈದೊಳದು ದಿವ್ಯಾಂಬರವ ನುಡುತಿಹರು ।
ಕೆಲರು ಕುಂಕುಮಗಂಧ ಪರಿಮಳ ಹರಿದ್ರಾನು ಲೇಪನಂ ಗೈವುತಿಹರು ॥
ಕೆಲರು ಪ್ರಸೂನಗಳ (೨) ಕಚದೆಡೆಯೊಳಿಡುತಿಹರು ।
ಕೆಲರು ಬಾಗಿನವಿತ್ತ ನಂತನಂ ಪೂಜಿಪರ್ ।
ಕೆಲವಬಲೆಯರ್ ಹರಿಯ ಕಥೆಯ ಕೇಳು ತರ್ಥಿಯಿಂ ಶೋಭಿಸಿದರಾ
ಹೊಳಿಯೊಳು ॥ ೭೦ ॥

ಕರಿಕುಂಭ ಕುಂಭಾದಿ ಸಾಮ್ಯದಿಂ ವರ್ಣಿಪರ್
ತರುಣಿಯರ ಕುಚಗಳಿಂ ಮಿಥ್ಯವದು ತಿಳಿಯಲಾ ।
ಸ್ಮರ ಮೂರು ಲೋಕವಂ ಜೈಸಿ ಭೇರಿದ್ವಯವು ತಲೆಕೆಳಗೆಮಾಡಿ ತನ್ನಾ
ಅರಮನೆಯ ಸೌಧಾಗ್ರದೋಳ್ ವಸನದಿಂ ಪೊದಿಸಿ ।
ಮರೆಮಾಡುತಿಟ್ಟನೋ ಧಿಟವೆಂಬ ತೆರನಾಗೆ ।
ಪರಿಶೋಭಿತಬಲೆಯರ ಮೇಲುದಿನೊಳೆಸವ ಬಲ್ಮೊಲೆಗಳಿಂ
ಪೇಳ್ವೆನು ॥ ೭೧ ॥

ಕರಿಕುಂಭಗಳ್ ಬಿಡದೆ ಮಾವತಿಗನಂಕುಶದಿ ।
ಲಿರಿಸಿಕೊಳಲಾರದೆಲೆ ಭಯದಿಂದ ಮೂಲೋಕ ।
ವರಸಿ ರಮ್ಯ ಸ್ಥಳಗಳಂ ಕಾಣದಂಗನೆಯರ ಉರಜಂಗಳಾಗಿ ಜನಿಸೆ ॥
ನಿರುತಲ್ಲಿ ವಲ್ಲಭರ ನಖಗಳೆಂಬಂಕುಶದ ।

---

೧ ಅಲಂಕರಿಸಿ ೨ ಕಚ=ತಲೆಗೂದಲು ಅಲಂಕರಿಸೆ.

ಬಿರುಗಾಳಿಯಿಂ ನೊಯ್ಯುತಿರ್ದಪ್ಪೆ ಫಣಿಯಲ್ಲಿ ।
ಸರಸಿಜೋದ್ಭವ ಬರೆದ ಲಿಪಿ (ಖಿ) ತಪ್ಪದೆಂಬಂತೆ ಕಣ್ಗೆಸೆದವಾ
ಮೊಲೆಗಳು ॥ ೭೨ ॥

ರಕ್ತವರ್ಣಾಂಬರಾಭರಣ ಭೂಷಿತರಾಗಿ ।
ಭಕ್ತಿಯಿಂದಾ ಚತುರ್ದಶ ಗ್ರಂಥ ಸೂತ್ರ ಸಂ ।
ಯುಕ್ತವಾಗಿರ್ದನಂತನ ಪೂಜೆಯಂ ಬ್ಯಾರೆ ಬ್ಯಾರೆ ಸುವ್ಮಾನದಿಂದ ॥
ವ್ಯಕ್ತವಾದಾ ನದಿ ಸಮೀಪದಲಿ ಮಾಡಲು ।
ದ್ಯುಕ್ತರಾಗಿರ್ದಖಿಳ ನಾರಿಯರ ಕಾಣುತಾ ।
ಸಕ್ತಿಯಿಂದಾ ಶೀಲೆ ಬಳಿಕವಂಡಿಗೆ ಪೋಗಿ ಬೆಸಗೊಂಡಳನು
ನಯದೊಳು ॥ ೭೩ ॥

ಶೀಲೆಯು ವ್ರತವಾಚರಿಸುವ ಸ್ತ್ರೀಯರಿಗೆ ಕೇಳ್ದಳು

ಎಲೆ ಹಿರಿಯರಾದಖಿಳ ಬಾಲೆಯರೆ ನೀವೆಲ್ಲ ।
ರೊಲಿದು ಮಾಡುವ ಪೂಜೆ ದಾವ ದೇವರದು ಮಂ ।
ಗಳನೋಂಪಿಯಭಿಧಾನವೇನು ನಿಶ್ಚಯವಾಗಿ ತನಗಿಂದು ಪೇಳ್ವದೆನಲು ॥
ಲಲನೆ ಕೇಳ್ ಬಯಸಿದಿಷ್ಟಾರ್ಥಮಂ ಕೊಡುವ ಭೂ ।
ವಲಯದೊಳ್ ವಿಖ್ಯಾತವಾದನಂತಾಖ್ಯ ಸಿ ।
ರ್ಮಂಗಳ ವ್ರತವನೋನತಿಸುವೆಂದು ಸತಿಯರ್ ನ ಡಿಯೆ ಶೀಲೆ
ಮತ್ತಿಂತೆಂದಳು ॥ ೭೪ ॥

ತಾನಮಳನೋಂಪಿಯಂ ಕೈಕೊಂಬೆನರ್ಚನೆ ವಿ ।
ಧಾನಗಳನೆಂತಾವ ತಿಥಿ ಮಾಸ ಪಕ್ಷದೊಳ್ ।
ನೂನಬೇಕೀ ದಿವ್ಯ ವ್ರತವಾವ ಸ್ಥಳದಲ್ಲಿ ಭಜಿಸಬೇಕಾವನೊಲಿದು ॥
ದಾನ ದಕ್ಷಿಣೆಗಳಿನ್ನಾವ ಬಗೆ ಪುಣ್ಯ ಫಲ ।
ವೇನು ತನಗಿನಿತೆಲ್ಲವಂ ಸವಿಸ್ತರವಾಗಿ ।
ಮಾನಿನೀ ಮಣಿಗಳಿನ್ನೈ ಕರುಣದಿಂದಲುಹೆಂದು ಬೆಸಗೊಂಡಳಾ-
ಯತಾಕ್ಷಿ ॥ ೭೫ ॥

ಸ್ತ್ರೀಯರು ಅನಂತನ ಪೂಜಾ ವ್ರತ ಮಹಾತ್ಮೆ ಹೇಳ್ದರೆನೆ [ ೮ ಪದ್ಯವರೆಗೆ ]

ನೀರೆ ಕೇಳಾದಡಿನ್ನೀ ಭಾದ್ರಪದ ಮಾಸ ।

ಚಾರುತರ ಶುಕ್ಲ ಪಕ್ಷದ ಚತುರ್ದಶಿಯೊಳ್ಗಾ ।
ಭೀರವಾದಾನದಿಯ ತೀರದಲಿ ಮಂಗಳ ಸ್ನಾನದಿಂ ಶುಚಿಗಳಾಗಿ ॥
ಸಾರವಸ್ತ್ರಾಭರಣದಿಂದ ಭೂಷಿತರಾಗಿ ।
ತಾರಾಧಿನಲ್ ಬೇಕನಂತರೂಪಚ್ಯುತನ ।
ನಾರಿಪುರುಷರು ಸರ್ವರೇಕಾಗ್ರಚಿತ್ತದಲಿ ಹರುಷದಿಂದೀ
ವಿಧಿಯೊಳು ॥ ೭೬ ॥

ಪರಿ ಪರಿಯ ಪುಷ್ಪ ಫಲ ನಿಚಕದಿಂ ಪೆಳಿದಳಿರ ।
ಸರಗಳಿಂದೆಸವಮಲ ಮಂಟಪವ ರಚಿಸುತ್ತ ।
ಸುರಭಿಮಯ ಸಾರಣೆಗಳಿಂದಲಂಕರಿಸಿ ದ್ವಯ ಕಲಶಗಳನಾ ಸ್ಥಳದೊಳು॥
ಸ್ಥಿರಗೊಳಿಸಿ ದರ್ಭಾತ್ಮ ಸಪ್ತಫಣಾ ಸಿಸಿರ್ಗಳದ ।
ಮೆರೆಪೆರಡು ಗ್ರಂಥಿಗಳ ನಸ್ತ್ರಯಿಂದರ್ಚಿಸ (ಲ್) ।
ತರಳಿ ಕೇಳ್ಸಾಂಬೂನ ದಾತ್ಮಕ ನ್ರುತಿಗಳಿಯಂ ನೋಲಿರಿಸಿ
ಭಕ್ತಿಯಿಂದ ॥ ೭೭ ॥

ತರುಣ ಪಲ್ಲವ ಪೂರ್ಣ ಕಲಶ ಳ ಸ್ಥಾಪಿಸುತ ।
ವರಚತುರ್ದಶ ಗ್ರಂಥಿಯುಕ್ತ ಕುಂಕುಮ ವರ್ಣ ।
ಪರಮ ಸ್ನಿಗ್ಧತರ ನವ್ಯಸೂತ್ರದಲಿ ಶ್ರೀ ಮಹಾನಂತನ ಸುವಿಗ್ರಹವನು॥
ಕರಣಶುದ್ಧಿಗಳಿಂದಲಾಹ್ವಾನವಂ ಗೈದು ।
ತರುಣಿಕೇಳ್ ಬಳಿಕ ಶುಭ ಯಮುನಾ ತರಂಗಿಣಿಯ ।
ಹರುಷದಿಂ ಷೋಡಶೋಪಚಾರ ಪೂಜೆಗಳಿಂದ ಅರ್ಚಿಸಿದ
ತದನಂತರಾ ॥ ೭೮ ॥

ಚರಣಾಬ್ಜ ದರ ವರ ಗದಾ ಶೋಭಿತ ಚತುರ್ಭುಜದಿ ।
ಮಿರುಪ ಪೀತಾಂಬರದಿ ಶ್ರೀ ವತ್ಸಕೌಸ್ತುಭಾ ।
ಭರಣದಿಂ ನವರತ್ನ ಮುಕುಟ ಕುಂಡಲ ವೈಜಯಂತಿಹಾರಗಳಿಂದಲಿ ॥
ವರಸುಪ್ರಸನ್ನ ವದನರವಿಂದದಿಂ ಮನೋ।
ಹರದಿವ್ಯರೂಪದಿಂಪೆಸೆವ ನಂತಾಖ್ಯ ಶ್ರೀ ।
ಹರಿಯ ಮೂರ್ತಿಯ ಮನದಿ ಧ್ಯಾನವಂ ಮಾಡುತರ್ಚಿಸಬೇಕು
ಭಕ್ತಿಯಿಂದಾ ॥ ೭೯ ॥

ರಮಣಿ ಕೇಳ್ ಪಂಚಾಮೃತಭಿಷೇಕಗಳ ಮಾಡಿ ।
ಕಮಲಾಯತಾಕ್ಷಂಗೆ ಸೌರಭ್ಯ ಸಂಯುಕ್ತ ।
ವಿಮಲ ಶುದ್ಧೋದಕದ ಸ್ನಾನಮಂ ಗೈಸಿ ಮಂಗಳ ವಸ್ತ್ರಾಭರಣದಲ್ಲಿ
(ಭೂಷಣದಲಿ) ॥
ಕಮನೀಯ ಗಂಧಾಕ್ಷತೆಗಳಿಂದಲಕರಿಸಿ ।
ಕುಮುದ ಮಲ್ಲಿಗಿ ಜಾಜಿ ತುಲಸಿ ಕೇತಕಿ ವಿವಿಧ ।
ಸುಮನಂಗಳಂ ಸಮರ್ಪಿಸಬೇಕನಂತಗೆ ಸಹಸ್ರನಾಮಗಳಿಂದಲಿ ॥೮೦॥
ದೀಪಗಳ ಸಾಲ್ಗಗಳಿಂ ಮಘಮಘಿಪ ಪರಿಮಳದ ।
ಧೂಪದಿಂ ಕರ್ಪುರದ ಮಂಗಳಾರತಿಯು ನಾ ।
ನಾ ಪರಿಯ ಪಕ್ವ ಪರಮಾನ್ನ ಮೃದು ಭಕ್ಷಭೋಜ್ಯಾದಿ ಷಡ್ರಸಗಳಿಂದ॥
ಶ್ರೀಪತಿಗೆ ನೈವೇದ್ಯಮಂ ಕೊಟ್ಟು ತಾಂಬೂಲ ।
ವಾ ಪರಬ್ರಹ್ಮಗೆ ಸುವರ್ಣ ಪುಷ್ಪದಲಿ ಸ ।
ರ್ವೋಪಚಾರದ ಪೂಜೆಯಂ ಸಮರ್ಪಿಸುತ ವಂದನೆ ಪ್ರದಕ್ಷಣೆ
ಮಾಡುತಾ ॥ ೮೧ ॥
ಬಳಿಕೈ ೧ದೆಯರ್ಗೆ ವಿಪ್ರರಿಗೆ ಬಾಗಿಣಗಳಿಂ ।
ಫಲಗಳಂ ಮುದ್ಗ ಗೋಧೂಮ ದಕ್ಷಣೆಗಳಿಂ ।
ನಲುವಿನಿಂದಿತ್ತು ಕುಂಕುಮ ಸುಗಂಧಾನುಲೇಪನಗಳಿಂ ಸತ್ಕರಿಸುತಾ ॥
ಲಲನೆ ಕೇಳ್ ಪರಮ ಮಂಗಳಸೀವ ಸೂತ್ರಮಂ ।
ಬಲಗೈಗೆ ಕಟ್ಟಿಕೊಳಬೇಕು ನಲೆ ಭಕ್ತಿಯಿಂ ।
ನಳಿನಾಕ್ಷ ಶ್ರೀಮದಾನಂತನ ಸುಪ್ರಾರ್ಥನೆಯ ನೀಮಂತ್ರ
ಧ್ಯಾನಿಸುತ್ತ ॥ ೮೨ ॥
ಸಂಸಾರವೆಂಬ ಮಹ ವಾರಿನಿಧಿಯೊಳ್ಮುಳುಗಿ ।
ಸಂಶಯಜ್ಞಾನದಿಂ ಪಾರಗಾಣದೆ ಬಳಲು ।
ತ್ತಂಸಗಳ ಸೋಲ್ದು ಬಹು ಖಿನ್ನ (ಬನ್ನ) ಗೊಂಬುವ (ವಂ ಚನ್ನಾಗಿ
ಉದ್ಧಾರ ಮಾಡು) ನುದ್ಧರಿಸುವದು ತ್ವರಿತದಿಂದ ॥
ಕಂಸಾರಿ ಶ್ರೀ ವಾಸುದೇವನೇ ದುರಿತ ವಿ ।

---

೧ ಐದೆಯರ್ಗೆ = ಐದು ಮುತ್ತೈಳ್ಳ ಮುತ್ತೈದಿಯರಿಗೆ, ಮುಾಗುತಿ,

ಧ್ವಂಸಿ ವಿಜಯಪ್ರದಾನಂತ ರೂಪೆನ್ನ ಕೃಪೆ ।
ಯಿಂ ಸಲಹೊ ಸೂತ್ರಾಂತರ್ಗತನಾದನಂತನೇ ತವಪದಕೆ
ವಂದಿಸುವೆನು ॥ ೮೩ ॥

ಕುರು ಕುಲೋದ್ಭವನೆ ಕೇಳ್ ಸಂಸಾರವೆಂಬ ದು ।
ಸ್ತರ ಮ(ಗು)ಹಾರಣ್ಯದಲಿ ಸುಖವನಾಪೇಕ್ಷಿಸುವ ।
ಕರುಣ ನಿರ್ಮಳ ಮೂರ್ತಿ ಮೂಲೋಕಕರನಾದನಂತದೇವನಪೂಜಿಸಿ ॥
ವರದೋರಕವ ಚಿತ್ತಶುದ್ಧಿಯೊಳ್ ದಕ್ಷಣದ ।
ಕರಕೆ ಬಂಧಿಸಿದಡೆ ಭವಾರಣವನುತ್ತರಿಸಿ ।
ದುರಿತದಿಂ ಮುಕ್ತರಾಗಿಹ ಪರದೊಳಾನಂದವನು ಭೋಗಿಸುವ
ರಜಸ್ರಾ ॥ ೮೪ ॥

ಈ ಪ್ರಕಾರದೊಳನಂತನ ಪ್ರಾರ್ಥನೆಯ ಮಾಡು ।
ತಾ ಪ್ರಸಿದ್ಧಿಯ ಸೂತ್ರಮಂ ಧರಿಸಿ ಹರಿಯ ಮಾ ।
ಹಾ ಪ್ರಸಾದದ ಶೇಷವಂ ದ್ವಿಜರಪಂಕ್ತಿಯಲಿ ಭುಂಜಿಸುತ ಸುವ್ರತವನು॥
ಆ ಪ್ರತೀ ವರುಷನೂನುತ್ತ ಲುದ್ಯಾಪನೆಯ ।
ನೀ ಪ್ರಾಥೆ ಕೇಳೆಸಗಿದವರಿಗಷ್ಟೈಶ್ವರ್ಯ ।
ತಾ ಪ್ರಾಪ್ತಿಯಾಗುವದು ಸಿದ್ಧವೆಂದಾ ಶೀಲೆಗಾಬಾಲೆಯರ್
ಪೇಳ್ದರು ॥ ೮೫ ॥

ಶೀಲೆಯು ಅನಂತ ವ್ರತವಾಚರಿಸಿದಳೆನೆ.

ಈ ತರದಿ ಸರ್ವವಂ ಬಾಲೆಯರ ಮುಖದಿ ವಿ ।
ಖ್ಯಾತ ನಂತನ ವ್ರತದ ವಿಧಿಯ ಸಲೆ ಕೇಳಿ ಸಂ ।
ಪ್ರೀತಿ ಪೂರ್ವಕದೊಳಾ ಗಂಗೆಯೊಳ್ ಮಜ್ಜನಂಗೈದು ಶುಚಿಯಾಗಿ
ಬಳಿಕ ॥

ಆ ತರುಣಿಯರ್ ಪೇಳ್ದ ಪರಿಯಿಂದನೋಂಪಿಯಂ ।
ನೋತುವರ ಸೂತ್ರಮಂ ದಕ್ಷಿಣದ ಹಸ್ತಾಂಬು ।
ಜಾತದಲಿ ಕಟ್ಟಿಕೊಂಡತಿ ಹರುಷದಿಂದಚ್ಯುತನ ಮನದಿ
ಧ್ಯಾನಿಸುತ್ತ ॥ ೮೬ ॥

ತಾ ತಂದ ಪಾಥೇಯ ನಂತಗ ಸಮರ್ಪಿಸುತ |
ಲಾ ತರುಳೆ ನೈವೇದ್ಯಮಂ ವಿಪ್ರಗುಣಲಿತ್ತು |
ಭೂತಳೇಶ್ವರನೆ ಕೇಳಾಕೆ ಸಂತುಷ್ಟಿಯೊಳ್ ಭೋಜನಂ ಗೈದುಬಿಡದೆ||
ಪೀತಾಂಬರನ ಚರಣದಲ್ಲಿ ಮನವಿಟ್ಟು ನಿ |
ರ್ಧೂತ ಕಲ್ಮಷಳಾಗಿ ತನ್ನ (೧) ಗೋರಥ ಕ್ಕೈದ |
ಲಾ ತಪೋ ಧನಪ ಕೌಂಡುಣ್ಯನುಷ್ಠಾನವಮಂ ಮುಗಿಸಿ ನಡೆ
ತಂದನಾಗ ||೮೭||

**ಕೌಂಡುಣ್ಯ ಸಹಿತ ರಥವೇರಿ ತಮ್ಮ ಊರಿಗೆ ಬರುವಿಕೆ**

ನಾರಿಸಹಿತಾ ಮುನಿವರೂಥವ ನಡರ್ದು ತ |
ನ್ನೂರಿಗೈತರಲಾ ಸುಮಂತ ಸುತೆ ಸದ್ವ್ರತದ |
ಧಾರವಂ ಬಂಧಿಸುತನಂತನಂ ಪೂಜಿಸಿದ ಮಹಿಮೆಯಿಂದಾಕ್ಷಣದೊಳು||
ಭೂರಿ ಕಾಂತಿಯ ನಾಂತು ಸಾವಿತ್ರಿಯಂತೆ ಶ್ಯಂ |
ಗಾರವಂ ತಾಳ್ದಳೀವೇಳ್ವೆ ಋಷಿಯಾಶ್ರಮ |
ದ್ವಾರಕ್ಕೆ ಬರಲಾ ಕುಟೀರ ಮಣಿ ಕನಕ ಖಚಿತದ ದಿವ್ಯ
ಮನೆಯಾಯಿತು ||೮೮||

**ಅನಂತನ ಮಹಿಮೆಯಿಂ ಸಕಲೈಶ್ವರ್ಯ**

ಹರಿ ರಜತಮಯವಾಯ್ತು ಮನೆಯಲ್ಲವಂ ಪೊಳೆವ |
ಪರಿಪರಿಯ ರತ್ನ ವೆರೌಕ್ತಿಕದ ಮಯವಾಯ್ತು ಭಾ |
ಸುರನವ್ಯ ವಸ್ತ್ರಮಯವಾಯ್ತು ಧನಧಾನ್ಯಗಳಿಂದ ಸಂಭರಿತವಾಯ್ತು||
ತುರಗ ಗಜ ರಥ ಊಷ್ಟ್ರ ವೃಷಭಗಳ ಮಯವಾಯಿತ್ತು |
ವರಮಹಿಷಸುರಭಿ ವಿಂಡುಗಳ ಮಯ ಪರಿಚರಿಯ |
ತರುಣಿಯರ ಮಯವಾಯ್ತು ಮುನಿಪನ ನಿಜಾಶ್ರಮಾಷ್ಟೈಶ್ವರ್ಯ
ಭರಿತವಾಯ್ತು ||೮೯

**ಶೀಲೆಯು ಅನಂತನ ಮಹಿಮೆಯೆಂದು ತಿಳಿದುದು**

ಭೂಮಿಶ ಕೇಳಿನ್ನು ಭಕ್ತಿಯಿಂದರ್ಚಿಪಂ |
ಗಾ ಮಹಾ ಕೈವಲ್ಯ ಪದವಿ ದೊರಕುವದಿನ್ನು |
ನಿ ಮಹಿಳೆಗೀ ಭಾಗ್ಯ ಬಪ್ಪದಚ್ಚರಿಯೆ ಬಳಿಕಾ ಶೀಲೆ ತೊಳತೊಳಗುವ||

---

೧ ಗೋರಥ=ವೃಷಭದಿಂದ ಹೂಡಿದ ರಥ

ಹೇಮಾಂಬರದಿ ಸುಮುತ್ತಿನ ಹಾರ ಮಣಿಕಾಂಚ ।
ದಾಮನೂಪುರ ಕಂಕಣಾದಿ ಭೂಷಣ ತಾಳ್ದು ।
ರಾಮಣೀಯಕ ರೂಪವತಿಯಾದಳಭ್ಯುದಯದೇಳ್ಗೆಯಿಂ
ಶೋಭಿಸುತ್ತ ॥ ೯೦ ॥

ಕೌಂಡುಣ್ಯನು ತನ್ನ ತಪೋಬಲದಿಂದ ಐಶ್ವರ್ಯ ಒದಗಿತೆಂದ

ತನ್ನಯ ತಪೋಬಲದೊಳಿಂತು ಸಿರಿ ತಲೆದೋರಿ ।
ತಿನ್ನೆನಗೆ ಸರಿಯಿಲ್ಲ ಲೋಕದೊಳಗೆನುತಲಾ ।
ಸನ್ನುತಾನಂತನ ಪ್ರಸಾದವೆಂದರಿಯದಲೆ ಗರ್ವದಿಂ ಕೌಂಡುಣ್ಯನು ॥
ಉನ್ನತೈಶ್ವರ್ಯ ಮದದಿಂದಲುಬ್ಬೇರಿ ವರ ।
ಕನ್ನೈದಲಾಕ್ಷಿಯೊಡನತಿ ವಿಷಯ ಭೋಗ ಸಂ ।
ಪನ್ನನಾಗಿರ್ದನನವರತ ರಮಿಸುತಲಿ ಸುಮ್ಯಾನದಿಂದಾಶ್ರಮ
ದೊಳು ॥ ೯೧ ॥

ಜ್ಞಾನಿಗಳು ಸಿರಿಯು ಸಂಪದಬಯಸದೆ ಹರಿಯರ್ಚಿಪರು

ದಾರಿದ್ರವಸ್ಥೆಯಲಿ ನರರು ವಿನಯದಿ ಸದಾ ।
ಚಾರದಿಂ ನಡೆವರಾ ಗುರುಹಿರಿಯರ ಚ್ಯುತನ ।
ನಾರಾಧಿಸುತ ಲಜ್ಜೆ ಸಾತ್ವೀಕ ಭಾವದಿಂ ದಿರ್ಪರೈ ಭಾಗ್ಯಬರಲು ॥
ಹೋರುವರ್ ಸಾಧುಗಳ್ ವಿಷಯ ಲಂಪಟರಾಗಿ ।
ನಾರಿಯಲಿ ಮನವಿಡುವರಾಹರಿಯ ಮರೆದವರ್ ।
ಭೂರಮಣ ಕೇಳ್ ಸಿರಿಯನರ್ಥ ಸಾಧನ ದುಃಖ ಕಾರಣವು ನಿತ್ಯ
ತಿಳಿಯೊ ॥ ೯೨ ॥

ಆದರಿಂದ ಜ್ಞಾನಿಗಳ್ ಸೌಭಾಗ್ಯ ಬಯಸದಲೆ ।
ಮುದದಿಂದಲೆನ್ನ ದರ್ಶನವ ನಾ ಪೇಕ್ಷಿಪರ್ ।
ಹೃದಯದೋಳ್ ಸತತೆನ್ನ ವಿಗ್ರಹವ ಧ್ಯಾನಿಪರ್ ನಿಷ್ಕಾಮ (ನಿಷ್ಕರ್ಮ)
ದಿಂದ ತಿಳಿದು ॥

ಕೌಂಡುಣ್ಯ ಐಶ್ವರ್ಯಮದ ತಾಳ್ದನು

(೧) ಬದರ ಕುಲ ಮೌಳಿಕೇಳ್ ಕೌಂಡುಣ್ಯ ಮುನಿ ಸಿರಿಯ ।
ಮುದದಿಂದ ನಂತನ ಮಹಾತ್ಮೆಯೆಂದರಿಯದ ।

---

೧ ಬದರ=ಚಂದ್ರ.

ಭ್ಯುದಯ ಎನ್ನಯ ತಪೋಮಹಿಮೆಯಿಂ ವೈ ದೋರಿತೆಂದು
ಬಿಂಕದೊಳಿರ್ದನು ॥ ೯೩ ।

**ಶೀಲೆಯು ಭಕ್ತಿಯಿಂ ಅನಂತನಂ ಭಜಿಸಿದಳು.**

ಇಂತು ಸಂಪದ ಏಕಕಾಲದೋಳ್ ಬರಲಾ ನು ।
ಮಂತ ಸುತೆ ಬೆರಗಾಗುತರಿದಳಾ ಪ್ರತ್ಯಕ್ಷ ।
ನಂತನ ಸುನೋಪಿಯಂ ನೋತ ಫಲದಿಂದೆನಗೆ ವಿಭವಕ್ಕೆ ಸಾರಿತೆಂದು ।
ಸಂತತಂ ಶ್ರೀ ಮನೋಹರ ವಿಠ್ಠಲನ ಚರಣ ।
ಮಂ ತನ್ನ ಹೃತ್ಕಮಲದೊಳಗಿಟ್ಟು ಭಜಿಸುತಲೆ ।
ಸಂತೋಷ ಮಯಳಾಗಿ ಭಕ್ತಿಯಿಂ ಪತಿವ್ರತಾ ಧರ್ಮದಿಂದಿರು
ತಿರ್ದಳು ॥ ೯೪ ।

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ ಶ್ರೀಮದನಂತನ
ಕಥಾ ಪ್ರಸಂಗೇ ಕೌಂಡುಣ್ಯ ಸದ್ಭಾಗ್ಯಪ್ರಾಪ್ತಿ ವರ್ಣನೋನ್ನಾಮ
ಸಪ್ತಮಸಂಧಿ ಸಮಾಪ್ತ ॥ ಮಂಗಳಮಾಹ.

ಶ್ರೀ ಗುರುಭ್ಯೋನಮಃ ಹರಿಃ ಓಂ

## ಅಥ ಎಂಟನೇ ಸಂಧಿ ಪ್ರಾರಂಭ

**ಸಂಧಿ ಸೂಚನೆ :—** ರಾಗ — ಭೈರವಿ

ಮುದದಿಂದ ಕೌಂಡುಣ್ಯನಂತನಂ ಜರಿಯೆ ಲ ।
ಭ್ಯುದಯ ವಿರಹಿತನಾಗಿ ವನಕ್ಕೈದಿ ಪ್ರತ್ಯಕ್ಷ ।
ಮದನ ಪಿತನಂ ಕಂಡು ನುತಿಗೈದು ಮುದದಿಂದ ಮೂರು
ವರವಂ ಪಡೆದನು ॥ ಪಲ್ಲ

॥ ಪದನು ॥ ಶ್ರೀಕೃಷ್ಣ ಸ್ತೋತ್ರ

೧ ರಾಸಿಧ್ವಜನ ರಣದಿ ಮೆಚ್ಚಿಸಿದ ವೀರನಂ ।

---

**ಈ (೧) ನೇ ಪದ್ಯದಲ್ಲಿ ೧೨ ಮೇಷಾದಿರಾಶಿಗಳ ಪೈಕಿ ೬ ರಾಶಿಗಳ ಪ್ರಯೋ[illegible] ಮಾಡಿದ ಕವಿ ಚಮತ್ಕೃತೆ, ಇದರಂತೆ ಸಂವತ್ಸರ, ವಾರ, ನಕ್ಷತ್ರ ಪ್ರಯೊ ಗಿಸಿರುವರು.**

೧ ರಾಶಿಧ್ವಜ = ವೃಷಭರಾಶಿ – ವೃಷಭಧ್ವಜ. ಮಹರುದ್ರನನ್ನು ರಣದ[illegible]
ಮೆಚ್ಚಿಸಿದ ವೀರನಾದ ಅರ್ಜುನನನ್ನು

೨ ರಾಸಿವಿದ್ಯಂಗಳೊಳಧಿಕನಂ ಮಾಡಿಪಾ ।
೩ ರಾಸಿಹಳಪ (ವಿ) ಗೆಯವನ ತನುಜನ ಮಹಾಸ್ತ್ರಕ್ಕೆ ಬಾಗದಾತನ
ಜನನಿಯಾ ॥
೪ ರಾಸಿಯಾವಸ್ಥೆಯೊಳು ಪುಟ್ಟಿದನ ನಿಜಪಿತನ ।
೫ ರಾಸಿಮಧ್ಯವ ಪೋಲ್ವ ಸುತೆಯ ವಲ್ಲಭನಾದ ।
೬ ರಾಸಿಕೇತನ ಜನಕನಂಘ್ರಿ ಕರದಂಡಮಂ ಧ್ಯಾಸಿಸುವೆ ನಾ ಮನದೊಳು॥

ಸುಖಮುನಿಗಳ ಸ್ತೋತ್ರ (ಮಧ್ವರ ಸ್ತುತಿ)

ವಿಕಳ ಮಿಥ್ಯಾಶಾಸ್ತ್ರದಿಂದ ಸೋಹಂಯೆಂದು ।
ಸಕಲ ಸಜ್ಜನರೊಡನೆ ವಾದಿಸುತ ಧರಣಿಯೊಳ್ ।
ಪ್ರಕಟಿಸಿದ ಸಂಕರನ ಹಲ್ಮುರಿದು ದುರ್ಮತಗಳೆಲ್ಲ ತರಿದು ॥
ನಿಖಿಳದಿವಿ ಜೋತ್ತಮನೆ ಹರಿ ವಿಶ್ವಸತ್ಯವೆಂ ।
ದಕುಟಿಲರಿಗೊರದು ಸಂವರಕ್ಷಿಸಿದ ಗುರುವರ್ಯ ।
ಸುಖಮುನೀಂದ್ರರ ದಿವ್ಯ ಚರಣಾರವಿಂದಗಳ ಸ್ಮರಿಸಿ ಮುಂಗಥೆ
ಪೇಳ್ವೆನು ॥ ೨ ॥

---

೨ ರಾಶಿ = ಧನುರಾಶಿ – ಧನುರ್ವಿದ್ಯಂಗಳಲ್ಲಿ ಹೆಚ್ಚಿನವನನ್ನಾಗಿ ಮಾಡಿದ

೩ ರಾಸಿಹಳವಿಗೆಯವನ = ರಾಶಿ ಕುಂಭರಾಶಿ ಹಳವಿಕೆ = ಧ್ವಜಪತಾಕೆ ಬಾವುಟ ಕುಂಭವೇ ಧ್ವಜವಾಗಿ ಉಳ್ಳ ದ್ರೋಣಾಚಾರ್ಯರ ಸುತನಾದ ಅಶ್ವತ್ಥಾಮಾಚಾರ್ಯರು ಬಿಟ್ಟ ಬ್ರಹ್ಮಾಸ್ತ್ರಕ್ಕೆ ಬಾಗದೇ ಇದ್ದ ಭೀಮಸೇನ ದೇವರ ಜವನಿ ಕುಂತೀದೇವಿಯು

೪ ರಾಶಿಯಾವಸ್ಥೆಯೊಳು = ರಾಶಿ = ಕನ್ಯಾರಾಶಿ = ಕನ್ಯಾವಸ್ಥೆಯಲ್ಲಿ ಹುಟ್ಟಿದ ಕರ್ಣನ ನಿಜಪಿತನ = ಸೂರ್ಯದೇವರ, ಸುತೆಯು

೫ ರಾಶಿಮಧ್ಯವಪೋಲ್ವ = ರಾಶಿ = ಸಿಂಹರಾಶಿ = ಸಿಂಹದಂತೆ ಮಧ್ಯಕಟಿ ಟೊಂಕವನ್ನು ಹೋಲುವ = ಸೂರ್ಯ ಸುತೆಯು = ಮಗಳು ಕಾಲಿಂದಿ ದೇವಿಯ ವಲ್ಲಭನಾದ = ಶ್ರೀಕೃಷ್ಣ ದೇವರ

೬ ರಾಶಿಕೇತನ = ರಾಶಿ = ಮೀನವೇ ಧ್ವಜವಾಗಿವುಳ್ಳ ಕಾಮದೇವರ ಜನಕ (ಪ್ರದ್ಯುಮ್ನ) ತಂದೆಯಾದ ಶ್ರೀಹರಿ ಕೃಷ್ಣ, ಅಂಘ್ರಿ =ಪಾದ, ಕರದಂಡ= ತಾವರೆ ಕಮಲವನ್ನು ಧೇನಿಸುತ್ತೇನೆ. ಶ್ರೀಹರಿಯ ಪಾದಕಮಲವನು ಮನಸ್ಸಿನಲ್ಲಿ ಧ್ಯಾನಿಸುವೆ.

ಕೌಂಡುಣ್ಯನ ಐಶ್ವರ್ಯಮದ ಸಂಸಾರವೃತ್ತಿ

ವಿಧುಕುಲ ಲಲಾಮ ಕೇಳ್ಮುಂದಿನ ಕಥಾ ಕೌತು ।
ಕದ ಸುಸಂಗತಿಯನಾ ಕೌಂಡುಣ್ಯಮುನಿ ತನ್ನ ।
ಸುದತಿಸಹಿತಖಿಳ ಬಂಧುಗಳೊಡನೆ ಸೌಖ್ಯದಿಂದಾಶ್ರಮದೊಳತಿ
ಗರ್ವದಿ ॥

ಬುಧರು ತನಗಿಂದಧಿಕರಾರಿಲ್ಲ ಲೋಕದೋ ।
ಳ್ಗದಿರುಂಟೆ ತಾನೆಸಗಿ ಗುರುತರದ ಜಪತಪದ ।
ವಿಧಿಗೆನುತ ಸೌಭಾಗ್ಯದುಬ್ಬಿನಿಂದಿರುತಿರ್ದನನುದಿನದೊಳೇವೇ
ಳ್ವಿನೋ ॥ ೩ ॥

ಪರಿಪರಿಯ ಸಿಂಗರದಿ ರಾಜಿಸುವ ತೇಜಿಸುವ ।
ತರುಣಿಯೋಳ್ ನಾನಾ ವಿನೋದದಿಂ ಮೋದದಿಂ ।
ಮೆರವ ಮಣಿಖಚಿತ ದಿವ್ಯಾಸನದಿ ಭೂಷಣದಿ ಪರಿಮಳಸುತಾಂಬೂಲದಿ॥
ನಿರುತ ವಿಷಯಾದಿಗಳ ಭುಂಜಿಸುತ ರಂಜಿಸುತ ।
ಪರಿಪೂರ್ಣವಾದ ಸಂಪದದಿಂದ ಮುದದಿಂದ ।
ಬೆರತಿರ್ದನಾ ಮುನಿಪ ಕೌಂಡುಣ್ಯ ಬಹು ಪುಣ್ಯವಂತತಾನೆಂದು
ತಿಳಿದು ॥ ೪ ॥

ಕೌಂಡುಣ್ಯನು ಮರುಳು ಮಾತ್ಸದೋರವಾವುದೆಂದೆನೆ

ಕೆಲಕಾಲ ವೀಪರಿಯೊಳತಿ ಸೌಖ್ಯದಿಂದ ಮಂ ।
ಗಳವಂತನಾಗಿರುತ ಲೊಂದುದಿನ ಕೌಂಡುಣ್ಯ ।
ಲಲನೆ ಶೀಲೆಯ ಬಲದಕೈಗೆ ಬಂಧಿಸಿದರುಣಸೂತ್ರಮಂ ಕಂಡುನಗುತ ॥
ಎಲೆ ತರುಳೆ ದೋರಕವಿದೆಲ್ಲಿಯದು ನೀನಾರ ।
ನೊಲಿಸಿಕೊಳಬೇಕಾಗಿ ಕಟ್ಟಿದಿಯೊ ಮೇಣ್ ತನ್ನ ।
ಶಳದು ವಶ ಮಾಡಿಕೊಂಬುದಕೆ ಕಲ್ಪಿಸಿದಿಯೋ ಪೇಳೆಂದು
(೧)ಬೆಸಗೊಂಡನು ॥ ೫ ॥

ಸೋಲುವರ್ ಪರಪುರುಷರಾಳ್ವಂಗೆ ಮಿಗೆ ಮೆಚ್ಚಿ ।
ದೋಲಿಪ್ಪರಬಲೆಯರ ನಂಬಬಾರದು ಕಪಟ ।

---

೧ ಬೆಸಗೊಂಡನ=ಅಪ್ಪಣೆಮಾಡಿದನು.

ಸೀಲವುಳ್ಳವರವರ ಹೃದಯ ದೋಳ್ಪುದುಗಿರ್ದ (೨)ಮಾಟಮಂ
ತಿಳಿಯಲರಿದು ||
ಹೇಳಿಲೆ (೩)ಮೃಗಾಕ್ಷಿ ಮಾಜದಲೆ ಕೆಂಪಾಗಿರ್ದ |
ನೂಲನ್ಯಾತಕೆ ದಕ್ಷಿಣದ ಕರದಿ ಬಿಗಿದಿರ್ಪೆ |
ಹೇಳು ಹೇಳೆಂದಾ ದುರಾತ್ಮಮುನಿ ಕೇಳಲಾಶೀಲೆ ಪತಿಗಿಂತೆಂದಳು ||೬||

ಶೀಲೆಯು ಅನಂತನ ದೋರ ಮಹತ್ಮೆಪೇಳ್ದಳಿನೆ

ಆರನಂ ವಶಮಾಡಿಕೊಂಬ ದೋರಕವಲ್ಲ |
ಚಾರು ಮಂಗಳ ವ್ರತದ ಸೂತ್ರಮಿದು ಜೀಯ್ಯಾಸುವಿ |
ಚಾರವಂ ಪೇಳ್ವೆ ನೀವೆನ್ನ ವೈವಾಹವಂ ಮಾಡಿಕೊಂಡ್ಡೈ ತರುತಲಿ ||
ದಾರಿಯೋಳ್ ನದಿಯು ಕಂಡಲ್ಲಿ ಸ್ನಾನಕ್ಕಿಳಿಯೆ |
ನಾರಿಯರ್ ನೆರದಸಂತಾಖ್ಯ ವ್ರತ ನೋನುತ್ತ |
ತೀರದೋಳ್ ಕಣ್ಗೆಸೆಯಲಾಸವರ ಮುಖದಿಂದ (೫)ನೋಪೀಯು-
ವಿಧಾನ ಕೇಳ್ದು || ೭ ||
ಹರುಷದಿಂ ಶ್ರೀಮದಾನಂತನ ವ್ರತವನೋತು |
ಪರಮ ಮಂಗಳ ಸುಖಪ್ರದವಾದವ ಸೂತ್ರಂ |
ಕರಕೆ ಬಂಧಿಸುತ ನಿಮ್ಮೊಡನೆ ಸ್ಯಂದನವಡರ್ದಾಶ್ರಮಕ್ಕೈತರಲ್ಕೆ ||
ವರವಿಷ್ಣು ೫ ನೋಂಪಿಯು ಮಹತ್ಮೆಯಿಂದಾಕ್ಷಣದೊ |
ಳುರುತರದ ಸಿರಿ ಪ್ರಾಪ್ತಿಯಾಯಿತಿನ್ನಾರನಂ |
ಮರುಳು ಮಾಡುವ ಧಾರವಲ್ಲಪೆಂದಾ ಶೀಲೆ ಪತಿಗೆ ವಿನಯದಿ
ನುಡಿದಳು || ೮ ||

ಕೌಂಡಿಣ್ಯನು ದೋರ ಹರಿದು ಅಗ್ನಿಯಲ್ಲಿ ಬಿಸಾಟಿದುದು

ಕೇಡಗಾಲಕೆ ಕೆಟ್ಟ ಬುದ್ಧಿ ಬರಲಾ ಮುನಿಪ |
ಕೌಂಡುಣ್ಯ ಸತಿಯ ಮಾತಂ ಕೇಳ್ದು ಮಿಗೆ ರೋಷ |
ಮಾಡುತಾನಂತನೆಲ್ಲಿಯು ಕುಕ್ಷಿತ ಧಾರವೆನ್ನಯ ತಪೋಬಲದಲಿ ||

---

೨ ಮಾಟಮಂ=ಪರರಿಗೆ ಹಾನಿ ಮಾಡುವ ಅಥವಾ ಪರವಶದ ಹೊಂಚು ಕಾರ್‍ಯ.
೩ ಮೃಗಾಕ್ಷಿ=ಎರಳೆಯಂತೆ ಕಣ್ಣುಳ್ಳ.
೪ ನೋನುತ್ತ=ವ್ರತಪೂಜಾ ಮಾಡುತ್ತ.
೫ ನೋಪಿಯು=ವ್ರತಮಹಾತ್ಮೆಯಿಂ.

ಈಡಿಲ್ಲದೈಶ್ವರ್ಯ ಬಂದುದೆನಗಿಂದೆನುತ ।
ಮೂಢಾತ್ಮನಾ ಶೀಲೆ ಕೈಗೆ ಕಟ್ಟಿರ್ದದಾರುಣ ।
ಗಾಢತರ ಸೂತ್ರಮಂ ತರಿದು ಬಿಸುಟಂ ಜರಿವುತುರಿವಗ್ನಿ
ಕುಂಡದೊಳಗೆ ॥ ೯ ॥

ಶೀಲೆಯು ಮರುಗಿ ಅಗ್ನಿಯಿಂದೋರ ತೆಗೆದುದು

ಕೆಟ್ಟೆನಾನಕಟ ಹಾಹಾಯೆನುತ ಭರದಿ ಕರ ।
ವಿಟ್ಟಗ್ನಿಯೊಳಿರ್ದ ಸೂತ್ರಮಂ ತೆಗೆದು ಬೈ ।
(೧)ಚಿಟ್ಟಳಾ ಕ್ಷೀರದೊಳ್ ಶೀಲೆ ಮನದೊಳ್ ಮರುಗಿ
ದುಮ್ಮಾನದಿಂದ ಬಳಿಕ ॥
ಅಟ್ಟಹಾಸದೊಳಾ ದುರಾತ್ಮ ದ್ವಿಜದಾನವ(೨)ಘ ।
ರಟ್ಟನ ತಿರಸ್ಕಾರ ಮಾಡಿದಘದಿಂದ ಸಿರಿ ।
ಬಟ್ಟಬೈಲಾದುದೇಂ ಪೇಳ್ವೆನಾ ಕ್ಷಣದೊಳಗೆ ಧರ್ಮಸುತ
ಕೇಳೆಂದನು ॥ ೧೦ ॥

ಕೌಂಡುಣ್ಯನ ಸಿರಿ ಎಲ್ಲ ಪೋಗಿ ದಾರಿದ್ರ್ಯವು ಒದಗಿತು

ಎಲ್ಲಿರ್ದ ಧನವೆಲ್ಲ ಗುಪ್ತವಾಯಿತು ಕೋಶ ।
ವೆಲ್ಲ ಮಣಿಹೇಮ ಧಾನ್ಯಂಗಳಿಂ ತುಂಬಿರ್ದ ।
ನಲ್ಲಲಿತ (ನಿಲ್ಲಲಿವ) ಮಂದಿರವ (೩)ಸಪ್ತಾರ್ಚಿ ನುಂಗಿದಂ ಗಜ
ಹಯಾರಥವಳಿಗಳು ॥
ನಿಲ್ಲದಲೆ ಪೋದವಾಗಲೆ ಮಾಯವಾಗಿ ತಡ ।
ವಿಲ್ಲದಾ ಗೋಕುಲವ ಕಳ್ಳರೊಯ್ದರ್ ನಿಮಿಷ ।
ದಲ್ಲಿ ಸಂಪ್ರಾಪ್ತಿಯಾಯಿತು ಮಹಾ ದಾರಿದ್ರ ಮುನಿಗೆ
ಸೌಭಾಗ್ಯವಡಗಿ ॥ ೧೧ ॥

---

೧ ಬೈಚಿಟ್ಟಳಾ = ಬಚ್ಚಿಟ್ಟಳು

೨ ಘರಟ್ಟ = ಬೀಸುವ ಕಲ್ಲು ದಾನವಘರಟ್ಟ = ದಾನವರನ್ನು ಬೀಸುವ ಕೊಲ್ಲುವ ಹರಿ.

೩ ಸಪ್ತಾರ್ಚಿ = ಸಪ್ತಜಿಂಹಾ, ಅಗ್ನಿ

### ಕೌಂಡುನಣ್ಯ ದಾರಿದ್ರಾವಸ್ಥೆ ಜನರ ತಿರಸ್ಕಾರ

ಉಡಲುಣಲು ವಸ್ತ್ರಾನ್ನವಿಲ್ಲದಂತಾಯ್ತೊಂದು ।
ಕುಡಿಯಲ್ಪು ಪಾತ್ರೆ ನಿಲಲೊಂದು ನೆಲೆಯಿಲ್ಲದಲೆ ।
ಕಡುಬಡವನಾದುದಂ ಕಂಡಖಿಳ ಬಂಧುಜನ ಮನ್ನಿಸದೆ ನಿಂದಿಸುತ್ತ ॥
ನಡೆ ಹರಿದ್ರೋಹಿ ಪಾಪಿಷ್ಠ ವಿಪ್ರಾಧಮನೆ ।
ಸುಡು ನಿನ್ನ ಜ್ಞಾನವೆಂದಡಿಗಡಿಗೆ ಬೈವುತ್ತ ।
ಬಿಡದೆ ಜಡಮತಿಯು ಜರಿವಂತಾಗ ಸತಿ ತಲೆಯ ಕುಕ್ಕಿದಳ್
ಕೌಂಡುಣ್ಯನಾ ॥ ೧೨ ॥

ಮಂಗಳ ಸುಖ ಪ್ರದಾನಂತನ ಸು ಡೋರಕವ ।
ಭಂಗಮಾಡುತ ಹೇಳನವಗೈದ ಕಾರಣದಿ ।
ಸಂಗಟಿಸಿದಷ್ಟ ದಾರಿದ್ರ ನಿನಗೆಂದು ನಿಶ್ಚಯಮೂರ್ಖ ನೀನೆತಿಳಿಯೆ ॥
ಅಂಗನಾ ಮಣಿ ಶೀಲೆ ಸದ್ವ್ರತವ ನೋತ ಸುಕೃ ।
ತಂಗಳಿಂ ದೊರಕಿದ ಮಹಾ ಭಾಗ್ಯಹೋಗಾಡಿ ।
ಭಂಗಕೊಳಗಾಗಿ (೧)ಬದುಕುವಣ ನಿಷ್ಫಲವೆಂದು ಭಂಗಿಸಿದರಖಿಳ
ಜನರು ॥ ೧೩ ॥

ಅರಿಗಳಾದರ್ ಮಿತ್ರರೆಲ್ಲ ಮಾತಾಡಿಸರ್ ।
ಪೊರೆಯೊಳಿರ್ದ ಬಗೆಯವಲೆ ದ್ವಿಜನ ತಾತ್ಸರದಿ ।
ನೆರೆಹೊರೆಯುದವರವನ ನಿಲವು ಕಂಡರೆ ನೇರದಲೆ ಕಲಹವಂಮಾಳ್ಪರು॥
ಭರತ ಕುಲತಿಲಕ ಕೇಳ್ ಭೂತಿ ವಿರಹಿತನಾದ ।
ನರನ ಲೆಕ್ಕಿಸಲೋರ್ವರವನಿಯೊಳ್ ಜಡತನವೆ ।
ಪರಮ ಸಂಕಟವಲಾ ದೋಷದಿಂದಾರಿದ್ರ್ಯ ನಮುಸಿಪುದು
ಜೀವಿಗಳಿಗೆ ॥ ೧೪ ॥

### ಧನವಂತನ ಗುಣವರ್ಣನೆ

ಕುಲಹೀನನಾಗಲೀ ಮೂಢನಾಗಲಿ ಧರ್ಮ ।
ನುಳಿದ ಖಳ (ಖಿಳ) ನಾಗಲಿ ಕುರೂಪನಾಗಲಿ ಧಾತ್ರಿ ।
ಯೊಳಗವಂ ಸಿರಿವಂತ ನಾಗಿದ್ದರೆಲ್ಲ ಜನರವನ ಮನ್ನಿಸಿಡಿದು ಸತತ ॥

---

೧ ಬದುಕುವಣ_ಬದುಕೋಣ, ಪ್ರಾಣ ಧಾರಣೆಮಾಡಿರುವಿಕೆ

ಬಲುಜ್ಞಾನಿ ಸತ್ಕುಲ ಪ್ರಸೂತ ಪುಣ್ಯಾತ್ಮನತಿ ।
ಚಲುವಂ ಮಹಾದಾನಿ ಸತ್ಪುರುಷನೆಂದವನ ।
ಪೊಲಿಸಿಕೊಂಡಾಡುತ್ತಲುದರ ಪೋಷಣೆ ಮಾಡುತಲಿ ಕಾಲವಂ
ಕಳೆವರು ॥ ೧೫ ॥

ಜ್ಞಾನವೃದ್ಧವ ತಪೋವೃದ್ಧಂ ವಯೋವೃದ್ಧ ।
ನಾನಾಕವಿತ್ವ ವಿದ್ಯಂಗಳಂ ಬಲ್ಲ ಮಾ ।
ಹಾನು ಭಾವರ್ ಸಹಾಸತ್ವದಲಿ ಶೂರರಾದವರೆಲ್ಲರೀಜಗದೊಳು ॥
ಭೂನಾಥ ಕೇಳ್ಮಹಾಧನವಂತನಾಗಿರ್ದ ।
ಮಾನವನ ನಾಶ್ರೈಸಿ ಪಾಲ್ಗೈಸುವರ್ ಬಿಡದೆ ।
ಮಾನವುಳ್ಳವನೆ ಸಿರಿವಂತನದರಿಂದ ವನ ಮನ್ನಿಸುವರಖಿಳಜನರು ॥೧೬॥

ಧನವಿದ್ದರೆ ತ್ಯಾಗ ಭಕ್ತ್ಯಾದಿಗಳು ಬೇಕು

ಸಿರಿಇರ್ದಡೇನು ಹರಿಗುರುಗಳಲಿ ವಿಶ್ವಾಸ ।
ಹಿರಿಯರಲಿ ಭಯಭಕ್ತಿ ಬಂಧು ಜನ ಪಾಲನೆಯು ।
ಧರಣಿಸುರರಲಿ ತ್ಯಾಗ ವಿನಯಗುಣ ಭೂತದಯ ಮಿತ್ರರಲಿದಾಕ್ಷಣ್ಯದಿ॥
ಕರಣಶುದ್ಧಿಗಳಿಂದ ಲೋಕ ಸಮ್ಮತನಾಗಿ ।
ಚರಿಸಿದಡವಂ ಖ್ಯಾತ ನೆನಿಪನಿಹ ಪರದಲ್ಲಿ ।
ದುರುಳತನದಿಂ ನಡೆದಡತಿ ದುಃಖಭೋಗಿಸುತ ದುಷ್ಕೀರ್ತಿಯಂ
ಪಡವನು ॥ ೧೭ ॥

ಸತ್ಪಾತ್ರರಲಿ ದಾನವೇ ಮುಖ್ಯ

(೧)ಆದತ್ತ(ಅದತ್ತ) ದೋಷದಿಂ ದಾರಿದ್ರನಾಗುತ್ತ ।
ಲುಂಡಿಸುವ ದರಿದ್ರದಘದಿಂ ದುರಿತಗಳ ಮಾಪ್ಪ ।
ಲೊದಗುವದು ಪಾಪದೆಶೆಯಿಂ ನೆರಯಲೀ ತೆರದಿ ಜೀವಿಗಳ್
ತೊಳಲುತಿಹರು ॥

ಆದರಿಂದ ಸತ್ಪಾತ್ರರಲಿ ದಾನವಿತ್ತೆನ್ನ ।
ಮುದದಿಂದ ಲಾರಾಧಿಸುತ ಭಾಗ್ಯಮಂ ಗಳಿಸಿ ।
ಮದಗರ್ವನಾಗದಲೆ ಸಾತ್ವೀಕನಾಗಿರ್ದರವರ ನಾ ಪೋಷಿಸುವೆನು॥೧೮॥

---

೧ ಆದತ್ತ=ಶಾಸ್ತ್ರವಿರುದ್ಧವಾಗಿ ಕೊಟ್ಟದಾನ ಅಥವಾ=ಅದತ್ತ=ನಿಷೇಧ ಪದಾರ್ಥಗಳನ್ನು ಉಪಯೋಗವಿಲ್ಲದ ವಸ್ತುಗಳನ್ನು ದಾನಮಾಡಿದರೆ ದೋಷ.

ಶ್ರೀ ಹರಿಯು ನಿಂದಕರಿಗೆ ದುಃಖವೇ ನಿಜ.

ಎನ್ನನಿಂದಿಸಿ ಸೂತ್ರಮಂ ಹರಿದ ಕಾರಣ ದೊ ।
ಳುನ್ನತೈಶ್ವರ್ಯ ಹೋಗಾಡಿ ಕೌಂಡುಣ್ಯ ಋಷಿ ।
ಬನ್ನಬಡುತ ದಾರಿದ್ರನಾದಂ ಜಗದೊಳಾನಾವ ನಂಜರಿಯಲು ॥
ಮನ್ನಿಸುವರುಂಟೆ ನಾನಾವನಂಪಾಲಿಸಲು ।
ಮುನ್ನೆ ಮುಳಿವವರುಂಟೆ ನಾ ಮುಳಿಯೆ ಮುಳಿದಹರ್ ।
ಚನ್ನಾಗಿ ಕೃಪೆಮಾಡೆ ಕೃಪೆಮಾಡುವರ್ಲೋಕ ಪಾಂಡುಸುತ
ಕೇಳೆಂದನು ॥ ೧೯ ॥

ಕೌಂಡಿಣ್ಯ ಋಷಿಯ ಪಶ್ಚಾತ್ತಾಪ

ಶ್ರೀಮಂತನಾಗಿರ್ಪ (ರ್ದ) ಕಾಲದೊಳ್ ಕೌಂಡುಣ್ಯ ।
ನೀ ಮಹೀ ಜನರೆಲ್ಲ ಮನ್ನಿಸುತಲಿರುತಿರ್ಪ ।
ರಾ ಮಹಾ ದಾರಿದ್ರ ಬರೆ ನೆಂಟರವಗೆ ಕಂಟಕರಾಗಿ ನಿಂದಿಸುತಿರೆ ॥
ಆ ಮುನಿಪನತಿ ದುಃಖದಿಂದ ಪೀಡಿತನಾಗಿ ।
ತಾಮನದೊಳರಿಯದಾನಂತನ ಸುದೋರಕವ ।
ಕಾಮಿನಿಯ ವಚನವಂ ಜರಿದು ಖಂಡಿಸಬಹುದೆ ಮೂಢಾತ್ಮ
ನಾನೆಂದನು ॥ ೨೦ ॥

ಭ್ರಷ್ಟನಾದೆನು ವಿಭವದಿಂದ ಕ್ಷಣಮಾತ್ರದೊಳ್ ।
ಗಿಷ್ಟಾರ್ಥವಂ ಕೊಟ್ಟನಂತನಂ ಪಳಿಯಲ್ಕ ।
ನಿಷ್ಟ ಬಂದದು ತನಗೆ ಧಿಟವೆಂದು ತಾನೆನಗಿ ದುರುತರದ
ಕುಹಕದಿಂದ ॥

ಕಷ್ಟಕೊಳಗಾದೆನೆನ್ನಿಂದಲತಿ ಪಾಪಿಷ್ಠ ।
ದುಷ್ಟ ಸ್ವಭಾವ ಶರಿಮಾನವಾಧಮರಿಲ್ಲ ।
ಸೃಷ್ಟಿಯೊಳಗೆಂದವಂ ಬಹಳ ಪಶ್ಚಾತ್ತಾಪದಿಂ ಮರುಗಿ
(೧)ಬಿಸುಸುಯ್ದನು ॥ ೨೧ ॥

ಪ್ರತ್ಯಕ್ಷವಾಗಿರ್ದ ಸಂಪತ್ತುವಂ ನೀಗಿ ।

---

೧ ಬಿಸುಸುಯ್ದನು = ಆಯ್ಯೋ ಎಂದು ಬೆಚ್ಚನ ಉಸಿರು ಬಿಟ್ಟನು

ಮತ್ತತನದಿಂದ ದೈವದ್ರೋಹಕೊಳಗಾಗಿ ।
ಸುತ್ತಲಿಹ ಬಂಧುಜನರಿಂದ ನಿಂದಿತನಾಗಿ ಬದುಕಲಿನ್ನ್ಯಾಕಿಳಿಯೊಳು ॥

ಕೌಂಡುಣ್ಯನು ಮರುಗಿ ಅನಂತನ ಕಾಣ್ಬೆನೆನುತ ಅಡವಿಗೆ ಪೊರಟ

ಉತ್ತುಮ ಶ್ಲೋಕನಂ ಕಾಣ್ಬೆನಲ್ಲದಲೆ (ಡೆ) ಪ್ರಾ ।
ಣ ತ್ಯಾಗಮಂ ಮಾಡಿಕೊಂಬೆನೆನುತಾ ಭೂ ಸು ।
ರೋತ್ತುಮಂ ವೈರಾಗ್ಯಪರನಾಗಿ ಪೊರಮಟ್ಟನಾಲಯುವ
ದುಗುಡದಿಂದ ॥ ೨೨ ॥

ಅಡಿಗಡಿಗನಂತನಂ ವ್ಯಾದೋರ್ವದೆನಗೆನುತ ।
ನುಡಿನುಡಿಗನಂತನಂ ಸ್ಮರಣೆಯಂ ಮಾಡುತಿ ।
ಧೃಡಭಕ್ತಿಯಿಂದ ನಿಶ್ಚಲಹೃದಯನಾಗಿ ಮಿಗೆನಾರ ಬುಧ್ಧಿಯನುತಾಳ್ದು ॥
ಕಡುಖೇದದಿಂದಲನ್ಯೋನ್ಯವ ತೋರದು ನಲೆ ।
ಪುಡುಕುತೆಣ್ದೆಶೆಯೊಳ್ನನಂತದೇವನ ಬಿಡದೆ ।
ನಡದುಬರೆ ಬರೆಮುಂದೆ ತೋರಿದದು ಘೋರಟವಿ ಕೌಂಡುಣ್ಯ
ಮುನಿಯ ಕಣ್ಗೆ ॥ ೨೩ ॥

ಘೋರವಾದ ಮಹಾ ಅಟವಿಯ ವರ್ಣನೆ ವಿವಿಧವಾಗಿ [ ೮ ಪದ್ಯದಲ್ಲಿ ]

ಕ್ರೂರ ಕಂಟಕ ದಮಿತ ಮರಗಳಿಂ ಗುಲ್ಮಲತೆ ।
ಭೂರಿ ಕ್ರಿಮಿಕೀಟ ದಾರುಣ ಮೃಗಂಗಳಿಂ ।
ಚೀರುತಿಹ ನಾನಾ ಭಯಂಕರದ ಖಗಗಳಿಂ ಮೊರಡಿ ಗರ್ತಗಳಿಂದಲಿ ॥
ಘೋರಂಬೊನದ ಪಳ್ಳ ಕೊಳ್ಳಡಂ ಜರಗು ಕಾ ।
ಸಾರ ಡೋಣೆ ಕೆರೆ ದೊರೆಯು ಗಿರಿಗುಹಗಳಿಂದ ದೆಸೆ ।
ದಾರಿದೋರದ ನಿರ್ಜನಾರಣ್ಯಾಭೀಕರದಿ ಕಂಗೊಳಿಸಿತಾ ಮುನಿಪಗೆ ॥ ೨೪ ॥

ಅಡವಿಯ ಗಿಡಗಳ ವಿವರ

ಬೊರೆ (೧)ಬೊಬ್ಬುಳಿಟಣಕು ಮುಳ್ಳಳ್ಳಿ ಕರಿಬೇವು ।

೧ ಬೊಬ್ಬುಳಿ=ಜಾಲಿಮರಗಳು ಟಣಕು=ಒಂದುಗಿಡ ಕಿಂಶುಕ=ಮುತ್ತಲ ಗಿಡ, ಕರವೀರ = ಕಣಗಲೆಯ ಗಿಡ, ಔದುಂಬರ = ಅತ್ತಿಹಣ್ಣಿನಮರ, ಪೂಗ = ಅಡಿಕೆಯ ಗಿಡ, ಅತ್ತಿ = ಆಲದ ಜಾತಿಯ ಒಂದು ಮರ, ಆಮಲಕ=ನೆಲ್ಲೆಯ ಗಿಡ ತಮಾಲ = ಕಿರುನೆಲ್ಲಿಗಿಡ, ಅಶೋಕ=ಮುಳ್ಳು ಮುತ್ತಲಗಿಡ.

ಕಾರಿ ಬಿಲ್ವ ಕಪಿತ್ಥ ತರಿ ಚಳ್ಳಹುಣಸೆ ಕರ ।
ವೀರ ನೀರಲು ಕಲ್ಲುಮಾವು ಸೀಗೆಯು ಬಸರಿ ಪೂಗಮುತ್ತಿತಮಾಲ ॥
ಕೇರಕಿಂಶುಕ ತಾಳ ಚಂದನವ ಶೋಕರಳೆ ।
ಹಾರಿವಾಳೌದುಂಬರಾಮಲಕ ನಿಂಬಾದಿ ।
ಭೂರುಹವನೇಕ ಜಾತಿಗಳಿಂದ ಕಾಂತಾರ ಭರಿತವಾಗೆ ಸದಿರ್ದದು ॥೨೫॥

ಘೋರಾಟವಿಯಂ ಕ್ರೂರ ಮೃಗ ಪಶುಪಕ್ಷ್ಯಾದಿಗಳು

ಶರಭ ಸೈರಭ ಕಲಭ ಶಲಭ ಶಾರ್ದೂಲ ಶಶ ।
ಸುರಭಿ ವನಮಹಿಷಿ ಸಾರಂಗ ಮನುಬೋತ ವೃಕ ।
ಹರಿಣ ಗೋಮಾಯು ಕೇಸರಿ ಖಡ್ಗ ಪರಿ ಪರಿಯ ಭೀಷಣದ
ಮೃಗಗಳಿಂದ ॥
ಗೊರವಕ ಕಪೋತ ಬಕ ಹಂಸ ಶಿಖಿ ಮಯ್ಯೂರ ।
ಹರಿಕಾಕ ಗೃಧ್ರ ಕೋಕಿಲ ಚಕ್ರ ಭೈರುಂಡ ।
ಪರಚಮರಿ ಗೀಜಗಚಕೋರಾದಿ ಪಕ್ಷಿಯಿಂದಾ ವಿಪಿನರಾಜಿಸಿದದು॥೨೬॥

ವಿವಿಧ ವಿಷ ಜಂತುಗಳ ವಿವರಣೆ

ಸ್ಥೂಲಕಾಯದ ಸರೀಸೃಪ ಘೋರ ವಿಷದ ದು ।
ರ್ವ್ಯಾಳಕಾಳಾಹಿ ನಾಗಗಳಿಂದ ಮಿಡತಿಗಳ ।
ಜಾಲದಿಂಡಿಕ್ಷಣ (ಜಾಲದಿಂ ತೀಕ್ಷಣ) ಜಳುಕ ವೃಶ್ಚಿಕ ನಕುಲ ಮೂಷಕ
ಬಿಡಾಲದಿಂದ ॥
ಶಾಲೂರ ವಿವಿಧೋಗ್ರ ಜಂತುಗಳ ಕರ್ಕಶದ ।
ಘೋಳಿಂಬೊಧ್ವಾನದಿಂ ತುಂಬಿರ್ಪದಾವಿಪಿನ ।
ವಾಲಿಗತಿ (ಕತಿ) ಭೀಕರಂ ಕರ್ನಕೆ ಕರೋರ ವಡಿಯಿಕ್ಕಲಸ-
ದಳವಾಗಿರೆ ॥ ೨೭ ॥

---

ಭೇರುಂಡ ಸಿಂಹದ ವೈರಿ= ಖಡ್ಗ=ಕತ್ತಿ, ಗೇಂಡಾಮೃಗ = ಶಿಖಿ = ನವಿಲು ವಾಲಿ= ಆಲಿ ಕಣ್ಣಿಗೆ, ಚಮರಿ= ಕಾಡಾಕಳು ಗೀಜಗ=ಗೂಡು ಕಟ್ಟುವ ಪಕ್ಷಿ, ತಾಳೆಗುಬ್ಬಿ,

ಸರೀಸೃಪ= ಹಾವು, ಚೇಳು, ಶಾಲೂರ= ಕಪ್ಪೆ, ಜಳೂಕ= ಜಿಗಳೆ

**ಮರ್ಕಟ ರಿಕ್ಷಾದಿ ಕರಿಣಿ ಮೃಗಗಳ ಆರ್ಭಾಟದಿಂದ ಬೆದರುವಿಕೆ**

(೧)ವಿಟಪಿವಿಟಪಂಗಳಿಂ ಪುಟನೆಗದು ಚೀರುತ್ತಾ ।
ರ್ಭಟಗೈವುತುತ್ಕಟದಿ ಕಟಕಟನೆ ಪಲ್ಮುರಿವ ।
ಚಟುಲ ಮರ್ಕಟ ಕಟಕದಿಂದ ಸಂದಟಿತ (೨)ವಟಜಟವಿಡಿದು
ನಟಿಸುತುಲಿವಾ ॥
ಕುಟಿಲ (೩)ರಿಕ್ಷಂಗಳಿಂ ಮಿಟಮಿಟನೆ ಕಣ್ಬಿಡುವ ।
ಕಿಟಿ (ಕಟಿ) ಕರಿಣಿ ಮೃಗಗಳಿಂ ಭಟಭಟತ್ಕಾರನವ ।
ಘಟಿತ ಘೋರಟವಿ ಸಂಕಟಗೊಳಿಸಿತಾ ಋಷಿಯ ತುಟಿ ವಣಗಲು
ಪಟಳದೊಳು ॥ ೨೮ ॥

**ಶ್ಲೇಷಾಲಂಕಾರಯುಕ್ತ ಅಡವಿ ವರ್ಣನೆ**

(೧)ಕೌರುವನ ಸಭೆಯಂತೆ ಶಕುನಿಯುತವಾಗಿಹದು ।

---

ಪದ್ಯ ೨೮— (೧) ವಿಟಪಿ = ಗಿಡ, ಮರ (೨) ವಟಜಟ= ಆಲದಮರದ ಬೇರಿನಲಿ ಜೋತುಬಿದ್ದ (೩) ರಿಕ್ಷ = ಕರಡೆಗಳು

ಪದ್ಯ ೨೯— (೧) ಶ್ಲೇಷಾಲಂಕಾರ ವರ್ಣನೆ

ಕೌರುವನ ಸಭೆಯಲ್ಲಿ ಶಕುನಿ ಇದ್ದಂತೆ= ಅರಣ್ಯವು ಶಕುನಿ ಹಕ್ಕಿಗಳಿಂದ ಕೂಡಿತ್ತು

ಪಾತಾಳದಿ ಭೋಗಿಸರ್ಪವಿದ್ದಂತೆ = ಕಾಡಿನಲ್ಲಿ ಭೋಗಿ ಸರ್ಪಗಳಿದ್ದವು

ವೀರನು ಸುರಗಿಧರ ಹಿಡಿದಂತೆ= ವೀರ ಚೂರಿ ಖಡ್ಗ - ಅರಣ್ಯದಿ ಸುರಗಿ ಧರ ಪರ್ವತ ಗಿರಿಗಳಿದ್ದವು

ನಭದಲ್ಲಿ-ಕವಿ ಶುಕ್ರನಿದ್ದಂತೆ= ಅರಣ್ಯದಿ-ಕವಿ = ನೀರಹಕ್ಕಿ ಆನೆಗಳಿಂದ ಕೂಡಿತ್ತು

ಧಾರುಣಿಸುರ-ಬ್ರಾಹ್ಮಣನ-ಶಿಖಿ ಜುಟ್ಟಿಲುಗಳಿದ್ದಂತೆ(ಚಂಡಿಕೆ)=ಬ್ರಾಹ್ಮಣನಂತೆ, ಅರಣ್ಯದಿ ಶಿಖಿ=ನವಿಲುಗಳು, ಕಾಡಾಗ್ನಿಯಿತ್ತು

ವಾರಿನಿಧಿ–ಸಮುದ್ರದಲ್ಲಿ–ವಿದ್ರುಮ ಹವಳವಿರುವವು = ಅರಣ್ಯದಲ್ಲಿ – ವಿದ್ರುಮ-ಬಳ್ಳಿಲತೆಗಳಿಂದ ಕೂಡಿತ್ತು

ಮಾವತಿಗನಂತೆ, ಪುನ್ನಾಗ ದೊಡ್ಡಆನೆ ಪಾಲನ ಮಾಡ್ವ ಮಾವತಿಗನಂತೆ = ಅರಣ್ಯವು ಪುನ್ನಾಗ = ಬಿಳಿ ಆನೆಗಳು ಹಾವು, ಅಡವಿ ಕೋಣ ಸುರಹೊನ್ನೆ ಮೊದಲಾದವುಗಳಿಗೆ ಅರಣ್ಯವು ರಕ್ಷನಾಗಿದ್ದಂತೆ ಇರುವದೆಂದು

ಚಾರುಪಾತಾಳದೊಳ್ ಭೋಗಿಮಯುವಾಗಿಹುದು ।
ವೀರನೋಲ್ ಸ(ಸು)ರಗಿ ಧರನಾಗಿಹದು ನಭದಂತೆ ಕವಿ
ಶೋಭಿವಾಗಿಹ್ಯದು ॥
ಧಾರುಣೀ ಸುರನಂತೆ ಶಿಖಿಯುಕ್ತವಾಗಿಹದು ।
ವಾರಿ ನಿಧಿಯಂತೆ ವಿದ್ರುಮದಿಂದ ರಾಜಿಪದು ।
ಧೀರ ಮಾವತಿಗರೋಲ್ ಪುನ್ನಾಗವಾಲನಾಗೆಸಗಿರ್ದಟವಿ
ಕಣ್ಗೆ ॥ ೨೯ ॥

**ಅಟವಿ ವಿಷ್ಣುವಿನಂತೊಪ್ಪಿರುವದೆಂಬ ಅಲಂಕಾರ ವರ್ಣನೆ**

(೨)ಅಮಿತಾರ್ಕ ತೇಜ ಸಂಯುಕ್ತವಾದದರಿಂದ ।
ಕಮಲ ಸರ ಚಕ್ರ ವನಮಾಲ ತಾಳ್ದುದರಿಂದ ।
ಸುಮನ ಹರಿಶಿವ ಬ್ರಹ್ಮ ಸೋಮ ಕುಜ ಖಗಪರಿಂ ಸೇವ್ಯ
ನಾದುದರಿಂದಲಿ ॥
ವಿಮಲತರವೇಣು ಗೋತ್ರವ ಧರಿಸಿದದರಿಂದ ।
ಕಮನೀಯ ಗೋಕುಲ ನಿವಾಸನಾದುದರಿಂದ ।
ರಮರಪತಿ ವಿಷ್ಣು ಧಿಟ ತಾನೆಂಬ ಪೆಂಪಿಂದ ಕಾಂತಾರ
ರಾಜಿಸಿದದು ॥ ೩೦ ॥

---

ಪದ್ಯ ೩೦— (೨) ಇನ್ನು ಅಡವಿಯನ್ನು ವಿಷ್ಣುವಿನಂತೆ ಇತ್ತೆಂದು ವರ್ಣಿಸುತ್ತಾನೆ.

ವಿಷ್ಣುವು = ಅಮಿತಾರ್ಕ ತೇಜಸ್ಸಿನಿಂದ ಯುಕ್ತನಾಗಿರುವಂತೆ ವನದಲ್ಲಿ ಅನೇಕ ಅರ್ಕ ಪತ್ರಾದಿ ಎಕ್ಕೆಗಡಿಗಳ ಮೇಲೆ ಸೂರ್ಯಪ್ರಭಾ ಕಾಂತಿ ಇತ್ತು.

ವಿಷ್ಣುವು = ಕಮಲಸರ, ವನಮಾಲ ಚಕ್ರತಾಳ್ದಂತೆ – ವನವು ಕಮಲ ದಿಂದ ತುಂಬಿದ ಸರೋವರದಿ ಸಾರಸ ಪಕ್ಷಿ ಚಕ್ರವಾಕ ಪಕ್ಷಿಗಳಿಂದ ಕೂಡಿದ್ದು ವನಮಾಲಾ, ಗಿಡಗಳ ಸಮೂಹಗಳಿಂದ ಕೂಡಿದ್ದು ಶೋಭಾಮಯುವಾಗಿತ್ತು.

ವಿಷ್ಣುವು = ಸುಮನ-ಮನೋಹರವಾದ ಸರ್ವಜ್ಞ ದೇವನಾದ ಹರಿಯು ಶಿವ - ಬ್ರಹ್ಮ - ಸೋಮ - ಕುಜ ಖಗಪಗರುಡಾದಿಗಳಿಂ ಸೇವ್ಯ

ಘೋರಾಟವಿಯು ಭಯಗೊಳಿಸಿತೆನೆ

ಪ್ರಳಯ ಕಾಲದ ಮಾರಿಯೋ ಭಯಂಕರವಾದ ।
(೧)ಹಳುವುದಾಕಾರದಲಿ ನಿಲಿಸಿದೋ ಮೃತ್ಯುವಿನ ।
ನಿಳಯವೋ ಕೌಂಟುಣ್ಯಗಡರಿದ ದರಿದ್ರವೇ ಕಾಡಾಗಿ ತೋರಿತೆನಲು ॥
ಸುಳಿವ ಖಗಮೃಗ ದುಷ್ಟಜಂತುಗಳದಲ್ಲದಲೆ ।
ಉಲುಹುದೋರದು ನರರ ಕುಜಲತೆಯ ಪರ್ಬಿರ್ದ ।
ಮಲೆಯಂಧಕಾರದಿಂ ರವಿರಶ್ಮಿ ಕಾಣಸದ ಕಾನನಂ ಕಣ್ಗೆಸೆದದು ॥೩೧॥

---

ಪದ್ಯ ೩೦ ರಿಂದ ನಾದಂತೆ ವನವು ಸಹ = ಹರಿ = ಸಿಂಹ, ಹಾವು,
ಕುದುರೆಕಪ್ಪೆ ಮುಂತಾದ ಪ್ರಾಣಿಗಳಿಂದ
ರುದ್ರ, ಶಿವ = ಕರಿ - ಕಾಡಾನೆಗಳಿಂದ ಕೂಡಿದ್ದು ವನವು
ಬೊಮ್ಮ ಬ್ರಹ್ಮ – ಬ್ರಾಹ್ಮೀಲತೆಗಳಿಂದ
ಚಂದ್ರ - ಸೋಮ = ಸೋಮಲತೆ ಬಳ್ಳಿಗಳಿಂದ
ಮಂಗಳ - ಕುಜ = ಭೂಮಿಯಲ್ಲಿ ಪುಟ್ಟಿದ ಅನೇಕ ತರದ ಮರ
ಕಿರಾತ, ಪುಲಿಂದರಿಂದ
ಗರುಡ - ಖಗ = ಗರುಡ ಪಕ್ಷಿಗಳಿಂದ ಸೇವ್ಯವಾಗಿತ್ತು
ವಿಷ್ಣು = ವೇಣುಧರ ಕೊಳಲು ವೇಣು = ಪೊಳ್ಳಾದ ಬಿದುರುಗಳಿಂದ
ವನವು ಕೂಡಿದ್ದು
ಗೋವರ್ಧನೋದ್ಧರ=ವಿಷ್ಣು ಗೋತ್ರ=ಪರ್ವತಗಳನ್ನುಧರಿಸಿದ್ದು
ವಿಷ್ಣು = ಕಮಸೀಯ - ಸುಂದರವಾದ ಗೋಕುಲ ನಿವಾಸಹಂತೆ =
ವನವು ಸಹ - ಮನೋಹರವಾಗಿ ಗೋಕುಲ ನಿವಾಸ = ಕಾಡಾ
ಕಳ ಹಿಂಡು ಕಾಡಾಕಳ ಹಟ್ಟಿಗಳಿಂದ ತುಂಬಿದದು
ದೇವತೆಗಳ ಒಡೆಯನಾದ ವಿಷ್ಣುವೇ ತಾನೆಂಬಂತೆ ಪೆಂಪಿನಿಂ =
ಹೆಚ್ಚಾಗಿ ಶ್ರೇಷ್ಠವಾಗಿ, ಕಾಂತಾರ = ಅಡವಿ ರಾಜಿಸಿದದು
ಶೋಭಿಸಿದೆಂಬ ಅಲಂಕಾರ ವರ್ಣನೆ.

---

ಪದ್ಯ ೩೧— (೧) ಹಳುವು = ಕಾಡು ಅರಣ್ಯ

ಕೌಂಡುಣ್ಯನು ಮಹಾಟವಿಲಿ ಅನಂತನಂ ಪುಡುಕುವಿಗೆ

ಕಲ್ಲು ಮುಳ್ಳಿಡಿದಿಸಿತು ಕರ್ಕಶದ ವನದೊಳಗೆ ।
ಮೆಲ್ಲ ಮೆಲ್ಲನೆ ದ್ವಿಜಂ ಭೂಪಕೇಳ್ ತೊಳಲುತ್ತ ।
ನಿಲ್ಲದೆಣ್ದೆಸೆಯೊಳಗನಂತನಂ ಪುಡುಕುತ್ತ ಘೋಳಿಡುತ ಬಾಯಿ
ಬಿ (ವಿ)ಡುತ್ತಾ ॥
ಸೊಲ್ಲು ಸೊಲ್ಲಿಗೆ ದೇವನಂ ಕೂಗಿ ಕರವುತ್ತ ।
ಚೆಲ್ಲುವಶ್ರುಗಳಿಂದ ನಡವು ತ್ತೈತಿರೆ ಮುಂದೆ ।
ನಿಲ್ಲದೇ ಮಹಾಲೋಭಿಯೆಂತೊಂದು ಚೂತತರು ಕಂಗೊಳಿಸಿತ
ಗ್ರತೆಯೊಳು ॥ ೩೨ ॥

ಚೂತ ವೃಕ್ಷ ನೋಡುವಿಕೆ

ಛಂದವಾಗಿರ್ದ ಪಲ್ಲವ ಪತ್ರ ಪುಷ್ಪಂಗ ।
ಳಿಂದ ಬಾಗಿರ್ದ ತನಿಪಣ್ಗಾಯಿ ಗೊಂಚಲ್ಗ ।
ಳಿಂದ ಉನ್ನತವಾದ ನೇಕಶಾಖೆಗಳಿಂ ನೆಳಲ್ಗಪಿದ ಗುಂಪಿನಿಂದ ॥
ವಂದು ಕ್ರಿಮಿಕೀಟ ಮೃಗಪಕ್ಷಿಗಳ್ ಮುಟ್ಟದಿಹ ।
ಸುಂದರ ರಸಾಲ ವೃಕ್ಷವ ಕಾಣು ತದರೆಡೆಗೆ ।
ಬಂದು ನಿಂದಾಪಾರ್ವ ದೈನ್ಯತರ ವಚನದಿಂ ಬೆಸಗೊಂಡನೀ
ತರದೊಳು ॥ ೩೩ ॥

ಚೂತ ವೃಕ್ಷಕೆ ಅನಂತನಂ ನೋಡ್ದನೆನೆ ಪ್ರಶ್ನೆ

ಎಲೆ ಭೂಜ ರಾಜ ಚೂತ ದ್ರುಮವೆ ಕೇಳ್ಭುವನ ।
ದೊಳು ಶರಣ ಜನರಿಂಗೆ ಸುರಭೂಜ ನಾಗಿರ್ದ ।
ಜಲರುಹೋಪಮ ನಯನನಂತ ದೇವನನಿಂದು ಕಂಡಿದ್ದರೀ
ಕ್ಷಣದೊಳು ॥

ಮಾವಿನ ಮರದಲ್ಲಿಪ್ಪ ಸ್ಥಾವರ ಜೀವದುತ್ತರ

ತಿಳುಹುವದು ತನಗೆತ್ತ ಪೋದುದಂ ನೀನೆಂದು ।

---

**ಘೋಳಿಡು=ದುಃಖದಿಂದ ಒದರು ಸೊಲ್ಲುಸೊಲ್ಲಿಗೆ=ನುಡಿನುಡಿಗೆ ಅಡಿಗಡಿಗೆ, ತನಿ=ಸೀಯಾದ-ಪಣ್ಗಾಯಿ = ಹಣ್ಣಾದ ಕಾಯಿ ರಸಾಲವೃಕ್ಷ = ಮಾವಿನಮರ. ಇಳೆಯ ಬೆಳೆಯ=ಭೂಮಿ. ದೇವತೆ, ಸುರ ಭೂಸುರ ಬ್ರಾಹ್ಮಣ ಮಹಿ ಜೋತ್ತಮ=ಮಹಿಜ, ಮರಶ್ರೇಷ್ಠ**

ಹಲುಬಲ್ಕನಂತನಂ ತಾಕಾಣಲಿಲ್ಲ ವೆಂ ।
ಓಳೆಯು ಬೋಳೆಯಗೊಲಿದು ಶಿರವನಲ್ಲಾಡಿಸುತ ಮಹಿಜೋತ್ತಮಂ
ನುಡಿದದು ॥ ೩೪ ॥

ಗೋವನ್ನು ಕಂಡು ಅನಂತನ ಕಾಣ್ಡೆನೆಂಬ ಪ್ರಶ್ನೆ

ಮೂಮರದ ವಚನಮಂ ಕೇಳ್ದು ದುಃಖಿತನಾಗು ।
ತಾ ಮುನಿಪನಲ್ಲಿಂದ ಸಾಗುತತಿ ದೂರಬರೆ ।
ಕೋಮಲ ಸುವತ್ಸಸಹಿತೆದೆಮಟ್ಟೆ ಪುಲ್ಲಿನೋಳ್ ಸಂಚರಿಸುತಲಿ
ಬಾಯಿಗೆ ॥

ಕಾಮಿಸಿದರೊಂದು ತೃಣ ನಿಲಕದಿಹ ಗೋವನಂ ।
ಭೂಮೀಶ ಕೇಳ್ಕಾಣುತಲಿ ಸುರಭಿ ಭಕ್ತರ್ಗೆ ।
ಕಾಮಧೇನಾಗಿರ್ದ ನಂತನಂ ಕಂಡಿದ್ದರರುಹುವದು ತನಗೆಂದನು ॥೩೫॥

ಗೋವು ಅನಂತನ ಕಾಣಲಿಲ್ಲವೆಂದುತ್ತರವಿತ್ತದು

ಭೂಸುರೋತ್ತಮ ನುಡಿದುದಂ ಕೇಳುತಾ ಧೇನು ।
ಈ ಸಮೀಪದೊಳನಂತನಂ ಕಾಣೆ ನಾನೆಲ್ಲಿ ।
ದೋಷಿಗಳ ಕಣ್ಗೆ (೧)ದೂರ್ವಾದಳಶ್ಯಾಮ ಗೋಚರಿಸುವನೆ ದ್ವಿಜ
ಹೇಳೆನೆ ? ॥

ಆಶೆ ವರ್ಜಿತವಾದ ಗೋವಾಕ್ಯ ಕರ್ಣದೋಳ್ ।
ಸೂಸಲತಿ ಕಂಗೆಟ್ಟು ತಾನಾವ ತಾಣದಲಿ ।
ವಾಸುದೇವನನರಸಲಕಟೆಸುತ ಕೌಂಡುಣ್ಯನಲ್ಲಿಂದ ನಡೆತರುತಿರೆ ॥೩೬॥

ಮುಂದೆ ಘೂಳಿಯ ದರ್ಶನ ವೃಷಭ ಬಣ್ಣನೆ

ಉರಗ ಭೂಷಣ ಚರ್ಮ ವಸ್ತ್ರ ಭಸ್ಮದ ಲೇಪ ।
ಶಿರಮಾಲೆಗಳನಾಂತು ಭಿಕ್ಷಾಟನಂ ಮಾಳ್ಪ ।
ಗರಳ ಕಂಠದ ಶೂಲೆಯಂ ಪೊತ್ತು (ಹೊತ್ತು) ತಿರುಗುವದು
ಪರಿಹಾಸ್ಯವೆನಗೆನುತಲಿ ॥

ಭರದಿಂದ ಹರನ ಬಿಟ್ಟೀ ವನದಿ ಸುಖದಲ್ಲಿ ।
ಚರಿಸಲ್ಕೆ ಬಂದಿಹನೊ ನಂದೀಶನೆಂಬಂತೆ ।
ಕರಿಕೆ ನಾಟದ ಕೆಟ್ಟ (೨)ಶಾಡ್ವಲದಿ ನಿಂದಿರ್ದ ವೃಷಭನಂ ಕಂಡು
ಮುನಿಪಾ ॥ ೩೭ ॥

---

೧ ದೂರ್ವಾದಳಶ್ಯಾಮ= ಕರಿಕೆದಳದಂತೆ ಕಪ್ಪುವರ್ಣವುಳ್ಳ–ಕೃಷ್ಣ ತಾಣ= ಸ್ಥಳ
೨ ಶಾಡ್ವಲ = ಶಾದ್ವಲ = ಹುಲ್ಲು ಕರಿಕೆ ಬೆಳೆದ ಭೂಮಿ

### ವೃಷಭವೂ ಅನಂತನ ಕಾಣಲಿಲ್ಲೆಂಬ ಉತ್ತರ

ಕಾಣುತಲಿ ಗೋಸ್ವಾಮಿ ವೃಷಕೇತು ತಾತ ಕ ।
ಲ್ಯಾಣದಾಯಕನಾದನಂತಮೂರ್ತಿಯ ನಾವ ।
ತಾಣದೊಳಗಾದರಂ ಕಣ್ಗೆ ಗೋಚರಿಸಿದ್ದರೆನಗೀಗ ಪೇಳ್ವದೆನಲು ॥
ಕ್ಷೋಣಿ ಸುರ ಕೇಳನಂತನನೆಲ್ಲಿ ಕಂಡಿಲ್ಲ ।
ಕ್ಷೀಣ ಚೇತನನಾಗಿ ನೀರು ಮೇವಿಲ್ಲದಲೆ ।
ಪ್ರಾಣ ಗೋಣಿಲಿ ಪಿಡಿದು ಸವಳ ಭೂಮಿಯ ಮೇಲೆ ನಿಂತಿರ್ಪೆ
ನಾನೆಂದನು ॥ ೩೮ ॥

### ಕೌಂಡುಣ್ಯಸಿಗೆ ಪುಷ್ಕರಣಿದ್ವಯ ದರ್ಶನ

ಗೋಪತಿಯ ವಾಕ್ಯಮಂ ಕೇಳುತಾ ಕೌಂಡುಣ್ಯ ।
ತಾಪಕೊಳಗಾಗುತಿನ್ನೇನು ಗತಿ ತನಗ್ಯಾಕೆ ।
ರೂಪದೋರದಲಡಗಿಕೊಂಡಿನಿತು ಬಳಲಿಸುವದುಚಿತವೇ ದೀನಬಂಧು ॥
ಪಾಪಿಷ್ಠನವಗುಣವನೆಣಿಸದಿರನಂತನೆಂ ।
ದೀ ಪರಿಯೊಳಳಲುತ್ತಲಟವಿಯೊಳ್ ಬರುತಿರ ।
ಲ್ಕಾ ಪರಮ ರಮ್ಯದ್ವಯ ಪುಷ್ಕರಣಿಗಳ್ಕಂಡೆ ಕಂಗೊಳಿಸಿದವು
ಪ್ರಭೆಯಲಿ ॥ ೩೯ ॥

### ಕಾಸಾರ ಕೊಳಗಳ ಶೋಭಾಲಂಕಾರ ವರ್ಣನೆ ೪ ಪದ್ಯ

(೧)ಶಶಿಕಾಂತ ಶಿಲೆಗಳಿಂ ತೊಳಗುತಿಹ ಸೋಪಾನ ।
ಪ್ರಸರದಿಂ ವಿಮಲ ಸ್ವಾದೋದಕ ತರಂಗಳ ।
(೨)ವಿಸರದಿಂ ನೈಕತ (೩)ಮೃಣಾಳಂಗಳಿಂ ಪೊಳೆವ ಮಚ್ಛಕಚ್ಛಪಗಳಿಂದ
ದೆಶೆದೆಶೆಗೆ ಬೀರ್ವ ಪೊಂದಾವರೆಯ ಸುರಭಿಯಿಂ ।
ದೆಸೆವ ತಂಗಾಳಿಗಳ ತಂಪಿನಿಂ ಮಕರಂದ ।
ರಸವನಾಸ್ವಾದಿಸುವ ಭೃಂಗಗಳ ಸಂಗದಿಂ ಕಣ್ಗೆಸೆದವಾ
ಕೊಳಗಳು ॥ ೪೦ ॥

---

ಪದ್ಯ ೪೦— ೧ ಪ್ರಸರ=ವಿಸ್ತಾರ=ಸಮುದಾಯ ೨ ವಿಸರ=ಸಮೂಹ
೩. ಮೃಣಾಳಗಳ=ತಾವರೆಗಳಿಂ

ಕಲಹಂಸ ಸಾರಸ ಚಕೋರದಿಂ ಕೀರದಿಂ ।
ಕಲಕಲ ಧ್ವನಿಯ ಕಾರುಂಡದಿಂ ತಂಡದಿಂ ।
ಕಲತು ಬೆರ ಬೆರವ ಬಕ ಕೋಕಿಯಂ ಕೇಕಿಯಿಂದುಲಿವ
ನೀರ್ವಕ್ಕಿಯಿಂದ ॥
ಸುಳಿ ಸುಳಿವ ಜಲಚರ ಪ್ರಾಣಿಗಳ ಶ್ರೇಣಿಗಳ ।
ಚಲುವಿಕೆಯ ಕುಮುದ ಕಲ್ಹಾರದಿಂ ಸಾರದಿಂ ।
ಬೆಳದಬ್ಜ ಕುಸುಮಗಳ ಜಾಲದಿಂ ಕೂಲದಿಂ ದ್ವಯಸರಸಿ
ಗಳ್ಮೆರೆದವು ॥ ೪೧ ॥

ಶ್ಲೇಷಾಲಂಕಾರ ವರ್ಣನೆ

(೧)ಹರಿಯಂತೆ ಚಕ್ರಧರನಾಗಿಹದು ಹರನಂತೆ ।
ಪರಿಪೂರ್ಣ ವಿಷಕಂಠನಾಗಿಹದು ಬ್ರಹ್ಮನಂ ।
ತರಸಂಚೆಯುಕ್ತವಾಗಿರುತಿಹದು ವ್ರಜದಂತೆ ಸುರಭಿಮಯವಾಗೀಹದು
ಸ್ಮರನಂತೆ ಮೀನಾಂಕನಾಗಿಹದು ದಿವಿಯಂತೆ ।
ನಿರುತ ಸುಮನೋದ್ಭಾಸವಾಗಿಹ್ಯದು ದಿವದಂತೆ ।
ಹರಿಯಿಂದ ಪರಿಶೋಭ ವಾಗಿರ್ಪನಾ ವಿಮಲ ಸರಸಿಗಳ್
ಮುನಿಯ ಕಣ್ಗೆ ॥ ೪೨ ॥

---

ಕೀರ=ಗಿಳಿ ೫ ಕಾರಂಡದಿಂ ಬಾತುಕೋಳಿ = ಕಾಗೆಯಂತೆ ಇರುವ ಪಕ್ಷಿ ಕೇಕಿ=ನವಿಲು ೭ ಕೋಕ=ಚಕ್ರವಾಕಪಕ್ಷಿ ಅಥವಾ ಕೋಗಿಲೆ

---

ಪದ್ಯ ೪೨–

**ಹರಿವಿಷ್ಣುವಿನಂತೆ— ಸರಸಿ–ಸರೋವರಗಳು ಸಹ**

ಹರಿಯಂತೆ ಚಕ್ರಧರನಾಗಿಹದು — ಸರಸಿಗಳಲ್ಲಿ ಚಕ್ರವಾಕ ಪಕ್ಷಿಗಳು ಇರುವವು
ಹರನಂತೆ ವಿಷಕಂಠ — ವಿಷಕಂಠ=ನೀರಿನಿಂದ ಪರಿಶೋಭಿ
ಬ್ರಹ್ಮನ ಅರಸಂಚೆ(ರಾಜಹಂಸ)–ಅರಸಂಚೆ ರಾಜಹಂಗಳಿರುವವು
ವ್ರಜ=ಗೋಕುಲದಂತೆ ಸುರಭಿ (ಆಕಳು)– ಸುರಭಿ=ಹೂಗಳ ಪರಿಮಳ ದಿಂದ ಯುಕ್ತವಾಗಿಹವು.

ಅಪ್ಸರೆ ಸ್ತ್ರೀಯಂತೆ ಕೊಳಗಳೆಸೆದವೇ ?

(೨)ಮರಿದುಂಬಿ ಕುರುಳಿನಿಂ ಪೊಳೆವ ಮೀನಾಕ್ಷಿಯಿಂ ।
ದರಳಿದಾವರೆ ಮೊಗದ ಕಂಬುಗ್ರೀವದ ಕೋಕ ।
ಗುರು ಕುಚದ ಕಿರುದೆರೆಯ ತ್ರಿವಳಿಗಳ ಸುಳಿನಾಭಿ (೪)
ಶೈವಾಲ ಕೋಮಾಳಿಯಾ ॥
ವರಪುಳಿನ ಜಘನದ ಮೃಣಾಳ ಮಧ್ಯದ ಹಂಸ ।
ಚರಣಗತಿ ತೀಳಿಯಜಲ ತನುಛವಿಯ ಸೊಬಗಿನಿಂ ।
ಮೆರವಪ್ಸರಂಗನಾ ರೂಪದಂತೆ ಸದವಾಕಾಸಾರಯುಗ ಮುನಿಪಗೆ ॥೪೩॥

---

ಸ್ಮರನಂತೆ=ಕಾಮನಂತೆ ಮೀನಾಂಕ (ಹಿಂದಿನಿಂದ ಪದ್ಯ ೪೨)
ಮೀನ ಧ್ವಜವಾಗಿಹಂತೆ = ಮೀನಾಂಕ=ಅನೇಕ ತರದ ಮೀನ ಗಳಿಂದ ಯುಕ್ತವಾಗಿರುವದು.
ದಿವಿಯಂತೆ= ಸ್ವರ್ಗದಂತೆ ಸುಮನೋದ್ಭಾಸ - ದೇವತೆಗಳಿಂದ ಶೋಭೆ.
ಸ್ವರ್ಗದಂತೆ ಅನೇಕ ಸುಮನೋದ್ಭಾಸ ಪುಷ್ಪಗಳ ಶೋಭೆ
ದಿವದಂತೆ=ಆಕಾರದಂತೆ ಹರಿ-ಸೂರ್ಯನಶೋಭೆ = ಸರೋವರ ನೀರಿ ನಲ್ಲಿಯೂ ಸಹ ಹರಿ=ಸರ್ಯಛಾಯಾ ಪ್ರಕಾಶಮಾನವಾಗಿರುವವಲ್ಲದೆ ಹರಿ=ನೀರು ಹಾವುಗಳು ಹರಿ=ಕಪ್ಪೆಗಳಿಂದ ಶೋಭಿಸಿದ ಸರೋವರಗಳ ಶ್ಲೇಷಶಬ್ದಾಲಂಕಾರ ವರ್ಣನೆ

---

ಪದ್ಯ ೪೩–

ಸರೋವರಗಳು ಅಪ್ಸರಾಸ್ತ್ರೀಯಂತೆ ಇರುವ ವರ್ಣನೆ

**ಅಪ್ಸರೆಯ ಅಂಗಗಳಲ್ಲಿ ಸರೋವರಗಳಲ್ಲಿ**

೧ಮರಿದುಂಬಿ=ಚಿಕ್ಕಗುಂಗುರುಳಗಳಂತೆ=ಕಪ್ಪುಮುಂಗೂದಲು ಕುರುಳ= ದುಂಬಿ ಮರಿದುಂಬೆಗಳು ಸರೋವರ ಸ್ತ್ರೀಯಳಿಗೆ ಮುಂಗುರುಳಾಗಿದ್ದವು.
೨ಪೊಳೆವ–ಮೀನಾಕ್ಷಿಯಿಂ=ಸ್ತ್ರೀಯಳಹೊಳೆವಚಂಚಲವಾದಕಣ್ಣುಗಳು=, ಸರೋವರದಿ ಚಲಿಸುವ ಅನೇಕ ತರದ ಮೀನುಗಳೇ ಸರೋವರ ಸ್ತ್ರೀಗೆ ಆಕ್ಷಿಅಪ್ಸರೆಯಳ ೩ಮೊಗವು ಮುಖವುಅರಳಿದ ಕಮಲದಂತೆ=ಸರಸಿಗಳಲ್ಲಿ ಅನೇಕ ಅರಳಿದ ಕಮಲಗಳ ಸಮೂಹವೇ ಸರೋವರ ಸ್ತ್ರೀಗೆ ಮುಖ ವೆಂಬುವಂತೆ ೪ ಅಪ್ಸರೆ ಸ್ತ್ರೀಯಳ ಕಂಠ = ಕಂಬುಗ್ರಿಗ ಶಂಖದಂತೆ

ಕುತ್ತಿಗೆ=ಸರಸಿಗಳಲ್ಲಿ ಕೋಕ-ಚಕೋರ ಪಕ್ಷಿಗಳೇ ಇರುವವು ಇವುಸರಿಸಿ ಸ್ತ್ರೀಯ ಕಂಬುಕಂಠವೆಂಬುವಂತೆ ಭಾಸ. ೫ ಅಪ್ಸರೆಯುಳ = ಗುರುಭಾರವಾದ ಕುಚಗಳು, ಕಿರುದೆರೆಯು = ಸರಸಿಗಳಲಿ=ಕಿರುದೆರೆಯೆ = ತರಂಗ ಭಂಗವೀಚಿಗಳೇ ಸರಸಿ ಸ್ತ್ರೀಗೆ ಸ್ಥೂಲವಾದ ಕುಚ ೬ ಅಪ್ಸರೆಯುಳ = ತ್ರಿವಳಿನಾಭಿಯೆ= ಸರಸಿಗಳಲ್ಲಿ ದುಂಡಾಕಾರ ಸುಳಿಗೆ ತ್ರಿವಳಿ ನಾಭಿಗಳಾಗಿರುವ ೭ ಅಪ್ಸರೆಯುಳ=ರೋಮಾವಳಿ ವೈಲ್ಲಿದ್ದ ರೋಮ ಕೂಪದಲ್ಲಿ = ಸರಸಿಯಲ್ಲಿದ್ದ ಶೈವಾಲ=ನೀರೊಳಗಿರುವ ಹಾವಂಸೆಯೆ, ರೋಮಾವಳಿಗಳಂತೆ ೮ ಅಪ್ಸರೆಯುಳ ಜಘನ-ಟೊಂಕದ ಹಿಂಭಾಗವೇ=ಸರಸಿಯಲ್ಲಿಪ್ಪ ವರಪುಳಿನ ಸಣ್ಣಮರಳವೇ ಜಘನಾಕಾರವಾಗಿ ಸರೋವರಕ್ಕೆ ಶೋಭೆ ೯ ಅಪ್ಸರೆಯುಳ=ಮಧ್ಯಕಟಿಯೇ ಸಣ್ಣಾಗಿ ಶೋಭಿಸುವಂತೆ=ಸರಸಿಯಲ್ಲಿ ವೃದುವಾಗಿ ಬೆಳೆದಮೇಲೆ ಅಗಲ ಮಧ್ಯ ಸಂಣ = ಬುಡ ಸ್ವಲ್ಪ ದಪ್ಪವಾಗಿ ಬೆಳದ ಮೃಣಾಳ ಕಮಲದ ದೇಂಟುಗಳೇ ಸರಸಿ ಸ್ತ್ರೀಯ ಮಧ್ಯಕಟಿಯಾಗಿಪ್ಪಂತೆ. ೧೦ ಅಪ್ಸರಯುಳ ಚರಣಗತಿ, ಮೆಲ್ಲನನಡಿಗೆ ಹಂಸಗತಿಯಂತೆ– ಸರೋವರದಲ್ಲಿಪ್ಪ ಹಂಸಗಳ ಗತಿಯೇ ಆ ಸ್ತ್ರಿಗೆ ಹಂಸ ನಡೆಯಂತೆ ೧೧ ಅಪ್ಸರೆಯುಳ ತನುಛವಿಯು ಕಾಂತಿಯೇ=ಸರೋವರ ಸ್ತ್ರೀಗೆ ಅಲ್ಲಿಪ್ಪ ತಿಳಿಯುಜಲಗಳೇ ಗಾಳಿಯು ಸೂರ್ಯ ಬಿಂಬ ಲಹರಿಯಿಂದ, ತನುಛವಿಯಾಗಿ ಶೋಭಿಸದವು

---

ಕೋಳಾಭಿಮಾನಿ ಜೀವರಿಗೆ ಕೌಂಡಿಣ್ಯನ ಪ್ರಶ್ನೆ

ಒಂದು ಸರ ದುದಕೊಂಡು ಸರದೊಳಗೆ ಬೀಳುತತಿ ।
ಛಂದವಾಗಿಹನು ೧ ಕಲ್ಲೋಲ ಮಾಲೆಗಳಿಂದ ।
ದ್ವಂದ್ವ ಪದ್ಮಾಕರಗಳನ್ಯೋನ್ಯ ಮಿತ್ರತ್ವ ಭಾವದಿಂ ಕಣ್ಗೆ ನೆಯಲು ॥
ಬಂದು ಕೌಂಡುಣ್ಯ ಋಷಿ ಬೆಸಗೊಂಡನೆಲೆ ವಿಮಲ ।
ಸುಂದರ ಸುಪುಷ್ಕರಣಿಗಳಿರ್ಯಾ ೨ ಪುಷ್ಕರ ನಯನ ।
೩ನಿಂದೀವರ ಶ್ಯಾಮನಂತನಂ ಕಂಡಿದ್ದರೆನಗಿಂದು ಪೇಳ್ವದೆಂದು ॥ ೪೪ ॥

---

(೪೪ಪ) ೧ಕಲ್ಲೋಲ ಮಾಲೆಗಳ=ತೆರೆಗಳ ಸಾಲು=೨ಪುಷ್ಕರನಯನ=ಕಮಲದಂತೆ ಕಣ್ಣುಳ್ಳವ= ಇಂದೀವರ ಶ್ಯಾಮ= ಲಕ್ಷ್ಮಿಕರೆಕಮಲದಂತೆ ಶ್ಯಾಮ ವರ್ಣನಾನ ಹರಿ.

ಕೊಳಗಳು ಅನಂತನ ಕಾಣಲಿಲ್ಲವೆಂದೆನೆ ಮುಂದೆ ಖರದರ್ಶನ

ಪೊಡವಿಸುರ ಕೇಳನಂತನ ಕಾಣೆ ನಾವೆಲ್ಲಿ !
ಜಡರೂಪಿಯಾಗಿರ್ದ ನಮ್ಮಂದದ್ದರಿಗೆ ।
ಕಡಲಶಯನಂ ಬಂದು ವೈದೋರ್ವನೇ ವಿಚಾರಿಸು ಮುಂದೆಪೋಗೆನಲ್ಕೆ।
ಕಡುಬಳಲುತಲ್ಲಿಂದ ನಾಗಿಬರೆಲೆದುರಿನೋಳ್ ।
ನುಡುವು ತಪಶಬ್ದದಿಂ ಮೊಗವೆತ್ತಿ ಕೂಗುತ್ತ ।
ಲಡಿಗಡಿಗೆ ದುರ್ಜನ ಸ್ವಭಾವದೋಳ್ಕಣ್ಗೆನವ ಗಾರ್ಧಭನ ಕಂಡು
ಮುನಿವಾ ॥ ೪೫ ॥

ಗಾರ್ಧಭನಿಗೆ ಕೇಳಲು ನೋಡಿಲ್ಲವೆಂದುತ್ತರವಿತ್ತುದು

ಎಲೆ ಖರವೆ ಕೇಳ್ ಖರಾಸುರನ ಸಂಹರಿಸಿರ್ದ ।
ಬಲವಂತನಂತ ಸ್ವಾಮಿಯು ಕಂಡಿಯಾ ತನಗೆ ।
ತಿಳುಹೆಂದು ನುಡಿಯಲ್ಕೆ ವಿಪ್ರೇಂದ್ರ ನಾಕಾಣಲಿಲ್ಲಾವ ದೇವನಲ್ಲಿ ॥
ಇಳಿಯೊಳಗೆ ವೃಗವತಿತ ನಾಗಿರ್ದ ತನ್ನಲ್ಲಿ ।
ಗೊಲಿದು ತೋರಿಸಿಕೊಂಬನೇ ಪರಮ ಪುರುಷನೆನೆ ।
ಬಳಿಕವನಿಸುರ ಬಳಲುತಲ್ಲಿಂದ ಸಾಗಿದಂ ಕೆಲಬಲದೊಳೀಕ್ಷಿಸುತ್ತಾ॥೪೬॥

ಮುಂದರಿಯೆ ಮದ್ದಾನೆ ದರ್ಶನ ಅದನ್ನು ಕುರಿತು ಪ್ರಶ್ನೆ

೧ ಪೃಥೆಯ ಸುತ ಕೇಳ್ವದೈ ಕೌಂಡುಣ್ಯ ನತ್ಯಂತ ।
ವ್ಯಥೆಯುಕ್ತನಾಗು ತೃತರ ಲಾಗ ಮುಂದೆ ಮ ।
ನ್ಮಥನ್ವೈಯ್ಯನಂ ಜರಿದ ಮದವೆ ಸ್ಥೂಲಾಕೃತಿಯನಾಂತು
ಕಂಗೊಳಿಸಿತೆನಲು ॥

೨ ಪೃಥುವಿಧರದಂತೆನೆವ ಮತ್ತಮಾತಂಗ ಮಂ ।
ಪಥದೊಳಗೆ ಕಾಣುತಲೆ ಗಜವೆ ಹೇಳ್ ನೆಗಳಿಯಂ ।
ಸಿಥಿಲ ಪೌರುಷನಾದ ನಾಗೇಂದ್ರನಂ ಪೊರೆದನಂತನಂ
ನೀಕ್ಷಿಸಿದಿಯಾ ॥ ೪೭ ॥

ಮದ್ದಾನೆ ನೋಡಿಲ್ಲವೆನೆ ಮುನಿಯು ನಿರಾಶೆನಾದನೆನೆ

ಮದಭರಿತನಾಗಿರ್ದ ಮಂದಬುದ್ಧಿಯ ಕಣ್ಗೆ ।

---

೧ ಪೃಥೆಯ ಸುತ = ಕುಂತಿತನಯ ಧರ್ಮ. ೨ ಪೃಥ್ವಿಧರ=ಪೃಥ್ವಿ ಹೊತ್ತ ದಿಗ್ಗಜದಂತೆ.

ಮದನ ಶತಕೋಟಿ ಲಾವಣ್ಯದಿಂ ಮೆರೆವ ಶ್ರೀ ।
ಮದನಂತ ಮೂರ್ತಿ ಗೋಚರಿಸುವನೆ ತಾ ಕಾಣಲಿಲ್ಲವೆನೆ
ಮೌನೀಂದ್ರನು ॥

ಗದಗದಿಸುತಾನೆ ನುಡಿಕೇಳುತಿದೆ ವಡದು ಭಂ ।
ಗದ ಭಾರದಿಂದ ನಿರ್ವಿಣ್ಯ ಚೇತನನಾಗಿ ( ಚೇತನದೊಳಂ )
ಗದೆ ಶಂಖ ಚಕ್ರಾಬ್ಜ ಧರದೇವನಾವಲ್ಲಿ ಕಾಂಬೆನೆಂದ (೧) ಸುವಳಿದನು
ಕೌಂಡುಣ್ಯನು ದುಸ್ಸಹವಾದ ದುಃಖಪಡುವಿಕೆ ॥ ೪೮ ॥

ಇನಿ ತಟವಿಯೋಳ್ ತೊಳಲಿ ಪುಡುಕಿದರು ಪಿಡುಕಿದರು ।
ವನಜಾಕ್ಷ ತನಗೆ ಮೈದೋರನೆ ಬಾರನೇ ।
ಮುನಿದು ಧಿಟವಾಗಿ ಕೈಬಿಟ್ಟನೇ ತೊಟ್ಟನೇ ದ್ವೇಷಮಂ ತನ್ನೊಳಕಟಾ॥
ಜನುಮ ಜನುಮಾಂತದದಿ ಮಾಡಿರ್ದ ಕೂಡಿರ್ದ ।
ಘನಪಾಪಮೀಗ ಬಂದೊದಗಿತೇ ಹುದುಗಿತೇ ।
ತನುತ್ರಾಣ (ಸತ್ವ)ವಿನ್ನೇನು ಗತಿಯೆಂದು ಅತಿನೊಂದು ಹಲುಬುತಾ
ಮುನಿಸುಯ್ದನೂ ॥ ೪೯ ॥

ಕಾಲೊಡದು ನೋರ್ವರುಣ ಜಲದ ವೇದನಯು ಬಿರಿ ।
ಗಾಳಿ ಬಿಸಲಿನ ಝಳದಿ ಬಾಡಿರ್ದ ತನುಲತೆಯು ।
(೨)ತಾಳಿಗೆಯು (೩)ನಿದ್ರುವದ ಜವಗುಂದಿ ದಡಿಗಳಿಂ ಗತಸತ್ವನಾಗಿಬಳಿಕ॥
ನೀಲಮೇಘ ಶ್ಯಾಮನಂ ಕಾಣದಲೆ ದುಃಖ ।
ತಾಳದವನಿಯಮೇಲೆ ಬಿದ್ದ ನಡ ನಡಗುತ್ತ ।
ಮೂಲವಮಂ ಕೊಯ್ದ ಭೂರಹ ಬೀಳುವಂತಾಗ ಮೃತಕಲ್ಪನಾಗಿ
ಮುನಿಪಾ ॥ ೫೦ ॥

ಕರುಣಾಳುವಾದನಂತನು ವೃತಭೂಸುರನಾಗಿ ತೋರ್ಪ

ಅನ್ನ್ಯಂಗ ಕೌಂಡುಣ್ಯ ಜನ್ಮ ಜನ್ಮಾಂತರದಿ ।
ಮುನ್ನೆ ಮಾಡಿದ ಸುಕೃತ ಫಲದಿಂದ ಪ್ರತ್ಯಕ್ಷ ।
ಪನ್ನಗಾರಿಧ್ವಜಂ ವೃದ್ಧ ವಿಪ್ರಾಕಾರ ಮುಂತಾಳ್ದು ಕರುಣದಿಂದ ॥

೧ ಅಸುವಳಿದನು=ಪ್ರಾಣಬಿಡುವೆನೆಂಬ ನಿಶ್ಚಯ ಮಾಡ್ದ.

೨ ತಾಳಿಗೆಯು=ಗಂಟಲು,

೩ ನಿದ್ರುವದ=ಗಂಟಲೊಣಗಿ, ಜವಗುಂದಿ=ಶಕ್ತಿಹೀನನಾಗಿ

ತನ್ನ ಮೊರೆಯೊಕ್ಕವನ ಕಾಯಬೇಕೆನುತ ಲಾ ।
ಪನ್ನ ರಕ್ಷಕ ಭಕ್ತವತ್ಸಲಂ ವೈದಿಕೋರಿ ।
ಬನ್ನಗೊಂಬಾದ್ವಿಜನ ಬಳಿಗೆ ಬಂದಾಗ ಭಯವಂ ನೀಡು
ವೆಂತೆಂದನು ॥ ೫೧ ॥

ವೃದ್ಧ ಭೂಸುರನು ಅನಂತನಂತೋರ್ವ ಅಶ್ವಾಸನದಿಂ ದಿವ್ಯನಗರ ತೋರ್ದ.

ಧರಣಿಸುರ ಬಳಲಬ್ಯಾಡೇಳು ತೋರಿಸುವೆನಾ ।
ತ್ವರಿತದಿಂ ನಿನಗನಂತನನೆನುತ ದಕ್ಷಿಣದ ।
ಕರವ ಪಿಡಿದೆಬ್ಬಿಸುತ ಕರತಂದು ಕಾಣಿಸಿದ ಮುನಿವರಗೆಭ್ರೂಚಲನದೀ ॥
ಎರಡೇಳು ಲೋಕಗಳ ಸೃಷ್ಟಿಸುವ ನಿಭುತನ್ನ ।
ಪುರವ ಭೂಸುರ ನೇತ್ರದಿಂದ ಮುಂದೆದ್ಯುತದ ।
ಮಿರುಗುವ ರತ್ನಪರಿಖಚಿತ ಪ್ರಾಕಾರ ಕೋತ್ತುಂಗದ್ವಾರ ಶೃಂಗಾರದ॥೫೨॥

ಝಗ ಝಗಿಪ ತೋರಣ ಪತಾಕ ಧ್ವಜಮಾಲಿಗಳ ।
ಬಗೆ ಬಗೆಯ ಕಾಂತಿಯಿಂ ಪ್ರಾಕಾರ ಗೋಪುರ (೧)ಹರ್ಮ್ಯ ।
ಪ್ರಗಲೊಗುವ ಶೋಭನದ ಮಂಟಪ ಸುವೀಧಿಗಳಿಂ ರಮ್ಯ
ವನಸರಗಳಿಂದ ॥

ಅಗಣಿತಸ್ವರ ದಿವ್ಯ ದೇವತಾ ನಾರಿಯರ ।
ಮಿಗೆದಿವಿಜ ಗಂಧರ್ವ ಕಿಂಪುರುಷ ಯಕ್ಷಮುನಿ ।
ಸುಗುಣಿ ತುಂಬುರ ಸಿದ್ಧ ನಾಟ್ಯಗಣದಿಂ ಮೆರೆವ ನಗರಮಂ
ತೋರಿಸಿದನು ॥ ೫೩ ॥

ವಿತತ ಸನ್ಮಣಿ ಸಭಾಶೋಭಿತ ಸುಮಂಟಪದಿ ।
ಶತಭಾಸ್ಕರ ದ್ಯುತಿ ತಿರಸ್ಕರಿಪ ರತ್ನಮಂ ।
ಡಿತದ ಸಿಂಹಾಸನದೊಳತಿ ತೇಜಃ ಪುಂಜದಿಂ ದೈದಿಪ್ಯಮಾನನಾಗಿ ॥
ಕೃತಕ ದ್ವಿಜರೂಪಮಂ ಮೈಗರೆವು ತಾಕ್ಷಣದಿ ।
ರತಿರಮಣ ಕೋಟಿಸಮ ಲಾವಣ್ಯ ಭರಿತ ಸ್ವ ।
ಗತ ಭೇದ ರಹಿತ ಹರಿ ಮೊಳವ ನಿಜ ಘನಾಕಾರ ಮೂರ್ತಿಯಂ
ತೋರಿಸಿದನು ॥ ೫೪ ॥

---

೧ ಹರ್ಮ್ಯ – ಮೇಲುಪ್ಪರಿಗೆ

### ಶ್ರೀಹರಿ ತನ್ನ ನಿಜರೂಪ ತೋರ್ದ ವರ್ಣನೆ

ಕುಂಡಲ ಕಿರೀಟ ರಂಜಿತ ಚಲ್ವ ಸಿರಿ ಮೊಗದ ।
ಚಂಡ ಚಕ್ರಾಬ್ಜದರ ವರಗದಾ ಶೋಭಿತು ।
ದ್ದಂಡ ಚಾತುರ್ಭುಜದ ಕೌಸ್ತುಭ ಶ್ರೀವತ್ಸ ವೈಜಯಂತೀಹಾರದಾ ॥
ತಂಡ ತಂಡದೊಳುಲಿವ ಕೇಯೂರ ವನಮಾಲ ।
ಮಂಡಿತ ಸುವಕ್ಷ ಪೀತಾಂಬರದ ಕಟಿಸೂತ್ರ ।
ಖಂಡ ತೇಜದ ಸರ್ವಲಂಕಾರ ಭೂಷಿತದ ಹರಿಮುನಿಯ
ಮುಂದೆಸದನು ॥ ೫೫ ॥

### ಶ್ರೀ ಹರಿಯು ನೈಜವಾದ ರೂಪಲಾವಣ್ಯ ಬಣ್ಣನೆ

ಥಳಥಳಿಪ ಸುಳಿ ಗುರುಳ ಪೆರೆ ನೊಸಲ ಕಸ್ತುರಿಯು ।
ತಿಲಕದ ಸುಪ್ಪುಬ್ಬುಗಳ (೧)ತುರುಗೆವೆಯ ನಿಟ್ಟೆಸಳ ।
ಪೊಳೆವ ಕಂಗಳದ ಚಂಪಕ ತೆನಿಯ ನಾಶಿಕದ ಸಚ್ಛ್ರವಣನುಣ್ಗಲ್ಲದ॥
ತೊಳಪಲ್ಲ ಕಿರುನಗೆಯ ನಸುದೋರ್ವ ಚುಬಕಾಗ್ರ ।
ದೆಳೆದುಳಸಿ ವನಮಾಲೆ ಕಂಧರದ ನಳಿತೋಳು ।
ಗಳ ಘನಾಂಗದ ಸುಂದರವಯವದ ಸ್ಮರಜನಕ ಹರಿ ಮುನಿಯ
ಮುಂದೆಸದನು ॥ ೫೬ ॥

ಎಡಬಲದ ಪಾರ್ಶ್ವದಲಿ ಶ್ರೀ ಧರಣಿ ದುರ್ಗಾದಿ ।
ಮಡದಿಯರ ಮಧ್ಯದಲಿ ಕೈಮುಗಿದು ನಿಂದಿರ್ದ ।
ಜಡಜಭವ ಹರಿಖಗಪ ಫಣಿರಾಜಪ್ಮೃಡ ಶಕ್ರಸನಕಾದಿ ಸುರಮುನಿಗಳು॥
ನಡುವೆ ಚಂದ್ರಾನಂತ ಕಾಂತಿ ಸನ್ನಿಭನಾಗಿ ।
ಧೃಡಪಿಹಚ್ಛಿತರೊಡೆಯ ಜ್ಞಾನ (ಯಜ್ಞ) ಸ್ವರೂಪಕಂ ।
ಜಡಜಂಗಮಂ ವ್ಯಾಪ್ತನಂತ ದೇವಂ ಋಷಿಯ ದಿವ್ಯ ಕಂಗಳಿಗೆ
ಸದನು ॥ ೫೭ ॥

ವರ ಕೌಸ್ತುಭದ ಬೆಳಗು ಮಿಂಚಿನಂತಿರೆ ಸೋರ್ವ ।
ಕರುಣ ರಸ ಧಾರಾಪ್ರಯದ ಮಳೆಯೊಳಿರೆ ಪೊಳೆವ ।
ಕೊರಳ ಮಾಲೆಗಳಿಂದ್ರ ಚಾಪದಂತಿರೆ ನೂಪುರಾ ಭರಣನಿನದಂಗಳು ॥

---

೧ ತರುಗೆವೆಯು=ಮೃದುವಾದ ಕಣ್ಣೆವೆ ರೆಪ್ಪಗಳ ನಿಟ್ಟೆಸಳ= ಸರಿಯಾದ ಸಾಲು, ಮೃದುವಾಗಿಪ್ಪವು.

ಮೊರವ ಗಂಭೀರತರ ಮೊಳಗು ಮ್ರೋಲಿರೆ ಶ್ಯಾಮ |
ವರುಣವಪು ಕಾರ್ಮುಗಿಲ ತೆರದೊಳಿರೆ ನಲಿದುದಾ |
ಪರಮ ಮುನಿಮನವೆಂಬ ಚಾತಕಂ ಕಂಡುಬ್ಬಿ ರೋಮಾಂಚನದ
ಮುದದೊಳು || ೫೮ ||

ಶ್ರೀ ಹರಿಯ ಅದ್ಭುತ ರೂಪವಂ ನೋಡಿ ಕೌಂಡುಣ್ಯನು ದಂಡಪ್ರಣಾಮಗೈದ.

ಅಚ್ಯುತನ ಮಂಗಳ ಸುಮೂರ್ತಿಯಂ ಕಣ್ದಣಿಯೆ |
ಲಚ್ಚನಖ ಶಿಖದ ಪರಿಯಂತರಂ ನೋಡುತತಿ |
ಪೆಚ್ಚಿದಾನಂದದಿಂ ತನುವ ನೀಡಾಡಿ ದಂಡ ಪ್ರಣಾಮಂಗೈವುತಾ ||
ನಿಚ್ಚಟದ ಭಕ್ತಿಯಿಂದಾ ಮೌನಿಕೈಮುಗಿದು |
ಸಚ್ಚಿದಾನಂದಾತ್ಮ ನಿದಿರಿನೋಳ್ ನಿಂದು ಮನ |
ಬೆಚ್ಚಾತ ನಂಘ್ರಿಕಮಲದ್ವಯಕೆ ಮಾಡಿದಂ ನಿಗಮೋಕ್ತಮಾದ
ಸ್ತುತಿಯಾ || ೫೯ ||

ಕೌಂಡುಣ್ಯಕೃತ ಶ್ರೀ ಅನಂತನ ಸ್ತೋತ್ರ

ನಮೊ ನಮೋ ವೈಕುಂಠ ವನಮಾಲ ಧೃತಕಂಠ |
ನಮೊನಮೊ ಶ್ರುತಿನಾಥ ಬ್ರಹ್ಮಾದಿ ಸುರನಾಥ |
ನಮೊದನುಜ ಕುಲಮಥನ ಪುಣ್ಯಾತರ ಶುಭ ಕಥನ ನಮೋದುರಿತ
ಭಯನಾಶನ ||
ನಮೊ ನಮೋ ಜಗದ್ರಕ್ಷ ಭಾಗವತ ಗಣಪಕ್ಷ |
ನಮೊದೀನ ಜನಬಂಧು ಕಾರುಣ್ಯ ಗುಣಸಿಂಧು |
ನಮೊ ನಮೋ ಗೀರ್ವಾಣ ಪಾಲ ಸದ್ಗುಣ ಪೂರ್ಣ ಶ್ರೀ ವತ್ಸ
ಲಾಂಛನ ನಮೊ || ೬೦ ||

ಶ್ರುತ್ಯುಕ್ತವಾದ ಮಹಿಮೆ ಸ್ತುತಿ

ನಮೋ ಯಜ್ಞ ರೂಪಾಯ ಬೀಜಾಯ ಪ್ರಾಣಾಯ |
ನಮೊ ಸರ್ವಸ್ವಾತಂತ್ರ ಪುರುಷಾಯ ಶಾಂತಾಯ |
ನಮೊ ನಮೋ ಬ್ರಹ್ಮಣ್ಯ ನಾಥಾಯ ಖ್ಯಾತಾಯ ದಾತಾಯ
ಚೇತನಾಯ ||
ನಮೊ ದೇವ ದೇವಾಯ ಸಾರಭುಕು ವ್ಯಾಪ್ತಾಯ |
ನಮೊನಂತ ರೂಪಾಯ ನಿತ್ಯಾಯ ಸತ್ಯಾಯ |

ನವೊ ನವೊ ಸ್ಥಿತಿಲಯೋದಯ ಕಾರಣಾಯ (೧)ರುದ್ರಾತ್ಮನೇ
ತುಭ್ಯಂ ನಮ ॥ ೬೧ ॥

ರಕ್ಷಣೆ ವಿಷಯ ಸ್ತುತಿ

ತ್ರಾಹಿಕ ಮಲಾಕಾಂತ ನಿಶ್ಚಿಂತ ಬಲವಂತ ।
ತ್ರಾಹಿ ನಿರುಪಮ ನಿಜಾನಂದ ನಿರ್ಭಯ ನಿರಜ ।
ತ್ರಾಹಿ ಪರತರ ಪರಂಜ್ಯೋತಿ ಪರಮಾಶ್ಚರ್ಯ ಲೀಲ ಸುಂದರಕಪೋಲ ॥
ತ್ರಾಹಿ ಭಕ್ತಾಧೀನ ಭಕ್ತ ವತ್ಸಲ ತ್ರಾಹಿ ।
ತ್ರಾಹಿ ಭಕ್ತೌಘ ಸಂಸಾರ ದುಃಖೋದ್ಧರಣ ।
ತ್ರಾಹಿ ಸದ್ಲಕ್ಷಣ (ಸುಲಕ್ಷಣ) ಗುಣಾರ್ಣವ ಸುಹಾಮುಹಿಮನಂ
ತದೇವಂ ತ್ರಾಹಿಮಾಂ ॥ ೬೨ ॥

ಕೃತ್ತಿಯ ಅರ್ಕಸ್ತುತಿ

ಜಯ ಜಯತು ಕವಿಗೇಯ ವಿಮಲ ಮಂಗಳ ಕಾಯ ।
ಜಯ ಜಯ ಸಹಸ್ರಾಕ್ಷ ಸುವಿಶಾಲ ತರ ವಕ್ಷ ।
ಜಯ ಜಯತು ಭವಹರಣ ನಿರ್ಗತ ಜರಾಮರಣ ಜಯತು
ಫಣಿರಾಜ ಶಯನ ॥
ಜಯ ಜಯತು ಲೋಕೇಶ ಸಕಲ ಸಜ್ಜನ ಪೋಷ ।
ಜಯ ಜಯ ಮಹಾರಾಜ ಶತಕೋಟಿ ರವಿ ತೇಜ ।
ಜಯ ಜಯತಮಿತ ನಾಮ ಸುಖಪೂರ್ಣ ನಿಷ್ಕಾಮ ಜಯತು
ಸುರಕುಲ ಲಲಾಮ ॥ ೬೩ ॥

ಹರಿಯೆ ನರಹರಿಯೆ ಭಾಗ್ಯದ ಸಿರಿಯೆ ಕರುಣೆಗಳ ।
ಧೊರೆಯೆ ಪುಣ್ಯದ ತೋರಿಯೆ ನಿನಗಾರು ಸರಿಯೆ ನಾ ।
ನರಿಯದಲೆ ಜರಿಯಲೀ ಪರಿಯಾದೆ ತೊರಿಯದಲೆ
ತ್ವರಿತದಲಿ ಪೊರೆಗೆ ಕರಿಯೆ ॥
ಮರೆಯೆ ತವಚರಿಯವನು ಬೆರೆಯೆ ಗರ್ವಪೊಳಿನ್ನು ।
ಪೋರಿಯೆ ದಯಗರಿಯೆ ಗುಣಮೊರಿಯೆ ಭವತರಿಯೆ ಲ ।
ಚ್ಚರಿಯೆ ನಿನಗೀಗ ತಾಪರರಿ ಗಾಲ್ಪರಿಯೆನ್ನೆದುರಿತಾಂಧ
ಕಾರ ಹರಿಯೆ ॥ ೬೪ ॥

---

೧ ರುದ್ರ=ಋುಜಂದ್ರಾವಯುತೇ ಯುಸ್ಮಾತ್ ರುದ್ರ

ನುಗರನಿಂತೀಳ್ದು ಭಕ್ತನಪೊರದು ದರಿಯದೇ ಭವನ ನೀ ಪರಮನೆಂದು||

ಪಂಚಬೇದ ತಾರತಮ್ಯಸ್ತುತಿ || ೬೮ ||

ನನ್ನಿಂದ ಪುಟ್ಟಿ ಪಾಲಿತರಾದ ನಿರ್ಜರರಿ ।
ಗಿನ್ನುಂಟೆ ಸಾಮ್ಯಾಧಿಕ ಭೇದತ್ವ ಪರಮೇಶ ।
ನಿನ್ನರಸಿಗುಂಟೆ ಮಿತ ಹರವಿರಂಚಾದಿಗಳ ಸೃಷ್ಟಿಸುವ ಶಕ್ತಿಯೆಂದು ||
ಚವ್ನಾಗಿ ಶ್ರುತಿ ಸಾರುತಿದೆ ಪಂಚಭೇದಮಂ ।
ಘನ್ನತರತಮ್ಯಗಳ ನರಿಯದಲೆ ಪಾಪಾತ್ಮ ।
ರನ್ಯಾರ್ಥಮಂ ಬಗೆದು ತವಗುಣವ ನಿಂದಿಸುತ ಬೀಳ್ದಪ-
ರಧೋಗತಿಯಲಿ || ೬೯ ||

ಪಂಚಭೇದ ನಿತ್ಯ ಸತ್ಯ ತ್ರಿವಿಧ ಜೀವರು ನಿತ್ಯ

ಜಡ ಜಡಗಳಿಗೆ ಭೇದ ಜೀವ ಜೀವಗ ಭೇದ ।
ಜಡ ಜೀವರಿಗೆ ಭೇದ ಜೀವೇಶಂಗೆ ಭೇದ ।
ಜಡಕೆ ಪರಮಾತ್ಮಂಗೆ ಭೇದ ನೀಪರಿ ಪಂಚ ಭೇದಮಂ ತಿಳಿದು ಸತತ||

ಸಕರಲ್ಲಿ ಹರಿಯು ವ್ಯಾಪಕನೇ ಸತ್ಯ

ಜಡಚೇತನಂ ವ್ಯಾಪ್ತ ಸಕಲ ಜೀವರಿಗೆಲ್ಲ ।
ನಡೆನುಡಿಯ ವ್ಯಾಪಾರ ಪ್ರೇರಕಂ ಹರಿಯೆಂದು ।
ಧೃಡವಾದ ಜ್ಞಾನದಿಂತ್ವತ್ಪಾದಲಿ ಭಕ್ತಿಮಾಡುವನೆ ಸಾತ್ವೀಕನು ||೭೦||

ಮುಕ್ತಿ ಯೋಗ್ಯರ ಲಕ್ಷಣ ಸಾತ್ವೀಕ ಜ್ಞಾನವೀವನು ಹರಿಯೆಂ

ಹರಿ ನೀನೆ ಸರ್ವೋತ್ತಮಿಂದಿರಾ ದೇವಿ ವಿಧಿ ।
ಹರಿ ಸರಸ್ವತಿ ಭಾರತೀ ಗರುಡ ಭುಜಗೇಂದ್ರ ।
ಗಿರಿಜೇಶ ಸೌಪರಣಿ ವಾರುಣಿ ಭವಾನಿಂದ್ರ ಕಾಮಾನಿರುದ್ಧ ರತಿಯು ||
ಗುರು ಸ್ವಯಂಭುವದಕ್ಷ ಶಚಿ ಚಂದ್ರ ಸೂರ್ಯಾದಿ ।
ಸುರರು ನಾರದ ಮುಖ್ಯ ಋಷಿಗಳೆಲ್ಲರು ನಿನ್ನ ।
ಚರಣ ಸೇವಕರೆಂದು ತಾರತಮ್ಯ ಜ್ಞಾನ ತಿಳಿದವನೆ ತವಶರಣನು||೭೧||
ನಿರುತ ನಿಶ್ಚಯ ಜ್ಞಾನ ನವವಿಧದ ಭಕ್ತಿಯಲಿ ।
ಹರಿಯೆ ನಿನ್ನಂಭಜಿಸುವರೆ ಮುಕ್ತಿ ಯೋಗ್ಯರೈ ।
ಜರಿದು ನವವಿಧ ದ್ವೇಷದಿಂ ನಿನ್ನಂಜೀವ ಪರಮಾತ್ಮರೈಕ್ಯವೆಂದು ||

ರಜೋತಮ ಜೀವರಿಗೆ ಪ್ರೇರಕ ಹರಿ

ನೆರೆನಿಂದಿಸುವ ಜೀವರೇ ತಮೊ ಯೋಗ್ಯರನ।
ವರತ ಮಿಶ್ರ ಜ್ಞಾನದಿಂ ನಿನ್ನ ತಿಳಿದು ಭೂ।
ನಿರಯ ಸ್ವರ್ಗಂಗಳಲಿ ತೊಳಲುವರ್ ನಿತ್ಯಸಂಸಾರಿಗಳ್ಗತಿಗಾಣದೆ ॥೭೨॥

ತ್ರಿವಿಧ ಜೀವರಿಗೆ ಪ್ರೇರಕ ಶ್ರೀಹರಿಯು ನಿಜ

ಸತ್ಯಸಂಕಲ್ಪ ನೀ ತ್ರಿವಿಧ ಜೀವರಿಗೆ ವರ।
ಕೃತ್ಯಾನುಸಾರ ಸುಖದುಃಖ ಫಲಗತಿಗೊಡುತ।
ನಿತ್ಯಖಿಳ ಪ್ರಾಣಿಗಳ ಹೃದಯದೊಳಗಿರ್ದು ಪ್ರೇರಕನಾಗಿಜಗವಪೊರೆವೆ॥
ಮೃತ್ಯುಂಜಯಾದಿಗಳಿಗೀತ್ರಾಣ ಉಂಟ ನೀ।
ನತ್ಯಧಿಕ ನೆಲ್ಲರೊಳ್ ತವಚರಣದಲಿ ಜ್ಞಾನ।
ವತ್ಯಂತ ಭಕ್ತಿಯುಳ್ಳವರೀರ್ವರೇ ಕಮಲ ತನಯ ಮುಖ್ಯ
ಪ್ರಾಣರು ॥ ೭೩ ॥

ಹರಿಯು ಅಚ್ಛಿನ್ನ ಭಕ್ತರಾದ ಬ್ರಹ್ಮ ವಾಯುಗಳಿನೆ

ಅವರಿಂದ ಲೋಕಗಳ ಸೃಷ್ಟಿಸುವೆ ದುರ್ಜನರ।
ಅವರಿಂದ ತರಿಸಿ ಭೂಭಾರ ತಗ್ಗಿಸುವೆ ನೀ।
ನವರಿಂದ ವೇದಾರ್ಥ ವರುಹಿಸುವೆ ಸಜ್ಜನರ್ಗವರೊಲಿದವರಿಗೊಲಿದಪೆ॥
ಅವರ ದ್ವೇಷಿಗಳಾದವರ್ ನಿನ್ನಪಗೆಗಳಿಂ।
ನ್ನವರಿಗಜ್ಞಾನ ಕಿಂಚಿತು ಇಲ್ಲ ಜೀವೋತ್ತ್ಮ।
ರವರಿಗೆ ಸಮಾನರಿಲ್ಲೀ ದಿವಿಜರೊಳ್ ನೀನೆ ಸಾಧನಾವಾಗವರಿಗೆ ॥೭೪॥

ಶ್ರೀ ಹರಿಯ ಗುಣರೂಪ ಕ್ರಿಯೆ ವೈಶಿಷ್ಟ್ಯ ವರ್ಣನಪೂರ್ವಕನಮನ

ಸರ್ವೇಶ ಸರ್ವೋತ್ತ್ಮನೆ ಸರ್ವರಾಧಾರರ।
ಸರ್ವರಂತರ್ಯಾಮಿ ಸರ್ವ ಶಬ್ದದಿ ವಾಚ್ಯ।
ಸರ್ವತ್ರ ವ್ಯಾಪ್ತ ಸರ್ವಜ್ಞ ಸರ್ವ ಪ್ರದನೆ ಸರ್ವಾಗಮ ಸ್ತುತ್ಯನೆ ॥
ನಿರ್ವಿಕಾರನೆ ನಿರಂಜನೆ ನಿಜ ನಿರಾಮಯನೆ।
ನಿರ್ವಿಷಯ ನಿಶ್ಚಿಂತ ನಿರವದ್ಯ ನಿಶ್ಯಂಕ।
ನಿರ್ವಿಕಲ್ಪನೆ ನಿರಾವರಣ ನಿಶ್ಚಲ ನೀರಜಾಕ್ಷ ನಿನ್ನಂಘ್ರಿಗೆ ನಮೊ ॥೭೫॥

(೧)ಸ್ವೇದಜ (೨)ಜರಾಯುಜ (೩) ಜಾಂಡಜ (೪) ಉದ್ಭಿಜರ ಸೃಜಿಸಿ ।
ಮೇದಿನಿಯೊಳೀ ಚತುರ್ವಿಧ ಜೀವರಾಶಿಗಳ ।
ಭೇದದಿಂದವರವರ ಶೀಲಾನುಸಾರ ಸುಖದುಃಖಗಳ ನೀನೆಂದು ॥
ವೇದಗಳ್ಗಾವ ಮಹಿಮೆ ಪ್ರಾಕೃತಿವೆ ನಿನ್ನ ।
ಬೀದಿ ವಿಜನಾಯಕರಿಗೀ ಶಕ್ತಿಯುಂಟೆ ಸ್ವ ।
ಸೋದರನ ನಾಭಿಯಿಂ ಪಡೆದಮಿತಗುಣನಿಧಿಯೆ ನಿನ್ನಂಘ್ರಿ
ಗೆರಗುವೆನು ॥ ೭೬ ॥

ಶ್ರೀ ಹರಿಯ ಅನಂತ ಗುಣವರ್ಣನೆ

ನಿನ್ನೊಂದು ಗುಣದ ಘನಮಹಿಮೆಯಂ ಜ್ಞಾನ ಸಂ ।
ಪನ್ನರಾಗಿರ್ದರವು ಕೊಂಡಾಡಲಾರರಲೆ ।
ಮುನ್ನೆನ್ನವೆ (ಬೆ)ರಗಾದಸೆರಡು ಸಾವಿರ ನಾಲಗೆಗಳಿಂದ ತವಚರಿತವಾ ॥
ಪನ್ನಗೇಂದ್ರಗ ಪೊಗಳಲಳವಲ್ಲ ಹಪ್ಪಿರ್ಗೆ ।
ನಿನ್ನೊಶವೆ ನುತಿಸಲಿಲಿ ಕರುಣಾಬ್ಧಿ ಪತಿತ ವಾ ॥
ವನ್ನ ನಿನ್ನವ ಗುಣಗಳಂ ಸ್ಮರಿಸಲಿ ದೇವ ಕೃಪ ಮಾಡಿ
ಸಲಹೆಂದನು ॥ ೭೭ ॥

ಪ್ರಾರ್ಥನೆ

ಪಾಪಾತ್ಮನಾ ಪಾಪ ಸಂಭವಂ ಪಾಪಿಷ್ಟ ।
ಪಾಪ ಕರ್ಮನು ಹರಿದ್ರೋಹಿ ನಿಂದಕ ಗರ್ವ ।
ಕೋಪಪುಂಜನು ದುರಾಚಾರಿ ವಿಷಯಾಸಕ್ತ ದುಷ್ಟ ಸ್ವಭಾವದವನು ॥
ಆಪಾದ ಮಸ್ತಕದ ಸರಿಯುಂತಸೆನ್ನಲ್ಲಿ ।
ಶ್ರೀಪತಿಯೆ ನೀಕ್ಷಿಸಿದರೊಂದುರೊಂದು ಸುಗುಣಂಗಳ ।
ಲ್ಲಾಪನ್ನ ರಕ್ಷಕಘ ಹಾರಿಯೆಂಬೋ ಬಿರಿದು ಮೆರೆದು
ದಯಮಾಡೆಂದನು ॥ ೭೮ ॥

ಶ್ರೀಹರಿಯ ಕಾರುಣಿಕತೆ

ಮೊರೆಯೊಕ್ಕವರ ಕಾಯ್ವ ಕರುಣಿ ನೀನಲ್ಲದಲೆ ।
ಧರೆಯೊಳಾರುಂಟು ಕರಿರಾಜ ನೊರೆ ಇಡೆ ಭರದಿ ।

೧ ಸ್ವೇದಜ=ಬೆವರಿನಿಂದ ಪುಟ್ಟಿದವು. ೨ ಜರಾಯುಜ=ಗರ್ಭದಿಂ ಪುಟ್ಟುವ ಪ್ರಾಣಿಗಳು ಮನುಷ್ಯ ಮುಂತಾದವು ೩ ಅಂಡಜ=ಪಕ್ಷ್ಯಾದಿಗಳು ಗಿಡಬಳ್ಳಿ ಮುಂತಾದವು. ೪- ಉದ್ಭಿಜ-ಭೂಮಿಯಲ್ಲಿ ಹುಟ್ಟುವ-

ಸಿರಿಗೆ ಪೇಳದೆ ಬಂದು ಸಂವರಕ್ಷಿಸಿದೆ ಪಿಂತೆ ತರುಳಧ್ರುವರಾಯಗೊಲಿದು॥
ಪೊರಿದೆ ನೀನದರಿಂದ ಲನ್ಯರಿಗೆ ಬಾಯ್ಬಿಡದೆ ।
ಶರಣಾಗತರ ರಕ್ಷ ದೀಕ್ಷಿತಂ ಧಿಟವೆಂದು ।
ಶರಣ್ಹೊಕ್ಕೆತ್ವ ತ್ಪಾದಗಳಿಗೆನ್ನ ದುಃಖದಿಂದುದ್ಧರಿಸಿ ಸಲಹೆಂದನು ॥೭೯॥

ಶ್ರೀಹರಿಯ ನಾಮ ಮಹಿಮೆ

ತವನಾಮ ಸ್ಮರಣೆಯಿಂ ಜನ್ಮ ಜನ್ಮಾಂತರದ ।
ಭವನಾಶವಾಗುವದು ಪಾಪಿಷ್ಠ ಜೀವಿ ಳಸು ।
ಜವನ ದೂತರ ರೂಪ ಕಂಜಿ ನಿನ್ನಂಸೆನಗೊಂಡೊಡೆ ಸುಮುಕ್ತಿಪಡೆದ॥
ಭುವನೇಶನಿನ್ನ ನಾಮಾವಳಿಯ ಮಹಿಮೆಂತೊ (ಮಿಂತ್ತು)
ತವೆ ನಿನ್ನ ದಿವ್ಯ ಸ್ವರೂಪವಮಂ ಕಂಡಬಳಿ ।
ಕವನಿಯೋಳ್ (ಳ್ಳ) ಧನ್ಯನಾ ಕಲಿತಾಪ ನರಕಾದಿ ಪೀಡೆ
ತನಗಿಲ್ಲೆಂದನು ॥ ೮೦ ॥

ಕೌಂಡಿಣ್ಯನ ದೈನ್ಯ ಪ್ರಾರ್ಥನೆ

ಎನ್ನ ಜನ್ಮವು ಸಫಲವಾಯಿತಿಂದಿನಲಿ ಹರಿ ।
ಎನ್ನ ಬದುಕುವಣ ಸಾರ್ಥಕವಾಯ್ತು ದೇಹ ಪಾ ।
ವನ್ನವಾಯ್ತೆನ್ನ ಕುಲಕೋಟಿ ಪಿತೃಗಳೆಲ್ಲ ನಿರ್ವಾಣವಮಂ ಪಡೆದರು ॥
ಮುನ್ನೆ ಮಾಡಿದ ಸರ್ವ ಸಾಧನಂ ಬೆಳಸಾಯ್ತು ।
ಧನ್ಯ ನಾ ಧನ್ಯ ಪ್ರತ್ಯಕ್ಷನಾದ್ಪೈ ಬಿಡದೆ ।
ನಿನ್ನಚರಣಾಂ ಭೋಜ ಯುಗ್ಮದಲಿ ಭ್ರಮರದಂತೆನ್ನ
ಶಿರವೆರಗದಿಹುದೆ ॥ ೮೧ ॥

ಹಲವು ಬಗೆ ಮಹಿಮೆಗಳ ತವೆ (ಚರಣ ಪೊಗಳುತಿವೆ) ಪೊಗಳ
ಲೆನ್ನೊಶವೆ ।
ಸುಲಭ ಭಕ್ತರ್ಗೆಂಬುದಂ ಜಗಕೆ ತೋರಿಸುತ ।
ಒಲಿದೆನ್ನ ಸರ್ವಾಪರಾಧಮಂ ನೀಕ್ಷಿಸದೆ ಸಾಕ್ಷಾತ್ ಸ್ವರೂಪದಿಂದ ॥
ಬಳಲಿದೇಂ ನಿನಗಾಗಿ ತೊಳತೊಳಲಿ ಕರುಣದಿಂ ।
ಸಲಹೆನ್ನನೆಂದಾ ಮಹತ್ಮ ಋಷಿ ಮತ್ತೆ ಭೂ ।
ತಳಕೊಂದಿ ಸಾಷ್ಟಾಂಗ ವಂದನೆಯ ಭಕ್ತಿಯಿಂ ಕೈಮುಗಿದು
ನಿಂದಿರ್ದನು ॥ ೮೨ ॥

**ಶ್ರೀ ಅನಂತನು ಸುಪ್ರಸನ್ನನಾಗಿ ಕೌಂಡುಣ್ಯನಿಗೆ ಮೂರು ವರ ಪಾಲಿಸಿದನೆನೆ**

ಕುಂತೀ ಕುಮಾರ ಕೇಳ್ ಕೌಂಡುಣ್ಯ ಮೌನೀಂದ್ರ ।
ನಿಂತು ಪರಿಯಿಂದನಂತನ ತುತಿಸುತಿರಲಾ ಮ ।
ಹಾಂತರೊಡಿಯಂ ದ್ವಿಜನ ದೈನ್ಯತರ ಸ್ತೋತ್ರಕ್ಕೆ ಸುಪ್ರೀತದಾಗಿ
ಬಳಿಕ ॥
ಸಂತೋಷಮಯನಾಡೆ ನಿನ್ನ ಭಕ್ತಿಗೆ ಮೆಚ್ಚಿ ।
ಚಿಂತಿ ಲೇಶಿತವಿಲ್ಲವೆಲೆ ವಿಪ್ರ ನಿನಗೆಂದು ।
ಸಂತೈಸುತಾ ಭಕ್ತ ವತ್ಸಲಂ ಕೃಪೆಯಿಂದ ಮೂರು ವರಗಳ
ನಿತ್ತನು ॥ ೮೩ ॥
(೧)ದಾರಿದ್ರ ಪೋಗಿ ಮೊದಲಂತೆ ನಿನಗೈಶ್ವರ್ಯ ।
ಸಾರಲೀಕ್ಷಣ (೨)ಧರ್ಮದಲ್ಲಿ ಸಂತತ ಮನನು ।
(೩)ನಾರಲೆನ್ನಂಘ್ರಿಯಲಿ ಧೃಡಭಕ್ತಿ ಪೆಚ್ಚಲನವರತ ನಿನಗೀತೆರದೊಳು॥
ಮೂರುವರಗಳ ನಿತ್ತೆನೆಂದು ಮನ್ನಿಸೆ ಮುನಿಪ ।
ಮೀರಿದಾನಂದದಿಂ ಕೈಕೊಂಡು ಕಾರುಣ್ಯ ।
ವಾರಿನಿಧಿ ಶ್ರೀ ಮನೋಹರ ವಿಠಲನ ಗುಣವ ಕೊಂಡಾಡು
ತಿರುತಿರ್ದನು ॥ ೮೪ ॥

ಇತಿ ಶ್ರೀಮದನಂತ ಕಥಾಪ್ರಸಂಗೇ ಕೌಂಡುಣ್ಯವರಪ್ರಾಪ್ತಿರ್ನಾಮ
ಅಷ್ಟಮಸ್ಸಂಧಿ ಸಮಾಪ್ತಂ ಮಂಗಳಮಾಹ.
॥ ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀ ಗುರುಭ್ಯೋ ನಮಃ ॥

## ಅಥ ನವಮಃ ಸಂಧಿ ಪ್ರಾರಂಭ

ರಾಗ— ಮಾರವಿ ಸಂಧಿಸೂಚನೆ ಪಲ್ಲವಿ ॥

ಸೇವೇಶನಂತನ ಪ್ರಸಾದದಿಂ ಕೌಂಡುಣ್ಯ ।
ನೀ ವಸುಧಿಯೋಳ್ ಮಹಾಭಾಗ್ಯವನು ಭೋಗಿಸುತ ।
ಪಾವನ ಸುನಕ್ಷತ್ರ ಸ್ಥಾನಮಂ ನಾರ್ದು ಸುರರಿಂದ ಪೂಜಿತನಾದನು ॥

॥ ಪದನು ॥ ಶ್ರೀ ವಿಟ್ಠಲನ ಸ್ತುತಿ

ಶರಣರ್ಗೆ ಭವವೆಂಬ ಶರಧಿಯೋಳ್ಗಲ ಟೊಂಕ ।
ಪರಿಮಿತದೊಳಿಹವು ದಾಟಲ್ಕೆಂದು ತೋರಿಸ ।

ಲ್ಕರುಣದಿಂ ವೈಕುಂಠ ಪುರವನುಳಿದೀ ಚಂದ್ರಭಾಗ ಭೀಮಾತೀರದಿ ||
ವರ ಕಟಿಸ್ಥಿತ ಪಾಣಿಯುಲಿ ಪಿತೃಸೇವೆಯಂ |
ವಿರಚಿಸುವ ಪುಂಡರೀಕಂಗೊಲಿದು ನೆಲಸಿರ್ದ |
ಸಿರಿ ಪಂಢರೇಶ ಮನೋಹರ ವಿಠಲನೆ ತವಾಂಘ್ರಿಯ ಸ್ಮರಿಸೀ
ಕೃತಿಯ ಪೇಳ್ವೆನು || ೧ ||

ಶೇಷಶಾಯಿ ಶ್ರೀಮದನಂತನ ಸ್ತೋತ್ರ ಪಾಪಿ ಪದ್ಯ

(೧)ಕತ್ತಲೆಯನೊತ್ತುವನ (೨)ಪುತ್ರನಾ (೩)ಮುತ್ತ್ಯೆಯನ |
ಪತ್ನಿಯನು (೪)ಮಸ್ತಕದಿ ಪೊತ್ತಿಹನ (೫)ಮಿತ್ರಿಯನು |
(೬)ಪೆತ್ತವನ (೭)ಮೃತ್ಯುವೆನಿಸುತ್ತ ಮೆರವುತ್ತಾಹ (೮)ನಾತ್ಮಜನ
(೯)ಅತ್ತೆಯುವಳಾ ||
(೧೦)ಅತ್ತಿಗೆಯ ಚಿತ್ತಪತಿ (೧೧)ಮುತ್ತವಿಯ (೧೨)ಸತ್ಯಸುತ |
(೧೩)ನತ್ಯಂತ ಭಕ್ತಿಯುತ (೧೪)ಭೃತ್ಯಬಾತನೊತ್ತಿಲಿ (೧೫)ಜ |
ಗತ್ತು ನಿಜನೆತ್ತಿಲಾಂತ್ತುತ್ತುಮನ (೧೬)ಪನೆಗೈದ ನಿತ್ಯನಂ
ತುತ್ತಿಸುವೆನು || ೨ ||

---

ಪದ್ಯ ೨— ೧) ಸೂರ್ಯ, ಪುತ್ರ ೨) ಕರ್ಣನ ೩) ಮುತ್ತ್ಯೆಯ್ಯ= ಮುತ್ತಜ್ಜ. ಶಂತನು ಚಕ್ರವರ್ತಿಯ ಪತ್ನಿ ಗಂಗಾದೇವಿಯನ್ನು ೪) ಮಸ್ತಕದಿ= ತಲೆಯಲ್ಲಿ, ಪೊತ್ತಿಹನ= ಮಹರುದ್ರದೇವರ. ೫) ಮಿತ್ರಿಯನು= ಪಾರ್ವತಿದೇವಿಯ ೬) ಪೆತ್ತಿಹನ=ಹಿಮವತ್ ಪರ್ವತ ರಾಜನಿಗೆ ೭) ಮೃತ್ಯುವೆನಿಸುತ್ತ ಮೆರವುತಿಹನ = ಗೋತ್ರಾರಿ = ಪರ್ವತಗಳಿಗೆ ಮೃತ್ಯುವೆನಿಸುವ= ಇಂದ್ರದೇವರ. ೮) ಆತ್ಮಜನ= ಅರ್ಜುನನ. ೯) ಅತ್ತೆಯುವಳಾ= ಸುಭದ್ರಾನ ತಾಯಿ ದೇವಕಿದೇವಿ ಅರ್ಜುನನ ಅತ್ತೆ. ೧೦) ಈ ಅತ್ತೆ ದೇವಿಕಿಯು ಅತ್ತಿಗಿ = ಕಂಸನ ಹೆಂಡತಿ. ಅಸ್ತಿಪ್ರಾಸ್ತಿ ದೇವಕಿಯ ಅತ್ತಿಗಿಯ ೧೨) ಚಿತ್ತಪತಿ = ಗಂಡ ಕಂಸನ. ೧೧) ಮುತ್ತವಿಯ= ಕಂಸನ ಮುತ್ಯಾ ಆಹುಕ ರಾಜನ ಹೆಂಡತಿಯ. ೧೨) ಸತ್ಯಸುತ= ಉಗ್ರಸೇನ ರಾಜನಲ್ಲಿ ೧೩)ಅತ್ಯಂತಭಕ್ತಿ ಯುತನಾಗಿ ಊಳಿಗ ಮಾಡಿದ ಕೃಷ್ಣನ. ೧೪) ಭೃತ್ಯಬತನೊತ್ತಿಲಿ= ನಿಜವಾದ ಭೃತ್ಯಳು ಅತ್ಯಂತ ಪ್ರೀತಿಯುಳ್ಳ ಧರಾದೇವಿ ಪೃಥ್ವಿಗೆ ಅಭಿ

ಮಾನ್ಯಳಾದ (ಭೂ)ಜಗತ್ತನ್ನು ತನ್ನ ನೆತ್ತಿಲಿ ಬ್ರಹ್ಮಾಂಡವನ್ನು ಧರಿಸಿದ ಉತ್ತಮನಾದ ಶೇಷದೇವನನ್ನು. ೧೬) ಪಶೆಗೈದ = ಹಾಸಿಕೆಯಾಗಿ ಮಾಡಿಕೊಂಡ ಅನಂತ ಪದ್ಮನಾಭನಾದ ಶೇಷಶಾಯಿ ಅನಂತನನ್ನು ಸ್ತುತಿಸುವೆನೆಂದು ಶ್ರೀ ದಾಸರ ಅಭಿಪ್ರಾಯ. ವಾವಿ ಪದ್ಯಗಳು ಬಹು ಅರ್ಥಗರ್ಭಿತವಾದವು ಪುರಾಣಪುರುಷನು ಭೃತ್ಯರಲ್ಲಿ ಭಕ್ತವಾತ್ಸಲತೆ ತೋರಿದ ಕೀರ್ತನೆ ಪುಣ್ಯತಮವಾದುದು

---

ಶ್ರೀ ಹನುಮಂತದೇವರ ಸ್ತುತಿ

೧)ಶತಕಂರನೆಂಬಸುರವಧ್ಯವರ ಪಡೆದು ರಘು ।
ಪತಿಗೆ ಪಗೆಯಾಗಿ ಶಾಖ ದ್ವೀಪದೊಳಿರಲ ।
ಮಿತ ರಾಮ ಸೈನ್ಯವುಂ ನಿಜ ಪೆಗಲೊಳಾಂತೈದು ವಾರಿಧಿಗಳಂ
ಲಂಘಿಸಿ ॥
ಅತಿವೇಗದಿಂದಖಿಳ ಖಳರಸವೆ ಬಡಿದು ಭೂ ।
ಸುತೆಯು ಕರದಿಂ ಮಹಾ ದೈತ್ಯನಂ ತರಿಸಿ ಸುರ ।
ತತಿಯಿಂದ ಪೂಜ್ಯನಾದನಿಲ ಸಂಭೂತ ಮುಖ್ಯ ಪ್ರಾಣನಾಥ
ಸಲಹೊ ॥ ೩ ॥

ಧರ್ಮನ ಶ್ರೀಕೃಷ್ಣಂಗೆ ಪ್ರಶ್ನೆ

ಕವಿಗೇಯ ಕವಿರಾಯ ಕವಿಶಿರೋಮಣಿ ನೀನೆ ।
ಭುವನದೋಳ್ ಪ್ರಾಜ್ಞರಾರುಂಟು ನಿನ್ನಂದದಲಿ ।
ತವಮುಖಾಂಬುಜದಿಂದ ಮಧುರತರವಾದನಂತನ ಸತ್ಕಥಾಮೃತವನು॥
ಸವಿದಿನ್ನು ಶ್ರವಣಂಗಳನವರತ ದಣಿದಪವೆ ।
ವಿವರಿಸುತ್ತರ ಚರಿತ್ರೆಯುವೆನಗೆ ರುಗ್ಮಿಣೀ ।
ಧವನೆ ಕರುಣದೊಳೆಂದು ಕೈಮುಗಿದು ಬಿನ್ನಪಂಗೈದನಾ
ಧರ್ಮಸೂನು ॥ ೪ ॥

---

೧ = ಶತಕಂರನೆಂಬ ರಾವಣನನ್ನು ಹನುಮಂತದೇವರು ಶ್ರೀ ಸೀತಾದೇವರನ್ನು ಪೆಗಲಲ್ಲಿರಿಸಿ ಶಾಕದ್ವೀಪಕ್ಕೆ ಹೋಗಿ ಸೀತಾದೇವಿಯರ ಪ್ರಾರ್ಥಿಸಿ ಅವರಿಂದ ಸಂಹರಿಸಿದ ಕಥೆ ಉತ್ತರ ರಾಮಚರಿತೆ ಆನಂದ ರಾಮಾಯಣದಲ್ಲಿದೆ.

ಶ್ರೀ ಕೃಷ್ಣನು ಧರ್ಮರಾಜಗೆ ಹೇಳಿದ್ದು ಕೌಂಡಿಣ್ಯ ಅನಂತಗೆ ಬಿನ್ನೈಸಿದ

ಹಿಮಕರ ಕುಲೇಂದ್ರ ಕೇಳ್ ಮುಂದಿನ ಚರಿತ್ರೆಯಂ ।
ಕಮಲೇಶ ನಂತನಂ ಕೌಂಡುಣ್ಯ ಮುನಿವರನ ।
ವಿಮಲತರ ಭಕ್ತಿಗತಿ ಸಂತುಷ್ಟನಾಗಿ ವೈದೋರಿ ಕಾರಣ್ಯದಿಂದ ॥
ಸುಮನೋತ್ಸವದ ವರತ್ರಯವಿತ್ತು (೧)ಬೋಳೈಸೆ ।
ಸುಮತಿಯಿಂದಾದ್ವಿಜಂ ಕೊಂಡಾಡುತಲಿ ಬಳಿಕ ।
ಕಮಲೇಕ್ಷಣಂಗೆ ಬಿನ್ನೈಸಿದಂ ಕರವುಟಾಂಜಲಿಯಿಂದಲೀ
ತೆರದೊಳು ॥ ೫ ॥

ಚಿತ್ತಾವಧಾನ ಸರ್ವೇಶ ಸರ್ವಜ್ಞ ನಿ ।
ನ್ನುತ್ತಮಡಿದಾವರೆಯ ಕಾಣಬೇಕೆನುತ ಜೆದ ।
ರುತ್ತ ಬರಲಧ್ವದೋಳೊಂದು ಖಗ ಮೃಗ ಮುಟ್ಟದಿಹ ಚೂತ-
ತರು ಕಂಡೆನು ॥

ಚೂತತರುಗಳಾದಿಗಳಾರು ?

ತುತ್ತುಗೊಳಲೊಂದು ತೃಣ ಬಾಯ್ಗೆ ನಿಲುಕದೆ ಬಳಲು ।
ತತ್ತಿತ್ತ ಸಂಚರಿಪ ಸುರಭಿಯಂ ಕಂಡೆನಾ ।
ಮತ್ತೆ ನಡಿಯಲ್ ಮುಂದೆ ಕೃಶವಾಗಿ ಉಷರದಲಿನಿಂದ
ವೃಷಭನ ಕಂಡೆನು ॥ ೬ ॥

ಸರಸಿಗಳಾರು ? ಖರವೇನು ?

ಅನ್ಯೋನ್ಯ ಜಲ ಸುಕಲ್ಲೋಲ ಮಾಲೆಗಳಿಂದ ।
ಭಿನ್ನವಾಗಿರದೆ ಕಾಣಿಸುವ ದ್ವಯ ಪುಷ್ಕರಣಿ ।
ಯನ್ನು ಕಂಡೆನು ದೇವಬಳಿಕ ಖರವಂ ಮತ್ತೆಕುಂಜರವಕಂಡೆ ಮುಂದೆ॥

ವೃದ್ಧ ಬ್ರಾಹ್ಮಣನಾರು ?

ಬೆನ್ನು ಬಾಗಿದ ವೃದ್ಧ ವಿಪ್ರನಂ ಕಂಡೆ ತನ ।
ಗಿನ್ನಿವರ ದುಷ್ಕೃತ ಸ್ವರೂಪಗಳ ನಿಶ್ಚಯದಿ ।
ಪನ್ನಗಾರಿ ಧ್ವಜನೆ ಕರುಣದಿಂದರುಹೆಂದು ಬೆಸಗೊಂಡಡಿಂತೆಂದನು ॥೭॥

ಅನಂತನು ಚೂತ ವೃಕ್ಷವಾವುದೆಂಬ ಉತ್ತರವೀವ.

ಮುನಿಪುಂಗವನೆ ಕೇಳ್ ರಸಾಲ ಕುಜ ಪೂರ್ವದಲಿ ।
ವಿನುತ ಷಟ್ ಶಾಸ್ತ್ರ ಶ್ರುತಿ ಸಂಪನ್ನನಾದ ದ್ವಿಜ ।

---

೧ ಬೋಳೈಸು=ಸಮಾಧಾನಪಡಿಸು, ಮೈಚಪ್ಪರಿಸು

ಘನಸು ವಿದ್ಯಾಗರ್ವದಿಂ ಪೂರ್ವ ಶಿಷ್ಯಜನಕಕ್ಷರೊಂದನು ಪೇಳದೆ ||
ಅನವರತ ಲೋಭತ್ವ ವಂ ಮಾಡಿದಘದಿಂದ |
ವನದೊಳಗೆ ಚೂತ ಹೆಮ್ಮರನಾಗಿ ಪುಟ್ಟಿದನು |
ದಿನವಂದು ಮೃಗಪಕ್ಷಿ ಕ್ರಿಮಿಕೀಟ ಪ್ರಾಣಿಗಳ್ಮುಟ್ಟದೇಕಾಕಿಯಾಗಿ ||೮||

ವಿದ್ಯಾದಾನ ಮಾಡದಿರುವಿಕೆ

ಓದಿ ಸಚ್ಛಾಸ್ತ್ರಮಂ ಗುರುಮುಖದಿ ವಿದ್ಯಾರ್ಥಿ |
ಯಾದ ಶಿಷ್ಯರಿಗೊರದು ವೇದಾರ್ಥವಮಂ ಕಾಮ |
ಕ್ರೋಧ ಮದ ಮತ್ಸರವ ಗರ್ವವಂ ಬಿಟ್ಟು ಸಜ್ಜನರ ದೂಷಣೆ
ಮಾಡದೆ ||

ವಾದಿಸದೆ ಜ್ಞಾನಿಗಳ ಕೂಡೆ ಸಾತ್ವೀಕ ತರ |
ಹಾದಿಯಲಿ ನಡೆದಡಾ ದ್ವಿಜ ಸುಗತಿಯಂ ಪಡೆವ |
ಮೇದಿನಿಯೊಳಕ್ಷರವ ದಾನ ಮಾಡದ ವಿಪ್ರ ಕುಜನಾಗಿ
ಸಂಭವಿಸುವ || ೯ ||

ಗೋವತ್ಸ ಸಹವಾದರು ಆರೆಂಬುದಂ ಪೇಳ್ವೆ

ಮೌನೀಶ ಕೇಳಿನ್ನು ಗೋ ಪೂರ್ವ ಜನ್ಮದಲಿ |
ಮಾನವಶ್ರೇಷ್ಠ ಸಿರಿವಂತನಾಗಿರುತಿರ್ದು |
ದೀನತ್ವಬುದ್ಧಿಯಿಂ ಫಲರಹಿತವಾ(೧)ದುಷರಭೂಮಿಯಂ ಬ್ರಾಹ್ಮಣಂಗೆ||
ದಾನವಮಂ ಕೊದಲು ತದ್ದೋಷದಿಂದೀ ಘೋರ |
ಕಾನನದೊಳಿದೆಮಟ್ಟ ಪುಲ್ಲಿನೋಳ್ ಚರಿಸುತ್ತ |
ಹೀನ ಸತ್ವದೊಳೊಂದು ತೃಣ ಭಕ್ಷಿಸಲ್ಬಾಯಿಗೆ ನಿಲುಕದತಿ
ಬಳಲುತಿಹದು || ೧೦ ||

ಸತ್ಪಾತ್ರರಲ್ಲಿ ಹಸನಾದ ಭೂದಾನ

ಆದರಿಂದ ಸಜ್ಜನಜ್ಞಾನಪೂರ್ವಕದಿಂದ (ವಾಗಿ) |
ಮುದದಿಂದ ಸರ್ವಫಲವೀವ ಹಸನಾದ ಮಹಿ |
ಸದಮಲಾಚಾರಸಂಪನ್ನ ಶ್ರೋತ್ರಿಯ ಕುಟುಂಬಸ್ತನಾಗಿರ್ದ ಬುಧಗೆ ||
ವಿಧಿಯಿಂದ ದಾನವಮಂ ಕೊಟ್ಟು ಪಾಪೌಘಗಳ |

೧ ಉಷರಭೂಮಿ = ಸವಳುಭೂಮಿ

ನೊದದು ದಿವಿಯಲ್ಲಿ ಸುರರಿಂದ ಪೂಜಿತರಾಗಿ ।
ಪದುಳದಿಂ ಬಹುಕಾಲ ಸುಖವನನುಭೋಗಿಸುತ ಪರಮ ಪದವುಂ
ಪಡೆವರು ॥ ೧೧ ॥

ಭೂದಾನ ಮಹಿಮೆ

ಭೂಮಿದಾನದಕಿಂದಧಿಕ ದಾನ ಮತ್ತೊಂದು ।
ಭೂಮಿಯೊಳಗಿಲ್ಲಖಿಳ ವಸ್ತುಗಳ್ಪುಟ್ಟುವವು ।
ಭೂಮಿಯೊಳಗದ ಕಾರಣಂ ಧರಾ ದಾನವೇ ಮಿಗಿಲೆನಿಸುವದು
ತಿಳಿಯಲಾದ ॥
ನೇಮದಿಂ ತಾನಿತ್ತ ದಾನದಿಂ ಪರರಿತ್ತ ।
ಭೂಮಿದಾನವ ಪಾಲಿಸಲ್ ದ್ವಿಗುಣ ಪುಣ್ಯ ಬಹ ।
ದೀ ಮಹೀಸುರರಿಗಿತ್ತವನಿಯುಪಹರಿಸಲವ ಬೀಳ್ವರವರವ
ನಿರಯದಿ ॥ ೧೨ ॥

ಬ್ರಹ್ಮಸ್ವವೇ ಸರ್ವ ವಿಷಪುಂಜ

ಗರಳಗರಳಲ್ಲ ಬ್ರಹ್ಮಸ್ವವೇ ವಿಷದಿಟಂ ।
ಗರಳುಂಡ ರೋರ್ವನಂ ಕೊಲ್ಲುವದು ಬ್ರಹ್ಮಸ್ವ ।
ಹರಣಮಾಡಲ್ಕೈವನ ಪುತ್ರ ಪೌತ್ರಾದಿಗಳ ತರಿವುದೈ ದಾವಾನಳ ॥
ಉರುಹುವದು ಕಾನನ ದೊಳಿರ್ದ ಮಲೆ ಗುಲ್ಮಲತೆ ।
ಮರದ ಬೇರುಳಿದು ಬ್ರಹ್ಮಸ್ವವೆಂಬಗ್ನಿ ಸಲೆ ।
ಕರಿಕು ಮಾಡುವದು ಕುಲ ಮೂಲವುಂ ದ್ವಿಜರೂಡವೆ ದಕ್ಕುವದೆ
ಜೀವಿಗಳ್ಗೆ ॥ ೧೩ ॥

ಉತ್ತಮ ಭೂದಾನ ದ್ವಿಜರಿಗಿತ್ತ ಫಲ

ಭೂದಾನವಿತ್ತವನ ಕಿಂದುತ್ತಮಂ ದಾನ ।
ಸಾದರದಿ ಪಾಲಿಸುವ ನರ ಧರೆಯ ಕೊಟ್ಟವಂ ।
ಗಾದಿವಿಯು ಸಮನಿಹುದು ರಕ್ಷಕಂಗಪವರ್ಗವಾಗುವದು ಮುನಿಯೆ
ಕೇಳು ॥
ಮೇದಿನಿಯು ಓರ್ವಳೊಶಳಲ್ಲ ಬಹು ಜನರಾಳ್ದು ।
ಪೋದರವನಿಯ ತನ್ನದೆಂದು ನೆಚ್ಚದಲಿ ಸಂ ।
ಪಾದಿಸಲಿಬೇಕು ಪುಣ್ಯವ ಸುಜನರಮಳ ಗಂಪ್ವರಿದಾನ
ದ್ವಿಜರಿಗಿತ್ತು ॥ ೧೪ ॥

ದ್ವಿಜರ ಉತ್ತಮತ್ವವರ್ಣನೆ

ದ್ವಿಜರುತ್ತಮರು ವರ್ಣದೊಳಗೆನ್ನ ಮುಖದಿಂದ ।
ದ್ವಿಜರುದಿಸಿದರ್ ಸರ್ವಭುವನವೆನ್ನಾಧೀನ ।
ನಿಜವಾದ ಮಂತ್ರಗಳಧೀನನಾ ತನ್ಮಂತ್ರ ನಿಕರವಾ ದ್ವಿಜರಧೀನ ॥
ದ್ವಿಜರೆನ್ನ ಕುಲದೈವವೆಂದು ಮನ್ನಿಸುವೆ ದಿಟ ।
ದ್ವಿಜ ದೇವನೆಂದೆನ್ನ ಬಣ್ಣಿಸುವರದರಿಂದ ।
ದ್ವಿಜರೆ ದಾನಕೆ ಯೋಗ್ಯರವರನಂ ಪೋಷಿಸುವ ಜೀವಿಯೆ
ಮದ್ಭಕ್ತನು ॥ ೧೫ ॥

ಶ್ರೀ ಹರಿಯು ಭಕ್ತರಾರೆಂಬುದಂ ಪೇಳ್ದ

ಅಧಿಕವಾಗಲಿ ಸ್ವಲ್ಪವಾಗಲಿದು ಫಣಿಯಲ್ಲಿ ।
ವಿಧಿಲಿಖಿಸಿದೋಲ್ (೧)ಶಾಡ್ವಲದ ನೆಲದೊಳಿರೆ ನೀರು ।
ಕುಧರದಲ್ಲಿರೆ ಪ್ರಾಪ್ತಿಯಾಗುವದು ದೃಷ್ಟವೆಂಬೀ ಘಟವಕೂಪದೊಳಗೆ ॥
ಉದಕಪರಿಮಿತ ತುಂಬಿ ಬಪ್ಪದಬ್ಧಿಯೊಳಿಡಲು ।
ಅಧಿಕ ಜಲಬರಲರಿದುದದರಿಂದ ಧನಕಾಗಿ ।
ಬುಧಜನರು ಪರರಿಂಗೆ ದೈನ್ಯವಬಡದೆ ಧೈರ್ಯದಿಂದರ್ಪವನೆ
ಮದ್ಭಕ್ತನು ॥ ೧೬ ॥

ಅಪಾತ್ರರಲ್ಲಿ ದಾನಫಲ

ನೀರ ಬೊಬ್ಬಾಳಿಯಂತೆ ನಶ್ವರ ಶರೀರಸಂ ।
ಸಾರಸುಖ ಸಿರಿಸ್ವಪ್ನ ತುಲ್ಯವೆಂದರಿದು ಮಿಗೆ ।
ಸಾರ ಹೃದಯರ್ ಧರ್ಮವೇ ಮುಕ್ತಿಪಥಕೆ ಸೋಪಾನದಿಟವೆಂದು
ತಿಳಿದು ॥
ಚಾರುತರ ಭೂಮಿದಾನವ ಮಾಡಲಿಹ ಪರದಿ ।
ಭೂರಿಸೌಖ್ಯಂದಳೇ ಪರುಷ ರವಸಿಯದಾನ ।
ಕ್ರೂರನರರೀಯ ಲತಿದುಃಖವನು ಭೋಗಿಸುತ ಪಶುವಾಗಿ ಜನಿಸುವರಿಲೆ
॥೧೭॥
ಕೇಳಿಲೆ ತಪೋಧನಪ ಗೂಳಿಯ ವಿಚಾರ ಭೂ ।

೧ ಶಾಡ್ವಲ (ಸಂ) ಎಳೆಹುಲ್ಲಿನಿಂದ ಹಸುರಾದ ಭೂಮಿ, ಹಸುರು ಹುಲ್ಲು.

ಪಾಲನಾಗಿರ್ದ ಹಿಂದಿನ ಜನ್ಮದಲಿ ಸುಗುಣ ।
ಶೀಲತೆಗೆದಾನಕಿಂಚಿತ ವೀಯುದಲೆ ಲೋಭಬುದ್ಧಿಯಿಂ ಡಂಬಕವನು ॥

ಡಂಬಕವೃತ್ತಿಯಿಂ ಖೂಳರಿಗೆ ದಾನ

ತಾಳಿಧನ ಸನ್ಮಾರ್ಗದೊಳ್ ವೆಚ್ಚಿನದೆ ಸತತ ।
ಖೂಳರ್ಗೆ ತನ್ನನುರೆ ಕೊಂಡಾಡುವರಿಗಿತ್ತು ।
ಕಾಲಮಂಕಳೆದ ವಿಷಯಾಸಕ್ತನಾಗಿ ಕೃತಕೃತ್ಯಮಂತಿಳಿಯದೆ ॥ ೧೮ ॥
ತದ್ದೋಷದಿಂದಾ ನೃಪಾಲ ಪಶುಯೋನಿಯೊಳ್ ।
ಬಿದ್ದುಗೋಪತಿಯಾಗಿ ಘೋರಟವಿಯೊಳ್ ಬಳಲು ।
ತಿದ್ದಪಂಕೃಶನಾಗಿ ಶಾಡ್ವಲದ ಭೂಮಿಯುಲಿ ತೃಣಜಲಂಗಳ ಕಾಣದೇ ॥
ಶುದ್ಧಸ್ವಭಾವದವರಿದ ನರಿತು ಭಕ್ತಿಯುಲಿ ।
ಬುದ್ಧಿಪೂರ್ವಕದಿಂದ ಸಪ್ಪಾತ್ರರಾದ ಪ್ರ ।
ಬುದ್ಧ ಬ್ರಾಹ್ಮರಿಗೆ ದಾನಾದಿಗಳ್ಮಾಡಿದರ ಸ್ವರ್ಗಾಲಯುವ ಸಾರ್ವರು ॥೧೯॥

ಸತ್ಪಾತ್ರರಲಿ ಸದ್ದಾನ ಫಲ

ಸತ್ಪಾತ್ರದಾನದಿಂ ಧನವಂತರಾಗಿಳಿಯೋ ।
ಳುತ್ಪನ್ನರಾಗಿ ಸುಖಿಸುತ ಧನದಡಿಶೆಯಿಂ ಮ ।
ಹತ್ಪುಣ್ಯಮಂ ಫಳಿಸಿ ಕೊಂಬರಾ ಸುಕೃತದಿಂ ಭೋಗಿಸುವರಾದಿವಿಯಲಿ॥
ಮತ್ಪಾದಪಂಕಜವ ಕಾಣ್ಬರವರಂತೆಯುಲಿ।
ಸತ್ಪುರುಷರವರನಂ (ನಾ) ಪೋಷಿಸುವೆನದರಿಂದ ।
ಸತ್ಪಾತ್ರದಾನವೇ ಮುಖ್ಯಸಾಧನ ಪುಣ್ಯವಂತರಿಗೆ ಭೂತಳದೊಳು॥೨೦॥

ಅನ್ನದಾನದ ಫಲ

ಅನ್ನದಾನದ ವಿಷಯುದಲ್ಲಿ ಪಾತ್ರಾ ಪಾತ್ರ ।
ರನ್ನು ನೋಡದಲೆ ಮನದಣಿ ವನ್ನದಾನವಂ ।
ಚನ್ನಾಗಿ ಸರ್ವ ಜೀವರಿಗಿತ್ತರವನಿರುತ ಮೃಷ್ಟಾನ್ನ ಭುಂಜಿಸುವನು ॥
ಕನ್ಯಾದಿ ಗೋ ಭೂಮಿ ದಾನವುಂ ಜ್ಞಾನ ಸಂ ।
ಪನ್ನ ಸತ್ಪಾತ್ರರಿಂಗೆ ತಿಳದೀಯ ಬೇಕಿದಂ ।
ಮನ್ನಿಸದೆ ಡಂಭಕದೊಳವಿಚಾರದಿಂದೀಯೆ ದುರ್ಯೋನಿಯೊಳ್ ಜನಿಸುವ ॥ ೨೧ ॥

ಡಂಬಕದ ದಾನ ಫಲವಿಲ್ಲ

ಡಂಬಕದೊಳೇನೇನು ಪೂಜೆ ಮಾಡಿದರು ಕೈ ।
ಕೊಂಬುವಂ ತಾನಲ್ಲ ಸ್ನಾನಸತ್ಕ್ರೀಯು ಜಪ ।
ಡಂಬಕದೊಳತಿ ದಾನವಿತ್ತರದು ನಿಷ್ಫಲಂ ಬೂದಿಯೊಳ್ಹೋಮಿದಂತೆ ॥

ಭಕ್ತಿಯಿಂ ದಾನವಿತ್ತರೆ ಸತ್ಫಲ

ಅಂಬು ಫಲಪುಷ್ಪ ಪತ್ರಂಗಳಾದರು ಭಕ್ತಿ ।
ಯಿಂ ಬುಧಜನರ್ಗಿತ್ತರಾ ಪುಣ್ಯ ಜೀವರ್ಗೆ ।
ಬೆಂಬಿಡದೆ ಬಾಹದೈ ಬಯಲಡಂಬಕದಿಂದ ಪುರುಷಾರ್ಥ
ಲೇಸಿಲ್ಲವು ॥ ೨೨ ॥

ವರಮಹತ್ಮೆ ಜ್ಞಾನಪೂರ್ವ ಸುಧೃಡ ಸ್ನೇಹ ।
ಭರಿತ ಭಕ್ತಿಯೊಳೆನ್ನ ಮೊರೆಯೊಗಲು ನಿನಗೊಲಿದೆ ।
ಪರಮ ಭಕ್ತಿಯು ಮುಕ್ತಿಪಥಕೆ ಸಾಧನ ಸತ್ಯ ಕೌಂಡಣ್ಯ ಋಷಿಯೆ
ಕೇಳು ॥

ಸ್ಥಿರಭಕ್ತಿ ಮಾಳ್ಪವಗೆ ವ್ಯೆದೋರ್ವೆನಾ ಭಕ್ತಿ ।
ವಿರಹಿತಂ ನರ ತೀರ್ಥ ಯಾತ್ರೆ ಮಾಡಲು ವ್ಯರ್ಥ ।
ಪುರುಷ ವರ್ಜಿತಳಾದ ಸತಿಯು ಜವ್ವನದಂತೆ ಭಕ್ತಿಯುಳ್ಳವ
ಸಜ್ಜನಾ ॥ ೨೩ ॥

ಸಜ್ಜನ ಸಂಗ ಫಲ ವಿವರಣೆ

ಸಜ್ಜನರ ಸಂಗ ಸಜ್ಜನರೊಡನೆ ಸಲ್ಲಾಪ ।
ಸಜ್ಜನರ ಸೇವೆ ದೊರಕೊಂಬದತಿ ದುರ್ಲಭಂ ।
ಮಜ್ಜನಂ ಗೈಯೆ ತೀರ್ಥಂಗಳಲಿ ತತ್ಫಲವ ಚಿರಕಾಲದೊಳೀವವು ॥
ಸಜ್ಜನರ ದರ್ಶನದಿ ಸದ್ಯ ಫಲವಾಗುತಪ್ಪ ।
ರಜ್ಜು ಬಂಧದಿ ಮುಕ್ತರಾಗುವರ್ ನರರೆನಗೆ ।
ಸಜ್ಜನರೆ ಬಂಧುಗಳು ಸಜ್ಜನರ ಹೃದಯ ಮನೆ ಸಜ್ಜನರಿಗೇ
ಒಲಿವೆನು ॥ ೨೪ ॥

ಅಸಜ್ಜನರಿಗೆ ದಾನವಿತ್ತ ಕಾರಣ ಗೂಳಿಯಾಗಿ ಜನಿಸಿದ್ದಾನೆ

ಇನಿತು ಸಜ್ಜನ ಮಹಿಮೆ ತಿಳಿಯದವರಿಗೆ ದಾನ ।
ಜನಪ ಮಾಡದೆ ಕುತ್ಸಿತರಿಗಿತ್ತ ದೋಷದಿಂ ।

ಜನಸಿದಂ ಪಶುವಾಗಿ ನಾಕದಂತಿರಲಿನ್ನು ದ್ವಯ ಸರಸಿಗಳ ಕಥನವಾ ||

ಸರಸಿಗಳಾರೆಂಬುದಂ ಕೇಳು

ಮುನಿಪಕೇಳ್ ಪೂರ್ವಜನ್ಮದೊಳೀರ್ವ ಜೀವಿಗಳ್ ।
ತನುಸಮ್ಮಂಧಿಗಳಾಗಿ ಪುಟ್ಟಿ ಧರ್ಮಾಧರ್ಮ ।
ವನು ವಿಚಾರಸದೆ ತಮ್ಮೊಳು ತಾವು ದಾನಗಳ ಮೋಹದಿಂ
ಮಾಡಿಕೊಳಲು || ೨೫ ||

ಸ್ವಾರ್ಥದಿಂ ಸ್ವಜನರಲ್ಲಿ ದಾನಮಾಡಬಾರದು

ಪರರಿಗೊಮ್ಮೆಯು ಸರ್ವಥಾ ದಾನ ಧರ್ಮಗಳ ।
ನೆರೆಮಾಡದನ್ಯೋನ್ಯ ಸ್ವಾರ್ಥದಿಂ ಜೀವಿಸಿದ ।
ದುರಿತದೊಶದಿಂದೀಗ ನಿರ್ಜರಾರಣ್ಯದೋಳ್ ದ್ವಯಸರೋವರಗಳಾಗಿ||
ಪರರಿಗುಪಕಾರವಾಗದ ಲೋಭಿ ಧನದಂತೆ ।
ಬರಿದೊಂದೆರುದಕೊಂದರೋಳ್ ಬೀಳುತಂಬುಗಳ ।
ಕುರುಹು ತಿಳಿಯದ ತೆರದೊಳುದಿಸಿದವು ಜಡಮತಿಗಳೆನಿಸಿ
ಧಾರುಣಿ ತಳದೊಳು || ೨೬ ||

ಜ್ಞಾನಪೂರ್ವಕ ಜ್ಞಾನಿಗಳಲ್ಲಿ ದಾನ

ದಾನಧರ್ಮವಮಾಳ್ಪ ವಿಷಯದಲಿ ತಿಳಿದು ಸು ।
ಜ್ಞಾನಿಗಳ್ ನಿರ್ವ್ಯಾಜ ನಿಷ್ಕಾಮ ಪೂರ್ವಕದಿ ।
ಸಾನುರಾಗದಿ ಪರರಿಗಿತ್ತರದು ಸಾರ್ಥಕಂ ಕೌಂಡಣ್ಯ ಮುನಿಯೆಕೇಳು ||
ಮಾನವರು ನಶ್ವರಸ್ಥಿರ ಸುಖಾಪೇಕ್ಷೆಯಿಂದ ದೇ ।
ಹಾನುಬಂಧಿಗಳಾದವರ್ಗೆ ದಾನವನೀಯೆ ।
ಕಾನನದೊಳುದಿಸುವರ್ಜಡರಾಗಿ ಧಿಟವಿನ್ನು ಖರಗಜದ ಬಗೆ
ಪೇಳುವೆ || ೨೭ ||

ಖರಾದಿಗಜಗಳಾರೆಂಬುಂದಂ ಪೇಳ್ವೆ

ನಿನ್ನ ಕ್ರೋಧವೆ ನಿನಗೆ ಖರವಾಗಿ ತೋರಿದದು ।
ನಿನ್ನ ಮದವೇ ಮತ್ತೆ ಗಜವಾಗಿ ಕಾಣಿಸಿದು ।
ದೆನ್ನಗರ್ವದಿ ತಿರಸ್ಕಾರ ಮಮಾಡಲೈಶ್ವರ್ಯವಂ ಪೋಗಿನಿನ್ನಾ ||
ಬೆನ್ನುಬಿದ್ದಾದರಿದ್ರದ ದುಃಖವೇ ಭಂಪೋ ।
ತ್ಪನ್ನ ಘೋರಾರಣ್ಯವಾಗಿ ತೋರಿತು ಕಣ್ಗೆ ।

ಬನ್ನಗೊಳುತಿರೆ ನಿನ್ನ ಸಂತೈಸಿದಾ ವೃದ್ಧ ಬ್ರಾಹ್ಮಣನೆ ತಾನೆಂದನು॥೨೮॥

**ಶ್ರೀಮದನಂತನು ಕೌಂಡಿಣ್ಯನಿಗೆ ಆಶೀರ್ವದಿಸಿ ವೈಗರದ**

ನೀಕೇಳಿದಿನಿತೆಲ್ಲವಂ ಪೇಳ್ದೆನೆಲೆ ವಿಪ್ರ ।
ನಾಕಿನ್ನು ಪೋಗು ಮನಬಂದಂತೆ ಸುಖಿಸುವುದು ।
ಬೇಕಾದ ಸಂಪದವು ನಿನಗೊದಗುವದು ಸತ್ಯ ಬಿಡದನಂತನ ವ್ರತವನು॥
ಕೈಕೊಂಡು ದೇಹ ಮುಳ್ಳಲ್ಲಿ ಪರಿಯಂತರ ದೊ ।
ಳೇಕ ಮಾನಸನಾಗಿ ಭಕ್ತಿಯಿಂದಾಚರಿಸು ।
ನಾ ಕರುಣಿಸಿದ ವರತ್ರಯ ಸಫಲವಾಗುವದು ಮತ್ತೆ ವರಗಳ
ನೀವೆನು ॥ ೨೯ ॥

ಸತಿ ಪುತ್ರ ಪೌತ್ರರಿಂದೊಡಗೂಡಿ ಚಿರಕಾಲ ।
ಕ್ಷಿತಿಯೊಳಗ ಸರ್ವ ಕಾಮಗಳನನುಭೋಗಿಸುತ ।
ಲತಿ ಹರುಷದಿಂದಿರ್ದು ಬಳಿಕೂರ್ಧ್ವಲೋಕದೋಳ್ ನಕ್ಷತ್ರಸ್ಥಾನಕೈದಿ॥
ಅತಿಶಯದ ಸುಖವನುಂಡಂತ್ಯೆಯಲಿ ಮೋಕ್ಷಸ ।
ದ್ಗತಿಯ ನಾರುವದೆಂದು ಕೃಪಯಿಂದ ವರವ ಮುನಿ ।
ಪತಿಗಿತ್ತನಂತ ಸದ್ಗುಣಪೂರ್ಣ ಹರಿಯಲ್ಲೆ ವೈಗರದನಾಕ್ಷಣ
ದೊಳು ॥ ೩೦ ॥

**ಕೌಂಡುಣ್ಯನಿಗೆ ಸಕಲ ಸೌಭಾಗ್ಯ**

ಭರತಕುಲ ರನ್ನ ಕೇಳ್ ಮುನಿನಾಥ ಶ್ರುತಿಗಾಥ ।
ಹರಿಯ ಪರಮಾಶ್ಚರ್ಯ ಲೀಲೆಗಳ ಮಾಲೆಗಳ ।
ಹರುಷಮಯನಾಗಿ ಕೊಂಡಾಡುತ್ತ ಪಾಡುತ್ತ ತನ್ನಾಶ್ರಮಕ್ಕೆ ಬರಲು ॥
ಮೆರದುದಾಮನೆ ಮೊದಲ ತೆರದಿಂದ ಭರದಿಂದ ।
ಭರಿತವಾತ್ಯೈಶ್ವರ್ಯ ಏನಂಬೆ ಜಗದಂಬೆ ।
ಸಿರಿದೇವಿ ಸ್ಥಿರವಾಗಿ ನಿಂದಳ್ಳೆ ಬಂದಳ್ಳೆ ಪತಿಯಾಜ್ಞೆ ಶಿರ
ದೊಳಾಂತು ॥ ೩೧ ॥

**ಕೌಂಡಣ್ಯನಿಗೆ ಸಕಲ ಜನ ಮನ್ನಿಸುವಿಕೆ**

ಬಂಧುಗಳ್ ಕಂಡು ಸಂಭಾವಿಸಿದರಾ ಋಷಿಯ ।
ವಂದಿಸಿದರಖಿಳ ಜನರೆಲ್ಲ ಮಹಾತ್ಮನೀ ।
ನೆಂದು ಕೌಂಡುಣ್ಯಂಗೆ ಶತ್ರುರೆಲ್ಲಾ ಮಿತ್ರರಾಗಿ ಮನ್ನಣೆಗೈದರು ॥

ನಿಂದಲ್ಲಿ ಕನಕ ಮಳೆ ಸುರಿದುದಾ ಮಂದಿರ ಪು ।
ರಂದರನ ಭವನದೋಲ್ ಸೌಭಾಗ್ಯಮಯವಾಯಿ ।
ಇಂದಿರಾಪತಿಯೊಲಿಯೆ ಸರ್ವಕಾಮಿತವೆಲ್ಲ ಕೈಸಾರ್ದವಾಕ್ಷಣ
ದೊಳು ॥ ೩೨ ॥

ಹರಿಯೊಲಿಸೆಯೇ ಮುಖ್ಯ

ಹರಿಯ ಕರುಣಾಕಟಾಕ್ಷದ ಬಲವೇಬಲ ನರರಿ ।
ಗರಸಕೇಳ್ ಹರಿಯೊಲಿಯೆ ಸರ್ವಜನರೊಲಿವಪ್ಪೈ ।
ಹರಿಯುದಯವಾಗಲಾ ಪೂರ್ವದೋಲ್ ಕೌಂಡಿಣ್ಯ ಶ್ರೀಮಂತನಾಗಿ
ಬಳಿಕಾ ॥

ತರುಣಿಯರ ಮಣಿಯಾದ ಶೀಲೆಯಿಂದೊಡಗೂಡಿ ।
ಪರಮಮಂಗಳ ವೀವನಂತನಸು ನೋಂಪಿಯಂ ।
ಸ್ಥಿರಭಕ್ತಿಯಿಂದ ಕೈಕೊಂಡಾಗ ಪೂಜಿಸಿದ ವಿಭವಾನು ಸಾರದಿಂದ॥೩೩॥

ಕೌಂಡಣ್ಯನು ಅನಂತನ ವ್ರತಾಚರಿಸಿ ಪುನರ್ವಸುಸ್ಥಾನ ಸೇರ್ದ

ಆದಿಮಧ್ಯಾಂತಿಯಲಿ ಪೂರ್ವೋಕ್ತ ವಿಧಿಯಿಂದ ।
ಸಾದರದೊಳುದ್ಯಾಪಿಸಿಯ ನೆಸಗುತಾ ವ್ರತವ ।
ಮೋದದಿಂ ನೋನುತೀಪ್ಸಿತ ಭೋಗಗಳ ಭುಂಜಿಸುತ ಪುತ್ರಪೌತ್ರರಿಂದ॥
ಮೇದಿನಿಯ ಮ್ಯಾಲಿ ವಿಖ್ಯಾತನಾಗಿರ್ದು ಕೊನಿ ।
ಗಾದಿವಿಜ ಲೋಕದೋಳ್ ಕಲ್ಪ ಪರಿಯಂತರದಿ ।
ಭೂದೇವಮೌಳಿ ಕೌಂಡುಣ್ಯ ಸಾರಿದ (೧)ಪುನರ್ವಸು ತಾರೆಯಾ
ಸ್ಥಾನವಾ ॥ ೩೪ ॥

ಶ್ರೀ ಕೃಷ್ಣನು ಧರ್ಮಜಗೆ ಹಿಂದಿನವರ ವ್ರತಾಚರಣೆ ಪೇಳ್ದ

ಉರ್ವೀಶಕೇಳ್ ನೋಡಲದ್ಯಾಪಿ ಕಾಣಿಸುವ ।
ಪೂರ್ವೇಂದ್ರ ಗಗನದೋಳ್ನಕ್ಷತ್ರ ಮಂಡಲದಿ ।
ಗೀರ್ವಾಣರಿಂ ಪೂಜ್ಯನಾಗಿರ್ಪದಿವ್ಯ ವ್ರತನೋತತ್ಪುಣ್ಯದಿಂದ ॥
ಪೂರ್ವದಲಿ ಧನಪನನಂತನನೋಪಿಯುಂಭಕ್ತಿ ।
ಪೂರ್ವಕದೊಳಾಚರಿಸಿ ದಿಕ್ಪಾಲನಾದ ನೃಪ ।

---

೧ ಪುನರ್ವಸು=ನಕ್ಷತ್ರ

ಸಾರ್ವಭೌಮರ್ ಸಗರ ಭರತ ರೀವ್ರತ ಮಾಡಿ ರಾಜ್ಯಸುಖ
ದಿಂದಾಳ್ದರು ॥ ೩೫ ॥

ನಳರಾಯ ನಿನ್ನಂತೆ ಜೂಜಿನಲಿ ಧರೆ ಸೋಲ್ದು ।
ಹಳುವುದಲಿ ಬನ್ನಬಡುತೀ ಮನೋಹರ ವ್ರತವ ।
ಒಲಿದು ಕೈಕೊಂಡನಂತನ ಪೂಜೆಯಂ ಮಾಡಲಾಪುಣ್ಯ ದೇಳ್ಗೆಯಿಂದ ॥
ಬಲವಂತನಾಗಿ ಪಗೆಯಾದ ದಾಯಾದನಂ ।
ತುಳಿದು ಸಂಹರಿಸಿ ನಿಜರಾಜ್ಯಮಂ ಭೋಗಿಸುತ ।
ಲಿಳೆಯೊಳಗೆ ವಿಖ್ಯಾತನಾದ ನಿರ್ಣಯದಿಂದ ಕೌಂತೇಯ
ಕೇಳೆಂದನು ॥ ೩೬ ॥

ಹಿಂತಿನ ಹರಿಶ್ಚಂದ್ರಾದಿ ರಾಜರೆಲ್ಲರ್ ಅನಂತನಂ ಭಜಿಸಿ ಫಲವೈದಿದರು

ತಪನಕುಲದವನಿಪ ಹರಿಶ್ಚಂದ್ರ ಸತ್ಯದಿಂ ।
ಕಪಟ ಕೌಸಿಕ ಮುನಿಪನಿಂದ ಸಕಲೈಶ್ವರ್ಯ ।
ವಪಹರಿತನಾಗಿ ಸಂಕಟಗೊಳುತಲೀ ಪರಮ ಮಂಗಳ ಸುನೋಪಿ
ನೋತು ॥
ಅಪರಿಮಿತ ಭಾಗ್ಯ ಸಂಯುತನಾಗಿ ಸೌಖ್ಯದಿಂ ।
ವಿಪುಳ ಸ್ವರ್ಗಾಲಯವ ಸಾರ್ದಮಾಂಧಾತ ಸಿಬಿ ।
ನೃಪಪ್ರಥು ದಿಲೀಪರೀ ವ್ರತ ಮಾಡಿ ರಾಜ್ಯಮಂ ನಿಷ್ಕಂಟಕ
ದೊಳಾಳ್ದರು ॥ ೩೭ ॥

ನಹುಷಾಂಬರೀಷ ರುಕ್ಮಾಂಗದ ಭಗೀರಥ ।
ವಿರ್ಹಿರ ಸೋಮಾನ್ವಯದ ಭೂಭುಜಾದಿಗಳೆಲ್ಲ ।
ವಿಹಿತದಿಂದೀ ನೋಪಿ ನೋತು ಸಾಂಬ್ರಾಜ್ಯಾಧಿಪತ್ಯಮಂ
ಭೋಗಿಸಿದರು ॥
ಮಹಿರಮಣ ಕೇಕ್ಷ್ರಮುಖಜನಪ ರಿವರಲ್ಲದಲೆ ।
ಬಹು ನೃಪಾಲರ್ ಪಿಂತೆನಂತನಂ ಪೂಜಿಸ ।
ಲ್ಕಿಹ ಪರದೊಳಾನಂದವಂ ಭುಂಜಿಸುತ ಜಗವ ಕೀರ್ತಿಯಿಂ
ಬೆಳಗುತಿಹರು ॥ ೩೮ ॥

ಅನಂತನ ವ್ರತಾಚರಣೆ ಮಹಿಮೆ

ಈ ದಿವ್ಯ ವೃತವನೇಂ ಭಕ್ತಿಯಿಂ ಮಾಳ್ಪಂಗೆ ।
ಬಾಧಿಸದು ಸಂಸಾರ ದುಃಖವೆಂದೆಂದು ನರ ।

ಕಾದಿ ಪೀಡಿಗಳಿಲ್ಲ ಶತ್ರುಭಯವಿನಿತಿಲ್ಲ ದಾರಿದ್ರ ಸ್ಪರುಶವಿಲ್ಲ ||
ಆಧಿದೈವಿಕವಾಧಿ ಭೌತಿಕಾಧ್ಯಾತ್ಮಕ ವಿ ।
ರೋಧ ತಾಪತ್ರಯಘ ಸಮ್ಮ(ಂಬ)ಂಧವಿಲ್ಲ ವಿಮ ।
ಲೋದಕದೊಳಿರ್ದ ಕನುಲದ ಪತ್ರದಂತೆ ನಿರ್ಧೂತ ಕಿಲ್ಮಿಷ
ನಾಗುವಾ || ೩೯ ||

ಮಂಗಳಕೆ ಮಂಗಳಂ ಪಾವನಕೆ ಪಾವನು ।
ತ್ತುಂಗನಂತನ ವ್ರತಕೆ ಸರಿಯಾದ ವ್ರತವಿಲ್ಲ ।
ಸಂಗರದೊಳರಿಗಳಂ ಗೆಲ್ವ ವ್ರತ ನೋತವಂ ವ್ರತದೊಳುತ್ತುಮ
ವ್ರತವಿದು ||

ಗಂಗಾದಿ ತೀರ್ಥಗಳ ಸ್ನಾನ ತಪ ಹೋಮ ಯಾ ।
ಗಂಗಳ ಸುಕ್ಷೇತ್ರವಾಸದ ಮಹಾ ವಿಮಲ ಪು ।
ಣ್ಯಂಗಳಿಗೀಡಿಲ್ಲವೀ ಪರಮಪಾವನವಾದ ನೋಪಿಗೆ ಜಗತ್ರಯ
ದೊಳು || ೪೦ ||

ಶ್ರೀ ಕೃಷ್ಣನು ಧರ್ಮಜಗೆ ಅನಂತ ವ್ರತಗೈಯ್ಯಲುಪದೇಶ

ವಿಸ್ತರದೊಳೀ ಕಥೆಯ ನಿನಗೊರದೆ ಸಲೆ ನೃಪರ ।
ಮಸ್ತಕದ ಮಣಿಯೆ ಧರ್ಮಜ ಧರಾನಾಧ ಪ್ರ ।
ಶಸ್ತನಂತನ ವ್ರತವನನುಜರಿಂದೊಡಗೂಡಿ ನೀನೋನಲತಿ ತ್ವರ್ಯದಿ ||
ದುಸ್ತರದ ವನವಾಸ ನೀಗುತರಿಗಳ ಗೆಲ್ದು ।
ಹಸ್ತಿನಾವತಿಯ ನಿಜ ಸಾಂಬ್ರಾಜ್ಯ ಧಿಟನಾಗಿ ।
ಹಸ್ತ ಪ್ರಾಪ್ಯಾಗುವದು ಸಂದೇಹವಿಲ್ಲವೆಂದಾ ಮುರಾಂತಕ
ನುಡಿದನು || ೪೧ ||

ಧರ್ಮರಾಜನು ಶ್ರೀ ಕೃಷ್ಣನ ಸ್ತೋತ್ರ ಗೈದ

(೧)ವತ್ಸರರ್ಯನ ದಿವ್ಯ ವಚನಮಂ ಕೇಳುತಾ ।
(೨)ವತ್ಸರಾಗ್ರಣಿ (೩)ವತ್ಸರ ಗ್ರಜಾಗ್ರಜನಮಿತ ।
(೪)ವತ್ಸರಾರ್ಣವ ದೋಳೀಶಾಡುತಲೆ ದೇವ ನೀನೆ ಸತ್ಯ
(೫)ವತ್ಸರನಲಾ ||

---

೪೨ ನೇ ಪದ್ಯ ದಲ್ಲಿ ಸಂವತ್ಸರಗಳ ಹೆಸರು ಹೇಳಿರುವರು ಆ ಅನ್ವರ್ಥಕ ಹೆಸರು ಗಳು ೧ ವತ್ಸರರ್ಯ ಪ್ರಜೋತ್ಪತ್ಯನಾದ ಬಹ್ಮದೇವರ - ಅರ್ಯ - ಒಡೆಯ

(೬)ವತ್ಸರಾರಿಯೆ ನಮಗೆ ವತ್ಸರಗಳಾದವರ ।
(೮)ವತ್ಸರವ ಮಾಡಿ ಕೃಪೆಯಿಂದ ಶೋಕಾಂಬುಧಿಯ ।
(೯)ವತ್ಸರಂಗೈಸಿ ಸಲಹುವಕರ್ತ ನೀನೆಂದು ಕೊಂಡಾಡುತಿಂತೆಂದನು ॥೪೨॥

ಧರ್ಮಜನು ಶ್ರೀ ಕೃಷ್ಣ ಸತ್ಯಭಾಮೆಯರಿಗೆ ಪೂಜಿಸಿ ಸತ್ಕರಿಸಿದನು.

ಹರಿಯೆ ತವಮುಖದಿಂದ ಸದ್ವ್ರತದ ಬಲುಹಿತದ ।
ಮರಮ ಮಂಗಳ ಚರಿತ್ರೆಯ ಕೇಳಿ ಮುದತಾಳಿ ।
ದುರಿತ ದುಃಖದ ಮೂಲವಂ ಮುರಿದೆ ನಾ ಸುರಿದೆ ನಿನ್ನ ಕರುಣಾ ಮೃತವನು ॥
ಧರಣಿಯೊಳ್ ನಾ ನೀನೆ ಧನ್ಯನ್ಯ ಮಾನ್ಯನ್ಯ ।
ಮೊರೆಯೊಕ್ಕವರ ರಕ್ಷಿಸುವ ದಾತ ವಿಖ್ಯಾತ ।
ಪುರುಷೋತ್ತಮಂ ನೀನೆ ಸಲಹೆನ್ನ ಗುಣರನ್ನ ಪಾವನ್ನಶಾಮ ವರ್ಣಾ ॥೪೩॥

---

=ತಂದೆ ಶ್ರೀ ಕೃಷ್ಣನ ಅಥವಾ, ವತ್ಸರರ್ಯ - ಶಾರ್ವರಿ=ಧರಿತ್ರಿ ಭೂರಮಣ ಶ್ರೀ ಕೃಷ್ಣನ ವಚನವಂಕೇಳಿ ಧರ್ಮರಾಜನು.

೨ ವತ್ಸರಾಗ್ರಣಿ= ಸೌಮ್ಯಸಂವತ್ಸರ= ಶಾಂತರಲ್ಲಿ ಶ್ರೇಷ್ಠ ಕೇವಲ ಶಾಂತ ಸ್ವಭಾವನಾದ ಧರ್ಮನು.

೩ ವತ್ಸರಗ್ರಜ =ಸಂವತ್ಸರದಿ ಶ್ರೇಷ್ಠವಾದ ವಿಜಯ = ಅರ್ಜುನ ಅಗ್ರಜ ಭೀಮಾರ್ಜುನರಿಂದ ನಮಿತನಾದ ಧರ್ಮಜನು.

೪ ವತ್ಸರಾರ್ಣವದೊಳೀಶಾಡುತಲಿ= ಆನಂದ ಸಮುದ್ರದಿ.

೫ ದೇವನೀನೆ= ಹೇಕೃಷ್ಣ ನೀನೆ ಸಂವತ್ಸರನಲಾ= ನಿಜವಾಗಿಯೂ ಈಶ್ವರನು ವಿಕ್ರಮನು ಸರ್ವಜಿತು ಸರ್ವಧಾರಿಯಾದ ಕೃಷ್ಣನೇ.

೬ ವತ್ಸರಾರಿಯೆ = ಖರಾರಿಯೇ = ಖರನಾಮಕದೈತ್ಯನನ್ನು ಸಂಹರಿಸಿದ ಅಥವಾ ರಾಕ್ಷಸಾರಿಯೇ ನಮಗೆ.

೭ ವತ್ಸರಗಳಾದವರ= "ವಿರೋಧಿ" ಗಳಾದವರನ್ನು ಶತ್ರುಗಳನ್ನು.

೮ ವತ್ಸರವಮಾಡಿ= ಪರಾಭವಮಾಡಿಅಥವಾ ಶತ್ರುಗಳನ್ನು ಜೈಸಿ ಕೃಪೆಮಾಡಿ ಶೋಕಾಂಬುಧಿಯಿಂದ.

೯ ವತ್ಸರವಗೈಸಿ= ತಾರಣಗೈಸಿ= ದಾಟಿಸಿ ರಕ್ಷಣೆ ಮಾಡಲು ಸಮರ್ಥ ಕರ್ತ ನೀನೆ ಎಂದು ಶ್ರೀ ಕೃಷ್ಣನನ್ನು ಕೊಂಡಾಡಿದನು.

ಈ ಪರಿಯ ಮಹಿಮೆಯುಳ್ಳಮಳ ನಂತನ ವ್ರತವ ।
ಶ್ರೀಪತಿಯೆ ನಿಮ್ಮಾಜ್ಞೆಯಿಂದ ಕೈಕೊಂಡು ನಿ ।
ಷ್ಠಾಪನಾಗುವೆನೆನುತಲಾಯುಧಿಷ್ಠರ ಬಳಿಕ ವಿವಿಧ ಭೋಜ್ಯಂಗಳಿಂದ ॥
ತಾಪಹರ ಘನಸಾರ ತಾಂಬೂಲ ಪರಿಮಳನು ।
ಲೇಪನದಿ ಸತ್ಕರಿಸಿದಂ ಸತ್ಯಭಾಮೆ ಸಹಿ ।
ತಾ ಪರ ಬ್ರಹ್ಮಮನೋಹರ ವಿರಲ ಶ್ರೀ ಕೃಷ್ಣರಾಯನಂ—ಸಂತಸ
ದೊಳು ॥ ೪೪ ॥

ಶ್ರೀ ಭವಿಷ್ಯೋತ್ತರ ಪುರಾಣೋಕ್ತ

ಇತಿ ಶ್ರೀ ಮದನಂತ ಕಥಾ ವ್ರತ ಮಹಾತ್ಮ ನವಮಃ ಸ್ಸಂಧಿ=**ಸಮಾಪ್ತ**
ಮಂಗಳ ಮಹಾ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ ಗುರುಭ್ಯೋನಮಃ ॥

## ಅಥ ದಶಮಃ ಸಂಧಿ ಪ್ರಾರಂಭ

ಸಂಧಿ ಸೂಚನೆ. ಶ್ರೀರಾಗ

ಮಂಗಳಾತ್ಮಕನಾದನಂತನ ಕೃಪಾಂಗದಿಂ ।
ಸಂಗರದೊಳರಿಗಳಂಗೆಲ್ದು ಪಾಂಡುವರು ಮಾ ।
ತಂಗ ಪುರವರದ ನಿಜ ಸಾಂಬ್ರಾಜ್ಯಮಂ ತಾಳ್ದು ಸಂಭ್ರಮ
ದೊಳಿರುತಿರ್ದರು ॥ **ಪ** ॥

॥ **ಪದನು** ॥

ಶ್ರೀ ಹರಿಯ ಸ್ತೋತ್ರ

ಜಯ ಜಯತು ರವಿರಾಜ ಶತಕೋಟಿ ಸಮತೇಜ ।
ಜಯತು ಮಂಗಳ ಚರಿತ ಬುಧಸಿನುತ ಸುಖಭರಿತ ।
ಜಯ ಜಯ ಜಗುದ್ಧುರುವೆ ಕವಿಜನರ ಸುರತರುವೆ ಮಂದರೋದ್ಧಾರ
ಪ್ರಭುವೆ ॥

ಜಯತು ಫಣಿಕೇಕಾತಾರಿ ಪಾಂಡುವರಿಗುಪಕಾರಿ ।
ಜಯ ನವಗ್ರಹಸ್ವಾಮಿ ಸರ್ವರಂತರಯರ್ಾಮಿ ।
ಜಯಭಕ್ತ ರುಲ್ಲಾಸ ಮನದೊಳಿರ್ದಭಿಲಾಷ ಪೂರ್ಣ ಮಾಡಿಂದಿ
ರೇಶಾ ॥ ೧ ॥

### ಶ್ರೀ ಸರ್ವಜ್ಞರ ಸ್ತುತಿ

ನಾರಾಯಣನೆ ದಿವಿಜ ಗುರುವಿಶ್ವ ಪೂಜಿತನೆ ।
ಸಾರ ಭಕ್ತ ಪ್ರೀಯ್ಯಖಿಳ ಲೋಕವಂದಿತನ ।
ಮೂರು ಗುಣ ವರ್ಜಿತುತ್ಪತ್ಯ ಶೂನ್ಯನ ಸನಾತನ
ವಿಭುಸರ್ವೇಶನ ॥
ಘೋರ ಭವಹರನ ಸುರಸಿದ್ಧಾಸುರಾರ್ಚಿತನ ।
ಶ್ರೀ ರಮಣ ಕೃಷ್ಣ ೧ ಪ್ರಧಾನಾಂಗ ಭೂತನಾ ।
ದೀರೇಳು ಸಪ್ತ ಕುಮತವ ಮುರಿದ ಸರ್ವಜ್ಞ ರಾಯರಂಘ್ರಿಗೆ
ನಮಿಸುವೆ ॥ ೨ ॥

### ಶೌನಕರು ಸೂತರಿಗೆ ಪ್ರಶ್ನೆ

ಸೃಷ್ಟಿಗಧಿಪತಿಯಾದ ನಂತನ ಚರಿತ್ರೆಗಳ ।
ನೆಷ್ಟು ಕೇಳ್ದರು ದಣಿಯದೆಮ್ಮಮನ ವೆಲೆ ಮುನಿಪ ।
ವೃಷ್ಟಿಧಾರಾಮಯದೊಳನವರತ ಸುರಿಯಲಾ ಚಾತಕವಿಹಂಗ ನಿಕರಾ॥
ತುಷ್ಟಿ ಯಾಯ್ತೆಮಗೆ ಮಳೆ ಸಾಕೆಂದು ನುಡಿದಪವೆ ।
ಇಷ್ಟವಾಗಿರ್ದ ಮುಂಗಧಿಯನರುಹುವದೆಂದು ।
ಶಿಷ್ಟ ಶೌನಕ ಋಷಿಗಳಾದರದಿ ಸೂತನಂ ಬೆಸಗೊಂಡಡಿಂತೆಂದನು ॥೩॥

### ಸೂತರ ಉತ್ತರ ಅನಂತನ ಮಹಿಮೆ

೧ ಸಾವಿರಾನನವುಳ್ಳನಂತಂಗೆ ತೀರದೀ ।
೨ ಸಾವಿರಾಂಘ್ರಯದನಂತನ ಕಥೆಯು ವರ್ಣಿಸಲು ।
ಸಾವಿರಾಂಶದೊಳಂಶ ವಂದನಂತನ ಮಹಿಮೆ ನಿಮಗೊರವೆ ಸಂಕ್ಷೇಪದಿ॥
ದೇವ ವೇದ ವ್ಯಾಸನೋರ್ವನೇ ಜಗದೊಳಗೆ ।
ಕೋವಿದ ಶಿರೋಮಣಿಯು ತನ್ನ ಮಹಿಮೆಗಳತಾ ।
ನೇ ವಿವರಿಸಲ್ಬಲ್ಲ ನನ್ಯರ್ಗೆ ವಶವಲ್ಲ ಮುನಿಗಳಿಗಳಿರೆ ಕೇಳಿರೆಲ್ಲ ॥ ೪ ॥

### ಧರ್ಮಜನು ಶ್ರೀ ಕೃಷ್ಣನ ಮನ್ನಣೆಮಾಡ್ದ

ತನಗೆ ಮತಿ ದೋರ್ದಿನಿತು ಸರ್ವ ಋಷಿಗಳಿರ್ಗೆ ಮುಂ ।

---

೧ ಪ್ರದಾನಾಂಗಭೂತ = ಮುಖ್ಯ ಪ್ರತಿಬಿಂಬ, ಮುಖ್ಯ ಪಾತ್ರ.
೧ ಸಾವಿರಾನನ = ಸಾವಿರ ಅನಂತ ಮುಖವುಳ್ಳ.
೨ ಸಾವಿರಾಂಘ್ರಯಾ = ಸಾವಿರ ಅನಂತ ಪಾದವುಳ್ಳ

ದಿನ ಕಥಾ ಸಂಗತಿಯುನಾ ವನದೊಳಗೆ ಪಾಂಡು ।
ತನು ಭವರ್ಧರ್ಮಜ ವೃಕೋದಾರ್ಜುರ್ನಕುಲ ಸಹದೇವ
ರುತ್ಸವದೊಳು ॥
ವನಜಾಕ್ಷ ನಾಸ್ಯದಿಂದಮುಳನಂತನವ್ರತದ ।
ಘನಮಹಿಮೆ ಯಂಕೇಳು ತಾ ಕೃಷ್ಣರಾಯನಂ ।
ವಿನಯಮಿಗೆ ವಿವಿಧೋಪಚಾರ ಪೂಜೆಗಳಿಂದ ಸತ್ಕರಿಸಿ
ಮನ್ನಿಸಿದರು ॥ ೫ ॥

ಧರ್ಮರಾಜನ ಅನಂತ ವ್ರತಾಚರಣೆ

ಬಳಿಕಚ್ಯುತನ ನಿರೋಪವ ಶಿರದೊಳಾಂತು ಮಂ ।
ಗಳ ಭಾದ್ರಪದ ಶುಕ್ಲಪಕ್ಷದ ಚತುರ್ದಶಿಯು ।
೩ ಕಲಿತ ಶುಭ ದಿನದಲ್ಲಿ ಸಂತೋಷದಿಂದನುಜರೊಡಗೂಡಿ
ಭೂಪಾಲನು ॥
ಲಲನೆ ದ್ರೌಪದಿ ಸಹಿತ ಪರಮಪಾವನ ನದಿಯ ।
ಜಲದೊಳಗೆ ಮಿಂದು ಶುಚಿಯಾಗಿ ದಿವ್ಯಾಂಬರದಿ ।
ಪೊಳೆವ ಮಣಿಭೂಷಣಗಳಿಂದ ಭೂಷಿತನಾದ ಮುನಿಗಳ
ಸಮೂಹದಿಂದ ॥ ೬ ॥
ವಿಧಿಪೂರ್ವಕದೊಳಾಸು ನೋಂಪಿಯಂ ಕೈಕೊಂಡು ।
ವಿಧುಕುಲೋದ್ಧಾಮನತಿ (ಸಲೆ) ಭಕ್ತಿಪೂರಿತನಾಗಿ ।
ವಿಧಿಭವಾರ್ಚಿತಪಾದ ಸಾಕ್ಷಾದನಂತ ಮೂರ್ತಿಯೆ ಕೃಷ್ಣನೆಂದು
ತಿಳಿದು ॥
ಬುಧ ಜನರ ಶ್ರುತಿ ಘೋಷದಿಂದ ಶ್ರೀ ಹರಿಯ ಸ ।
ನ್ನಿಧಿಯೊಳಾ ಕಲಶಗಳ ಸ್ಥಾಪಿಸುತ ಪೂಜಿಸಿದ ।
ವಿಧವಿಧದ ಶ್ರೀಗಂಧ ಧೂಪ ದೀಪಾದಿ ಫಲಷೋಡಶುಪ
ಚಾರದಿಂದ ॥ ೭ ॥

ಪಾಂಡವರು ಅನಂತನ ದೋರಕಟ್ಟಿ ಬ್ರಾಹ್ಮಣಾದಿಗಳ ಭೋಜನ

ಭದ್ರಕರವಾದನಂತನ ವ್ರತದ ಸೂತ್ರಂ ಮ ।
ಹದ್ರಾಜ ರೈವರುಂ ಬಲಗೈಗೆ ಕಟ್ಟಿಕೊಂ ।

೩ ಕಲಿತ = ಕೂಡಿದ

ಡದ್ರಿಧರ ಪೇಳ್ದಂತೆ ಬಾಗಿಣಗಳಾ ಸಕಳ ವಿಪ್ರರ್ಗೆ ಮುನಿ ನಿಕರಕೆ ||
ಷಡ್ರಸೋ ಪೇತ ಭೋಜನದಿಂದ ದಣಿಸಿ ವಿಲ |
ಸದ್ರತ್ನ ಕನಕ ಗೋ ವಸನ ದಾನಾದಿಗಳ |
ನುದ್ರೇಕ ಹರುಷ ದಿಂದಿತ್ತು ಮನ್ನಿಸಿ ತಮ್ಮ ಹೃದ್ರೋಗಗಳ
ನುಳಿದರು || ೮ ||

**ಈ ವ್ರತ ಮಹಿಮೆಯಿಂ ವಿಜಯನು ರುದ್ರನನ್ನು ಒಲಿಸಿದ್ದು**

ತಾಪಸೋತ್ತಮರಾಲಿಸುವದನಂತನ ವ್ರತವ |
ನಾ ಪಾಂಡು ನಂದನರ್ ನೋನಲಾ ಪುಣ್ಯಪ್ರ |
ತಾಪದಿಂದಮಿತಬಲ ಕಾಂತಿ ಧೃತಿ ಮತಿ ಶಾಂತಿ ಕೀರ್ತಿ
ಸಂಪೂರ್ಣರಾಗಿ ||
ತಾಪ ವರ್ಜಿತರಾಗಿ ಒಳಿಕ ವನದೊಳು ಚರಿಸು |
ತಾ ಪಾರ್ಥ ನಿರ್ಭಯದಿ ಲೀಲೆಯಿಂ ಕೈರಾತ |
ರೂಪಿಯಾಗಿರ್ದ ರುದ್ರನಗೆದ್ದು ದಿವಿನಾದ್ರ್ರ ಪಿತನ
ಸನ್ನಿಧಿಯೊಳಿರ್ದು || ೯ ||

**ಅರ್ಜುನನು ದಿವಿಯಲ್ಲಿ ೫ ವರ್ಷವಿದ್ದದು ನಿವಾತ ಕವಚಾದಿಗಳ ತರಿದುದು**

ಅಲ್ಲಿಸುರರಿಂದ್ಯೈದು ವರುಷ ಪೂಜಿತನಾಗು |
ತುಲ್ಲಾಸದಿಂದಿರ್ದು ವಜ್ರಿಗೆ ಪಗೆಗಳಾದ |
ಬಲ್ಲಿದ ನಿವಾಚ ಕವಚರ ತರಿದು ಕಾಲಿಕೇಯಾದಿ
ರಕ್ಕಸರ ಮುರಿದು ||

**ಪಾಂಡುವರ ತೀರ್ಥ ಯಾತ್ರೆ**

ಬಿಲ್ಲಾಳುಗಳ ದೇವ ನೆನಿಸಿ ಸುರಪತಿಯಿಂದ |
ಸಲ್ಲಲಿತ ಮಂತ್ರಾಸ್ತ್ರಗಳ ಪಡೆದು ವಿಜಯದಲಿ |
ನಿಲ್ಲದಿಳಿತಂದು ಧರ್ಮಜನೊಡನೆ ತಿರ್ಥ ಕ್ಷೇತ್ರ ಯಾತ್ರೆಗೆ
ನಡದನು || ೧೦ ||
ದೇಶದೇಶದ ತೀರ್ಥಯಾತ್ರೆಗಳ ಮಾಡಿ ಕುರು |
ದೇಶದ ಸಮೀಪ ಕೈವರ್ ಬರಲು ಕೌರುವಂ |

೧ ಘೋಷ ಯಾತ್ರೆಯ ವ್ಯಾಜದಿಂ ತನ್ನ ಸೌಭಾಗ್ಯ ಮಂ
ಪಾಂಡುವರ್ಗೆ ತೋರಿ ||

ದುರ್ಯೋಧನನ ಘೋಷ ಯಾತ್ರೆ

ಕ್ಲೇಶಗೊಳಿಸುನೆಂದು ಶಕುನಿ ಕರ್ನರ ಸಹಿತ |
ಶೇಷವಧುಗಳ ಕೂಡೆ ನಾನಾ ಸುವಸ್ತ್ರಮಣಿ |
ಭೂಷಣಗಳಿಂದ ಲಂಕೃತನಾಗಿ ನಡೆತಂದನಾ ವನಕೆ
ಸೈನ್ಯದೊಡನೆ || ೧೧ ||

ಖಳನ ಕಾಪಟ್ಯವಂ ತಿಳಿದು ಸುರಪತಿ ಮಹಾ |
ಬಲವಂತ ಚಿತ್ರರಥನೆಂಬೊ ಗಂಧರ್ವನಂ |
ಕಳುಹಿದಂ ಕೌರುವರ ಪಿಡಿದು ತಾಹೆಂದು ಬಳಿಕವ ಬಂದು ಕೊಳ
ದೊಳು ||

ಜಲಕ್ರೀಡೆಯಾಡುತಿರಲಹಿಕೇತು ಮುದದಿಂದ |
ಲಲನೆಯರ ವ್ಯಾಳದಿಂದ್ಗೆತಂದು ಖೇಚರರ |
ತೊಲಗೆನಲ್ಕನ್ಯೋನ್ಯ ವಾಕ್ಯ ನಿಷ್ಠೂರದಿಂ ಕದನಮುಸದದು
ಖತಿಯೊಳು || ೧೨ ||

ಚಿತ್ರರಥನು ಕೌರವರನ್ನು ಬಂಧಿಸಿದ್ದು

ಮಾನವರ್ ಗಂಧರ್ವರಂ ಕೆಣಕಿ ಸಮರಂಗ |
ಕಾನಲಾಪರೆಥೊರಿಯನೊಪ್ಪಿಸುತ ದೆಸೆದಿಶಿಗೆ |
ಭಾಸುತನಯಾದಿಗಳ್ ನೊಂದು ಬಿಟ್ಟೋಡಿದರ್ಬಳಿಕ ಕುರುಪತಿಯ
ಪಿಡಿದು ||

ಮಾನಮಂ ಭಂಗಿಸುತ್ತವನನುಜ ತನುಜರಂ |
ಶ್ವಾನಗಳನೆಳದೊಯ್ವ ತೆರದಿಂದ ನೇಣ್ಗಳಿಂ |
ಹೀನರಂ ಬಿಗಿದುಕೊಂಡೊಯ್ದನಾ ಚಿತ್ರಸೇನ ಬಾಂದಳದೆಡೆ
ಯೊಳು || ೧೩ ||

---

೧ ಘೋಷ ಯಾತ್ರೆ = ಘೋಷ = [ಸದ್ದು, ಗದ್ದಲ, ಕೋಲಾಹಲ–ಸಾರುವಿಕೆ, ಪ್ರಕಟನೆ ಮುಂತಾದ ಅರ್ಥಗಳಿವೆ] ಕೌರವನು ತಾನು ಡಂಬಾಚಾರದಿಂದ ಜನರಿಗೆ ತೋರಲು ಪ್ರಕಟಿಸಿ ಕುಹಕ ತನದಿಂದ ಯಾತ್ರೆ ಮಾಡುವನೆವದಿ. ಖಳನಾದ ಕೌರುವನ ಕಪಟ ತಿಳಿದು ಇಂದ್ರನು ಚಿತ್ರರಥ ಗಂಧರ್ವನನ್ನು ಕಳುಹಿದ

ಕೌರವ ಭೃತ್ಯರು ಧರ್ಮಜನಿಗೆ ಶರಣು ಪೊಕ್ಕರೆನೆ

ಕೆಟ್ಟೋಡಿ ಬಂದು ಕೌರುವ ದೂತರಾಗ ವೊರೆ ।
ಇಟ್ಟರಾ ಧರ್ಮಜಂಗೆಲೆ ಜೀಯ ಕುರುಪತಿಯ ।
ಕಟ್ಟಿಕೊಂಡೊಯ್ದರಾ ಗಂಧರ್ವರಾಗನಕೆ ಮಾನ ನಿಮ್ಮದ್ವೈ ವೈರವ ॥
ಬಿಟ್ಟವರ ಬಿಡಿಸಬೇಕೀ ಕ್ಷಣದೊಳೆನೆ ಭೂಪ ।
ಧಿಟ್ಟ ಭೀಮಾರ್ಜುನರ ಬೇಡಿಕೊಂಡಟ್ಟ ಧಾ ।
ಳಿಟ್ಟು ನಭದೋಳ್ ಚಿತ್ರಸೇನನಂ ಬೆಂಬತ್ತಿದರ್ ನರಳ ಮರೆ
ಗರಿವುತಾ ॥ ೧೪ ॥

ವಿಜಯನು ಚಿತ್ರರಥನನ್ನು ಗೆಲ್ದು ಕೌರವರನ್ನು ಬಿಡಿಸಿದನೆನೆ

ಬಿಡದೆ ಮಂತ್ರಾಸ್ತ್ರದಿಂದಾ ಖೇಚರರ ಜೈಸಿ ।
ಬಿಡಿಸಿ ತಂದಾ ಕೌರುವರನೆಲ್ಲ ರಾಜೇಂದ್ರ ।
ನಡಿಯ ಸನ್ನಿಧಿಯಲ್ಲಿ ಸಾಲ್ಗೊಂಡುನಿಲಿಸಲಾ ಧರ್ಮಜಂ ಕರುಣದಿಂದ॥
ಬಿಡುಗಡೆಯ ಮಾಡಿ ಪಾಶಗಳಿಂದ ಶತ್ರುಗಳಿ ।
ಗುಡುಗರೆಯನಿತ್ತು ಮನ್ನಿಸಿ ಕಳುಹಲಾ ಖಳರ್ ।
ಕಡುಮಾನಭಂಗದಿಂದಳಲುತ್ತ ಪೊಕ್ಕರಾ ಗಜಪುರವ
ಬಳಿಕಿತ್ತಲು ॥ ೧೫ ॥

ಭೀಮನು ಮಣಿಮಂತನನ್ನು ಕೊಂದು ಸೌಗಂಧಿಕ ಪುಷ್ಪ ತರುವಿಕೆ

ದ್ರೌಪದಿಯು ಸೌಗಂಧಿ ಕುಸುಮವಾಪೇಕ್ಷಿಸ ।
ಲ್ಪಾಪವನ ತನಯ ಧನಪನ ವನಕೆ ಪೋಗುತಿರ ।
ಲಾ ಪಥದೊಳಸುರ ಮಣಿಮಾನ್ಮದವನಂ ಮಾಡುತಡೆಯೈಸ
ಲವನಕೊಂದು ॥
ಆ ಪರಾಕ್ರಮಿ ಸತಿಗೆ ಪುಷ್ಪಗಳ ತಂದೀಯೆ ।
ಭೂಪಾಲ ನೀರಾರು ವತ್ಸರದ ವನವಾಸ ।
ಲೀ ಪರಿಯ ಲೀಲೆಯಿಂ ಕಳೆದನನುಜರ ಕೂಡ ಲಾಯಾಸಬಡದೆ
ಬಳಿಕ ॥ ೧೬ ॥

ಪಾಂಡವರ ಅಜ್ಞಾತವಾಸ

ವರುಷ ವಂದಜ್ಞಾತ ವಾಸಕೈವರ್ ತಮ್ಮ ।
ತರುಣಿಸಹಿತಾ ವಿರಾಟನ ಭುವನ ಕೈ ತಂದು ।

ಕುರುಹುದೋರದ ತೆರದೊಳಿರು ತಿರಲ್ ಕಾಪಾಪಿ ಕೀಚಕಂ
ಸ್ಮರಬಾಣದ ||

ಕೀಚಕನವಧೆ

(೧)ಉರುಬೆಗಾರದೆ ದುರುಳತನದಿ ಪಾಂಚಾಲಿ ಮ್ಯಾ |
ಲುರವಣಿಸಲಾಭೀಮ ಕಂಡು ಖಳನಂಗವಂ |
ಮುರಿದು ಮುಟ್ಟೆಗೆ ಮಾಡಲೀ ವಾರ್ತೆಗಜ ಪುರದಿ ದುರ್ಯೋಧನಂ
ಕೇಳ್ದನು || ೧೭ ||

ಉತ್ತರ ಗೋಗ್ರಹಣ

ಭೂಮಿಯೋಳ್ ಸತ್ವ ಪ್ರಸಿದ್ಧ ವೀರರ್ಕಳಾ |
ಭೀಮಬಲಭದ್ರ ಮಾದ್ರೀಶ ಕೀಚಕ ನಾಲ್ವ |
ರೀಮನುಜರೊಳ ಗೆಂಬುದಂಬಲ್ಲೆ ಕೀಚಕನ ತರಿವಲ್ಲಿ ಧರೆಯೊಳು ||
ಆಮರುತ್ಸುತನೆ ಕೊಂದವನವನೆ ಪಾಂಡುಸುತ | (ಭವ)
ರಾಮತ್ಸ್ಯನಾಲಯದೊಳಿರ್ದುದಂ ದಿಟವೆಂದು |
ತಾಮಸ ಸುಯೋಧನಂ ತನ್ನ ದಂಡೆತ್ತಿ ಬಂದನು ವಿರಾಟನ
ನಗರಕೆ || ೧೮ ||

ವಿಜಯನು ಗೆಲ್ದು ವಸ್ತ್ರಾಪಹರಿಸಿದನು

ಬಂದು ಗೋಗ್ರಹಣಮಂ ಮಾಡಲಾ ಪಾರ್ಥನಡೆ |
ತಂದಖಿಳ ಕೌರವರ ಸೈನ್ಯವಂ ತಡೆಗೆಡುವು |
ತೊಂದೆರಥದಿಂ ದ್ರೋಣ ಭೀಷ್ಮಾದಿಗಳ ಮೋಹನಾಸ್ತ್ರದಿಂ
ಮರವಗೊಳಿಸಿ ||
ಮುಂದುಗೆಡಿಸುತಲವರ ವಸ್ತ್ರಗಳನಪಹರಿಸಿ |
ತಂದೊಪ್ಪಿಸಿದ ಧೇನುಗಳ ವಿರಾಟಗ ಬಳಿಕ |
ಮಂದಮತಿ ಕುರು ನೃಪತಿ ಮಾನಭಂಗದೊಳಳಲುತಾ
ಗಜಪುರವಪೊಕ್ಕನು || ೧೯ ||
ವಿಜಯೋತ್ಸವದೊಳಿತ್ತ ಪಾಂಡುವರ್ ರಿಪು ಭಯವ |
ತ್ಯಜಿಸಿ ಹದಿಮೂರಬ್ದ ಸಮಯ ನಿರ್ಬಂಧಗಳ |

---

೧ ಸ್ಮರಬಾಣದ ಉರುಬೆ = ಕಾಮಬಾಣ ಹೆಚ್ಚಾಗಿ ಕಾಮಪೀಡಿತ ಸಂಕಟದಿಂ

ಋಚೆಗಳದು ಸತ್ಯ ಪ್ರತಿಜ್ಞೆಯಂ ಪೂರೈಸಿ ಬಾಲಾರ್ಕದಂತೊಪ್ಪುವಾ ||
ನಿಜರೂಪಗಳ ತಾಳ್ದು ಸಿಂಹಾಸನದಿ ಪೊಳೆಯೆ |
ತ್ರಿಜಗವಂದ್ಯರ ಕಂಡು ನಡುಗುತ ವಿರಾಟ ಭೂ |
ಭುಜ ಸುವಿಸ್ಮಿತನಾಗಿ ಪೂಜಿಸುತ ವಿನಯದಿಂ ಕೈಮುಗಿವು
ತಿಂದೆಂದನು || ೨೦ ||

ವಿರಾಟನು ಅಪರಾಧ ಕ್ಷಮಿಸೆಂದು ಬೇಡುತ್ತ ಉತ್ತರಿಯನಿತ್ತನು

ನೃಪ ಶಿಖಾಮಣಿಗಳೆಂಬುದನರಿಯದೆಸುತ ನಾ |
ನಪರಾಧಗಳನೆನಗಿದೇಂ ಕ್ಷಮಿಸಬೇಕಿನ್ನು |
ಕೃಪೆಯೊಳೈತಂದು ಮಿಗೆ ಬೇಡಿಕೊಂಡಾಮಚ್ಛ್ಯ ಭೂಪಾಲ
ಹರುಷದಿಂದ ||
ತಪನೆಂದು ಮನ್ಮಥರ(ವ)ನಂತರ ತಿರಸ್ಕರಿಸು |
ವಪರಿಮಿತ ಸೌಂದರ್ಯಳಾದ ತನ್ನಾತ್ಮಜೆಯು |
ವಿಪುಳ ವಿಕ್ರಮ ಕಿರೀಟಿಯ ಕುಮಾರಂಗಿತ್ತು ಮನ್ನಿಸಿದನೇ
ವೇಳ್ವೆನು || ೨೧ ||

ಶ್ರೀಕೃಷ್ಣನು ವಿಜಯನಿಗೆ ರಥವಿತ್ತು ಸಾರಥಿಯಾದ

ದೇವದೇವೇಶದೇವೋತ್ತಮ ಶ್ರೀಕೃಷ್ಣ |
ದೇವನಂ ಫಲ್ಗುಣಂ ಕಂಡು ಭಕ್ತಿಯಲಿ ಸಂ |
ಭಾವಿಸುತ ರಿಪುಗಳಂ ಗೆಲ್ವದಕ ನಿಜರಥವ ಸಾರಥಿಯ ಮಾಡಿಕೊಳಲು||
ಭೂವರಂ ರಾಜ್ಯ ಸಂಧಾನದ ನಿಮಿತ್ಯ ವನು |
ದೇವಸುತನಂ ಹಸ್ತಿನಾವತಿಗೆ ಕಳುಹಲಾ |
ಶ್ರೀವರಂ ಪಟ್ಟಣವ ಪೊಕ್ಕು ನಡೆತರೆ ಬಂದು ಕಂಡದು ಸಮಸ್ತ
ಜನರು || ೨೨ ||

ಶ್ರೀಕೃಷ್ಣ ಸಂಧಾನ

ಪರಿಪರಿಯ ಪಕ್ವಾನ್ನ ವಿರಚಿಸಿದ ಕುರುರಾಯ |
ನರಮನೆಯ ಪೋಗದಾ ಶರಣ ವತ್ಸಲನೆಂಬ |
ಬಿರಿದು ಮೆರೆಯಲ್ ಭಕ್ತನಾದ ವಿದುರನ ಮನೆಗೆ ಬಂದು ಪಾಲುಂಡು
ಕರುಣಾ ||

ಶರಧಿ ಸಂತುಷ್ಟಿಯಿಂ ಕ್ಷೀರ ಶರಧಿಯು ಹರಿಸಿ ।
ದುರುಳನೋಲಗಕೆ ಬರಲವನೇಳದಿರೆ ಕಂಡು ।
ಧರೆಯನುಂಗುಟದಿಂದಲೊತ್ತಲಾ ಸಭೆಯಿಂದ ಖಳ ಬಿದ್ದ ಪರಿ
ಪದದಲಿ ॥ ೨೩ ॥

ರಾಯರ್ಕ್ಕ ನಿಮಗ್ಯಾಕ ನಮ್ಮಂಘ್ರಿಯಲಿ ಬೀಳು ।
ವಾಯಾಸ ನಾಕನುತ ದೇವ ಕುಳ್ಳಿರ್ದನಾ ।
ಬಯದಂಬುಲವೊಳೆವ ಕಿಂನಗೆಯು ಸೂಸುತಲಿ ನುಡಿದ ನೆಲೆ
ಕೌರವೇಂದ್ರ ॥

ನ್ಯಾಯದಿಂ ವನವಾಸ ಕಳದರಾ ಪಾಂಡುವರು ।
ವಾಯದಿಂ ದೈವರನ ಕರಿಸಿ ಸಂತೈಸಿ ಸಂ ।
ಪ್ರೀಯದಿಂದರ್ಧ ರಾಜ್ಯವಂ ಕೊಟ್ಟು ಮನ್ನಿಸುತ ಬದುಕುವದು
ಲೇಸಂದನು ॥ ೨೪ ॥

ತಿಳಿದರ್ಧ ರಾಜ್ಯಮುಂ ಕೊಟ್ಟಿರೊಕ್ಕಿತು ದೇಶ ।
ದೊಳಗೈದು ಗ್ರಾಮವಾದರು ನಿನ್ನವರಿಗಿತ್ತು ।
ಸಲಹಿದರೆ ಕೀರ್ತಿ ನಿನಗೆಂದಚ್ಯುತಂ ನುಡಿಯಲಾಖಳಂ
ಪಾಂಡುವರ್ಗೆ ॥

ನೆಲವನೆಳ್ಳನಿತೀಯೆ ಪೋಗೆಂದು ಘರ್ಜಿಸಲ್ ।
ಕಲಹಪೋಳ್ನಾನಿನ್ನ ೧ ತಡೆಗಡಿಸುವೆ ನೋಡೆಂದು ।
ನಳಿನಾಕ್ಷ ೨ ಮುಳಿದು ಬಂದಾ ಪೈದುನರ ಕಂಡು ವೃತ್ತಾಂತ
ವಿವರಿಸಿದನು ॥ ೨೫ ॥

ಕೌರವನೊಡನೆ ಯುದ್ಧ ನಿಶ್ಚೈಸುವಿಕೆ

ರಾಜೇಂದ್ರ ಧರ್ಮಜಂ ಕದನಮುಂ ನಿಶ್ಚೈಸಿ ।
ರಾಜೀವ ನೇತ್ರನ ನಿರೋಪದಿಂದಖಿಳ ನೃಪ ।
ರಾಜಿಗಳ ಪಾಂಚಾಲ ಮತ್ಸ್ಯ ಸೃಂಜಯು ಪಂಚ ಕೈಕೇಯು
ಭೂಪಾಲರ ॥

---

ಪದ್ಯ ೨೫ ೧ ತಡೆಗುಡಿಸುವೇಂ = ಕೊಬ್ಬು ತಗ್ಗಿಸುವೆ. ಗಡಿಸು= ಮದ, ಕೊಬ್ಬು. ತಡೆ = ನಿರ್ಬಂಧಿಸುವೆ ಸೊಕ್ಕುಮುರಿವೆ.
೨ ಮುಳಿದು = ಸಿಟ್ಟಾಗಿ.

ವಾಜಿಗಜ ರಥ ಪದಾತಿಗಳ ಸಂದೋಹ ವಿ ।
ಭ್ರಾಜಿಸುವ ಧ್ವಜ ಛತ್ರ ಚೆಮರದಿ॑ದೆಸವ ಸ॑ ।
ನಾಜಲಧಿಯಂ ನೆರರಹಿದಂ ಕಮಠ ಫಣಿಪರ್ಗೆ
ಧರಿಸಲಸದಳವಾದುದು ॥ ೨೬ ॥

ಅಕ್ಷೋಹಣಿ ಸೈನ್ಯ ಸಂಖ್ಯಾ ವಿವರ

೩ ಶತಲಕ್ಷ ರಥ ಬ್ಯಾರೆ ಬ್ಯಾರೆ ನಿಂದಿರಲೊಂದು ।
ರಥದ ಬಳಿಯಲಿ ಸಾವಿರಾನೆ ನಿಲಲೊಂದು ಕರಿ ।
ಪತಿಯ ಸರಸದಿ ಸಾವಿರಶ್ವಂಗಳಿರಲೊಂದು ತುರಗದೆಡೆಯಲಿ ಸಾವಿರ ॥
ಅತುಳ ಭಟರಿರಲೊಂದು ಗಣನೆಗಕ್ಷೋಹಿಣಿಯು ।
ಚತುರಂಗ ಬಲವೆನಿಸಿ ಕೊಂಬುದೆಲೆ ಮುನಿಗಳಿರೆ ।
ಕ್ಷಿತಿಪ ಧರ್ಮಜ ನೀಪರಿಯೊಳು ಸಪ್ತಾಕ್ಷೋಹಿಣಿಯು ಸೈನ್ಯ
ಕೂಡಿಸಿದನು ॥ ೨೭ ॥

---

ಪದ್ಯ ೨೭ ಅಕ್ಷೋಹಿಣಿ ಸೈನ್ಯ ವಿವರ- ೧ ಅಕ್ಷೋಹಿಣಿಗೆ ಶತಲಕ್ಷ ೧ ಕೋಟಿ ರಥಗಳು. ಒಂದು ರಥಕ್ಕೆ ಸಾವಿರಾನೆ ಒಂದಾನೆಗೆ ಸಾವಿರ ಕುದುರೆ. ೧ ಕುದುರೆಗೆ ಸಾವಿರಕಾಲಾಳು ಇದಕ್ಕೆಅಕ್ಷೋಹಿಣಿಎನ್ನುವರು.

| | |
|---|---|
| ೧೦೦೦೦೦೦೦ | ಕೋಟಿ ಶತಲಕ್ಷವೆಂದರೆ (೧) ಕೋಟಿ ರಥ |
| ೧೦೦೦ | ೧ ರಥ ಹತ್ತಿರ ೧೦೦೦ ಆನೆಗಳು. |
| ೧೦೦೦೦೦೦೦೦೦೦ | ಅರ್ಬುದ ಆನೆಗಳು ೧ ಆನೆಗೆ ೧೦೦೦ ಅಶ್ವ |
| ೧೦೦೦ | ಗಳಂತೆ. |
| ೧೦೦೦೦೦೦೦೦೦೦೦೦೦ | ಮಹಾಖರ್ವ ಕುದುರೆಗಳು ಒಂದು ಕುದುರೆಗೆ |
| ೧೦೦೦ | ೧೦೦೦ ಕಾಲಾಳುಗಳು. |
| ೧೦೦೦೦೦೦೦೦೦೦೦೦೦೦೦೦೦ | ಕ್ಷೋಣಿ ಕಾಲಾಳುಗಳು. |
| ಈ ಪ್ರಕಾರ ೧೦೦೦೦೦೦೦ | ರಥಗಳು. |
| ೧೦೦೦೦೦೦೦೦೦೦ | ಆನೆಗಳು. |

೧೦೦೦೦೦೦೦೦೦೦೦೦೦ ಅಶ್ವಗಳು.

೧೦೦೦೦೦೦೦೦೦೦೦೦೦೦೦೦ ಕಾಲಾಲುಗಳು.

---

೧೦೦೧೦೦೧೦೦೧೦೦೦೦೦೦೦

ಇಂಥ ೭ ಅಕ್ಷೋಹಿಣಿ ಸೈನ್ಯ ಸಂಖ್ಯೆ ಪಾಂಡವರದು.

ಭಾರತದಲ್ಲಿ ಹೇಳಿದ ಶ್ಲೋಕಕ್ಕೂ ಇದಕ್ಕೂ ವ್ಯತ್ಯಾಸವಿದೆ ಇದು ಯಾವಲ್ಲಿಯು ಪ್ರಮಾಣವೋ ವಿಚಾರಾಂಶವಾಗಿದೆ— ತಜ್ಞರು ವಿಚಾರ ಮಾಡಿ ತಿಳಿಸಿದಲ್ಲಿ ಉಪಕಾರ

ಪಾಂಡುವರು ಸೈನ್ಯದೊಡನೆ ಕುರುಕ್ಷೇತ್ರಕ್ಕೆ ಬರುವಿಕೆ.

(೧)ಪಟಹ (೨)ನಿಸ್ಸಾಳ (೩)ತಂಬಟ ಭೇರಿಗಳ ಸಮು ।
ತ್ಕಟನಾದದಿಂದ ದಶದಿಕ್ಕುಗಳ್ಬಿರಿಯಲಾ ।
ರ್ಭಟದಿಂದ ಪಾಂಡುವರ್ಕುರುಕ್ಷೇತ್ರಕ್ಕೈತಂದು ಸಿಬಿರಗಳ್ ಪೂಯಿಸಿ ತಮ್ಮಾ ॥
ಕಟಕದಾಧಿಪತ್ಯಮಂ ದ್ರುಪದಾತ್ಮಜಂಗಿತ್ತು ।
ಲಟಕಟಿವ ಸಮರ ಲಂಪಟರ ಭುಜವುಪ್ಪೊಯ್ಯ ।
ಪಟುಭಟರ ಬೊಬ್ಬೆಯು ಚಾಪಟಂಕಾರ ಘೋಷದಿಂ ದಟ್ಟೊಡ್ಡಿ ರಣಕೆ ನಿಲಲು ॥ ೨೮ ॥
ಅತಿ ಮೂರ್ಖರೀರ್ವರೇ ರಾವಣ ಸುಯೋಧನರ್ ।
ಕ್ಷಿತಿಯೊಳಗೆವನ ಮುರಿದು ಪುರದಹಿಸಿತೊಂದೆ ಕಪಿ ।
ಪತಿಯೆಂದು ತಿಳಿತಿಳಿದು ಮತ್ತೆ ಯುದ್ಧವ ಮಾಡಿ ದಶಕಂಠ ನಾಶನಾದ॥
ಅತುಳ ಬಲ ನರನೋರ್ವನಿಂದ ಗೋಗ್ರಹಣದಲಿ ।
ಹತವಾದ ತನ್ನ ದಳವಂ ಕಂಡು ಕಂಡು ಮಿಗೆ ।
ಮತಿಯಿಲ್ಲದಾ ಕುರುಪ ಮರಳೆ ಕದನಕೆ ನಡೆದ ಮುನಿಗಳಿರೆ ಕೇಳಿ ಬಳಿಕ ॥ ೨೯ ॥

ಕೌರವರು ಯುದ್ಧಸನ್ನದ್ಧರಾಗಿ ಬರುವಿಕೆ

ಕೌರವಂ ಸರ್ವ ಸನ್ನಾಹದಿಂ ಕಾಳಗಕೆ ।

---

ಪದ್ಯ ೨೮ ೧ ಪಟಹ= ನಗಾರಿ- ರಣವಾದ್ಯ ೨ ನಿಸ್ಸಾಳ= ಭೇರಿ.
೩ ತಂಬಟ= ಚರ್ಮವಾದ್ಯ, ರಣಕಹಳೆ ೪ ವೇಹರಕೆ=ಗುಂಪು ಸೈನ್ಯ.

ಭೂರಿಶ್ರವ ಭಗದತ್ತ ಕರ್ನ ಭೀಷ್ಮ ದ್ರೋಣ ।
ವೀರಾಧಿವೀರರಿಂದೇಕಾದಶಕ್ಷೋಹಿಣೀ ಸೈನ್ಯದೊಡನೆ ಬಂದು ॥

ಭೀಷ್ಮನಿಗೆ ಸೇನಾಧಿಪತ್ಯ ೧೦ ದಿನ ಯುದ್ಧ

ಶೂರ ಗಾಂಗೇಯಗಭಿಷೇಚನಂಗೈಯ್ಯಲಾ ।
ಘೋರ ಸಮರಂ ಪ್ರವರ್ತಿಸಿತುಭಯ ಳವೋಹರಕೆ ।
ಮೂರುಜಗ ವಲ್ಲಾಟ ಲತಿರಥ ಮಹಾರಥರ್ ಹೊಯ್ದಾಡಿದರ್
ಸತ್ವದಿ ॥ ೩೦ ॥

ಚಕ್ರಮಂ ಸಮರದೊಳ್ ಪಿಡಿವನಲ್ಲೆಂದಖಿಳ ।
ಚಕ್ರೇಶ್ವರರ ಮುಂದೆ ಭಾಷೆಯಂ ಮಾಡಿರ್ದ ।
ಚಕ್ರಿಯಂಧುರದೊಳಗೆ ಚಕ್ರನಂ ಪಿಡಿಸಿ ಗಂಗಾಸುತಂದಶ (ಪ್ರತಿ)
ದಿನದೊಳು ॥

ವಿಕ್ರಮದೊಳಯುತಮಿತ ನೃಪರ ಸಂಹರಿಸುತಿರೆ ।
ಶಕ್ರತನಯಂ ಶಿಖಂಡಿಯು ಮುಂದೆ ಮಾಡುತ್ತ ।
ವಕ್ರಮಿಲ್ಲದೆ ಕೋಲ್ಗಳಿಂದೆಚ್ಚು ಕೆಡಹಿದಂ ಶರತಲ್ಪದೋಳ್
ಭೀಷ್ಮನಾ ॥ ೩೧ ॥

ದ್ರೋಣ ಚಾರ್ಯರಿಗೆ ಸೈನ್ಯಾಧಿಪತ್ಯ ೫ ದಿನ ಯುದ್ಧ

ಆನದೀ ತನಯನಸ್ತಮಿಸಲಾ ಕುರುಪ ದು ।
ಮ್ಮಾನದಿಂ ದ್ರೋಣಂಗೆ ಪಟ್ಟವಂಗಟ್ಟಿರಿಪು ।
ಭೂನಾಥನಂ ಪಿಡಿದು ಕೊಡುವಪೆನ (೧)ಬಿಲ್ಲೋಜನೈದುದಿನ
ಸಂಗರದೊಳು ॥

ಮಾನವಾಧೀಶನಂ ತುಡುಕಲಾರದೆ ಸಕಳ ।
ಸೇನೆಯಂತರಿಪು ತಿರೆ ವಂಚನದಿ ಪಾಂಚಾಲ ।
ಸೂನುವಿಂ ಕೆಡಹಿಸಿದರಾಕ ಂಭ ಸಂಭವನ ಪಾಂಡುವರು
ಹರಿಯಾಜ್ಞದಿ ॥ ೩೨ ॥

ಕರ್ನರಿಗೆ ಸೇನಾಧಿಪತ್ಯ ಎರಡೆ ದಿನ

ಚಾಪಾಗಮಾಚಾರ್ಯ ಬೀಳಲಾ ಕೌರುವನು ।
ತಾಪದಿಂ ಕರ್ನನಿಗೆ ನೇನಾಧಿಪತ್ಯವ ನಿ ।

---

ಪದ್ಯ ೩೨ ೧ ಬಿಲ್ಲೋಜ= ಬಿಲ್ಲುವಿದ್ಯೆಯ ಗುರು ದ್ರೋಣಾಚಾರ್ಯ

ರೋಪಿಸಲ್ಕವನೆರಡು ದಿನಯುದ್ಧದೊಳ್ ನರನಸರ್ಪಾಸ್ತ್ರದಿಂದೆ
ಶಿಯಲು ||

ಶಲ್ಯನ ಅರೆದಿನಕಾಳಗ

ಶ್ರೀಪತಿ ನಿವಾರಿಸುತ ರಥ ತಗ್ಗಿಸು ಸಲಹ |
ಲಾಪಾರ್ಥ ರವಿಸುತನ ಕುಸರಿದರಿಯಲ್ಕಾದ್ರ |
ಭೂಪಾಲ ಧರ್ಮನಂದನನೊಡನೆ ಕಾದುತ್ತ ಮಡಿದನರೆ ದಿವಸದೊಳಗೆ
|| ೨೩ ||

ಸುತಸಹೋದರ ಬಂಧು ಗುರುಪಿತಾಮಹ ಸೈನ್ಯ |
ಪ್ರತತಿಯೊಳ್ಗೋರ್ವರುಳಿಯದೆ ಪಾಂಡುಭವರಿಂದ |
ಹತವಾದುದಂಕಂಡು ದುರ್ಯೋಧನಂಬಳಿಕ ಕಾಸಾರದೋಳಡಗಲು ||

ಅತಿಕೋಪದಿಂದವನ ಭಂಗಿಸುತ ಹೊರವಂಡಿ |
ಸುತ ಭೀಮನೇನಂ ಗದಾಯುದ್ಧ ದೋಳ್ಕೊಂದು |
ಕ್ಷಿತಿಯ ಭಾರವನಿಳುಹಿ ಪ್ರಭೇಟ ಕೋಟಗಳ್ ವೊಳಗಿದವು
ನಿಜಬಲದೊಳು || ೨೪ ||

ದೇವಾದಿಗಳು ಪಾಂಡುವರಸ್ತುತಿಸುವಿಕೆ

ಭಾರತವತಾರ ದಾಹವಯ್ದು ದಿನವೆಯಿತ್ತು |
ಧಾರುಣಿಯಭಾರ ಮಿಳಿಯಿತ್ತೆಂದು ಫಣಿಪತಿ ಫ |
ಣಾರತ್ನ ಜಾಲಮಂ ಜರಿಗೆದರಿಪಪೆಗಳಂ ಬಿರ್ಚಿದಂ ದಿಕ್ಕರಿಗಳು ||
ಹಾರೈಸಿದಂ ಕಮಠ ನೊಲಿದಾಗ ದಂ ಸುರರು |
ಭೋರೆಂದು ದುಂದುಭಿಗಳಂ ಪ್ರುಯ್ಸಿ ಪಾಂಡವ ಧ |
ರಾರಮಣರಂ ಪರಸಿ ಶ್ರೀ ಕೃಷ್ಣನಂ ತುತಿಸುತಾಗಸರ್
ಯೆಲರ್ಗರೆದರು || ೨೫ ||

ಜಯವಂತರಾಗಿ ಪಾಂಡುವರ ಗಜಪುರಕೆ ಬರುವಿಕೆ

ಪತ್ರೀಂದ್ರ ವಾಹನನ ಕಾರುಣ್ಯದಿಂ ಸರ್ವ |
ಶತ್ರುಗಳ ಸಂಹಾರವಮಂ ಮಾಡಿ ಪಾಂಡುವ ಧ |
ರಿತ್ರೀಶರ್ಸೈವರುತ್ಸವದಿಂದ ಮಂಗಳ ಸುವಾದ್ಯ ನಿರ್ಘೋಷದಿಂದ ||
ಛತ್ರ ಚಾಮರ ಧ್ವಜಪತಾಕೆಗಳ ಗುಂಪಿನ ವಿ |

ಚಿತ್ರ ಪಾಠಕರ ಕೈವಾರಿಗಳ ಸ್ತೋತ್ರದಿಂ ।
ಮಿತ್ರ ಬಾಂಧವ ಪುರೋಹಿತ ಸುಭಟ ಬಲದೊಡನೆ ಗಜಪುರಕೆ
ನಡೆತಂದರು ॥ ೩೬

ಹಸ್ತಿನಾವತಿಯ ಸಿಂಗಾರ

ನಳನಳಿಸುತಿಹ ತಳಿರ್ದೋರಣದ ಸಿಂಗರದಿ ।
ಪೊಳೆವ ಕನ್ನಡಿ ಕಳಸದಿಂದಲಂಕೃತವಾದ ।
ತೊಳಗುವ ಸುಹರ್ಮ್ಯಮಣಿ ಭುವನ ಗೋಪುರ ಶಿಖರಗಳನೇರಿ
ನೀಕ್ಷಿಸುತಿಹ
ಲಲನೆಯರ ಕಂಗಳ ಮರೀಚಿಗಳ ಪ್ರಭೆಯಿಂದ ।
ಧಳಧಳಿಸುವಾ ಬೀದಿ ಬೀದಿಯೋಳ್ಕಸ್ತುರಿಯ ।
ಮಲಯಜದ ಪನ್ನೀರ ಚಳಿಗಳಿಂದಾ ಹಸ್ತಿನಾವತಿಯು
ಶೋಭಿಸುತಿರೆ ॥ ೩೭

ಪಾಂಡುವರಿಗೆ ಮಂಗಳಾರುತಿ ಬೆಳಗಿದರ್

ಪಟ್ಟಣ ಪ್ರವೇಶಮಂ ಮಾಡಲಾ ದಾನವ ಘ ।
ರಟ್ಟನಂ ಪಾಂಡವರ ಕಂಡಖಿಳ ಕಾಮಿನಿಯ ।
ರಿಟ್ಟಣಿಸುತೆಡಬಲದೊಳ್ಕೈ ತಂದು ಕಂಕಣ ಝಣತ್ಕಾರ ಧ್ವನಿಗಳಿಂದ ।
ಬಟ್ಟೆ ಬಲ್ಮೊಲೆಗಳಲಗುವ ಗಮನದಿಂದ ಪೊಂ ।
ದಟ್ಟೆಯ ಸುಮಂಗಳಾರುತಿಗಳಂ ಬೆಳಗುತಾ ।
ಕರ್ಸ್ಠಾಣಿ ಮುತ್ತುರತ್ನಗಳ ನಿವಾಳಿಸುತಮಳಪುಷ್ಪವರು
ಷವಗರೆದರು ॥ ೩೮

ಧರ್ಮರಾಜನಿಗೆ ಸಾಮ್ರಾಜ್ಯ ಪಟ್ಟಾಭಿಷೇಕ.

ಮಂಗಳ ಧ್ವಾನದಿಂದುಲಿವ ಭೇರಿಗಳನಾ ।
ದಂಗಳಿಂ ಜಯ ಜಯ ಧ್ವನಿ ಪೌರನಾರಿಯರ ।
ಮಂಗಳಾರುತಿಗಳಂ ಕೈ ಕೊಳುತ ಪಾಂಡುವರ್ನಿಜರಾಜ ಗ್ರಹಕೆಬರಲೂ
ಮಂಗಳಾತ್ಮಕ ಬಳಿಕ ಶುಭ ಲಗ್ನದೊಳ್ ಧರ್ಮ ।
ಜಂಗೆ ಸಾಮ್ರಾ (ಂಬ್ರಾ) ಜ್ಯ ಪಟ್ಟಾಭಿಷೇಕವ ಸರ್ವ ।
ಸಿಂಗರದ ಸಿಂಹಾಸನದೊಳಿರಿಸಿ ಮಾಡಿದಂ ಸಕಲಜನ
ನಲಿದಾಡಲೂ ॥ ೩೯

**ಸಕಲರಾಜರು ಧರ್ಮಜನಿಗೆ ಕಾಣಿಕೆಯಿತ್ತಿದು**

ಕಾಣಿಕೆಯನಿತ್ತೆರಗಿ ಕಂಡುದಾ ಸಕಳನೃಪ ।
ಶ್ರೇಣಿಪರಿವಾರ ಪ್ರಧಾನ ಪಟುಭಟರೆಲ್ಲ ।
ಕ್ಷೋಣೀಶ ಪಾಂಡುಸುತ ರ್ಗೆ ವರ್ಗೆ ಸರ್ವಧನ ದೇಶಕೋಶಗಳೊಪ್ಪಿಸಿ ॥
ಪಾಣಿಗಳ್ಮುಗಿದು ನಿಂದಿರ ಬಳಿಕ ಸಂಗೀತ ।
ವೇಣು ವೀಣಾದಿ ನರ್ತನದಿಂದ ಗಣಿಕೆಯರ್ ।
ಜಾಣತನವಂ ತೋರ್ದರೆಮುಜನ್ಯೈಶ್ವರ್ಯ ಸುರಪತಿಯ
ಸಿರಿಗೀಡಾಗಿರೆ ॥ ೪೦ ॥

**ಶ್ರೀ ಕೃಷ್ಣನು ದ್ವಾರಕೆಗೆ ಗಮನ ಪಾಂಡವರು ಸುಖದಿಂ ರಾಜ್ಯವಾಳುವಿಕೆ**

ಧರೆಯೊಳಗೆ ಪಾಂಡುವಸ್ಥಾಪನಾಚಾರ್ಯನೆಂ ।
ಬುರುತರದ ಬಿರುದು ನೆರೆ ಮೆರದು ಕರುಣಾಳುಗಳ ।
ಧೊರೆಕೃಷ್ಣದ್ವಾರಕಾವತಿಗೆ ಬಿಜಯಂಗೈದ ಬಳಿಕ ಕುಂತೀತನಯರು ॥
ಚಿರಕಾಲ ಧರ್ಮದಿಂದೇಕಛತ್ರದಿ ಧರಣಿ ।
ಪರಿಪಾಲಿಸುತ ವೀತಭಯರಾಗಿ ಸತ್ಯದಿಂ ।
ತುರಗಮೇಧಾದಿ ಯಾಗವಮಾಡಿ ಸುಖದಿಂದ ಸಾಮ್ರಾಜ್ಯ
ಮಂಗೈದರು ॥೪೧॥

**ಶ್ರೀಕೃಷ್ಣ ಸ್ತೋತ್ರ**

೧ ವಾರಶತ ಸುಪ್ರಕಾಶ ವಾರದಶ ಶೀತಲಂ ।
೩ ವಾರಪ್ರದಾಯಕಂ ವಾರಜನ ಕೊಲಿವನೀಂ
೫ ವಾರರಿಗೆ ವಾನೆನಿಸುವ ಮಹಾವೀರನೀಂ
೭ ವಾರ ಶಿಷ್ಯರಿಗೆ ಕ್ರೂರ ॥
೮ ವಾರನೆನಿಪನೆ ನಿನ್ನ ೯ವಾರ ೧೦ವಾರಕೆ ಭಜಿಪ ।
೧೧ ವಾರಗಣ ಕೈವಾರ ೧೨ ವಾರಾನ್ವಯೈವರಿಗೆ ।
೧೩ ವಾರರಾಜ್ಯ ವನಿತ್ತ ೧೪ವಾರನೇ ೧೫ವಾರಮತಿ ಕಳಿಯೊ
೧೬ವಾರಕುಲದೀಪ ॥ ೪೨ ॥

ಪದ್ಯ ೪೨ ಈ ಪದ್ಯದಲ್ಲಿ ವಾರಗಳ ಹೆಸರೆ ಆವರ್ತನ ಮಾಡಿರುವರು. ಆಯಾವಾರಗಳ ಹೆಸರೇ ಅನ್ವರ್ಥಕನಾಮಗಳಾಗಿರುವವು.

೧ ವಾರಶತಸುಪ್ರಕಾಶ = ಆದಿತ್ಯವಾರ = ಸೂರ್ಯಕೋಟಿ ಪ್ರಕಾಶ ಉಳ್ಳ ಕೃಷ್ಣಹರಿ.

೨ ವಾರದಶ ( ದಶ = ಕೋಟಿ ) = ಸೋಮವಾರ-ಚಂದ್ರಕೋಟಿ ಸುಶೀತಳನು

೩ ವಾರಪ್ರದಾಯಕಂ = ಮಂಗಳವಾರ=ಮಂಗಳವನ್ನು ಕೊಡುವವ.

೪ ವಾರಜನ ಕೊಲಿಸನೀಂ=ಬುಧವಾರ=ಬುಧಜ್ಞಾನಿಗೆ ನೀನು ಒಲಿಯುವೆ

೫ ವಾರರಿಗೆ=ಗುರುವಾರ ಸಮಸ್ತ ದೇವತೆಗಳಿಗೆ ಗುರು ಮುಖ್ಯಪ್ರಾಣ

೬ ವಾರನೆನಿಪ ಆ ಭಾರತಿ ರಮಣನಿಗೆ ಗುರು ಕೃಷ್ಣ ಗುರುಗಳಿಗೆ ಗುರು ಹರಿ

೭ ವಾರಶಿಷ್ಯರಿಗೆ=ಶುಕ್ರವಾರ-ಶುಕ್ರಾಚಾರ್ಯರ ಶಿಷ್ಯರು ದೈತ್ಯರಾಕ್ಷಸಾದಿಗಳು ಆ ದೈತ್ಯಾದಿಗಳಿಗೆ ಕ್ರೂರನಾದವ

೮ ವಾರನೆನಿಪನೆ ಸ್ಥಿರ=ಶನಿವಾರ=ಸ್ಥಿರವಾಸರ-ಸ್ಥಿರ=ನಿತ್ಯನಾದ ಶ್ರೀ ಕೃಷ್ಣನನ್ನು

೯-೧೦ ವಾರ ವಾರಕೆ ಭಜಿಪ=ಕ್ಷಣ ಕ್ಷಣಕೆ ಭಜಿಪ-ದೇವತೆಗಳ

೧೧ ವಾರಗಣ ಕೈವಾರ = ಆದಿತ್ಯವಾರ = ದೇವತೆಗಳ ಸಮೂಹಕೆ ಕೈವಾರ ಭಕ್ತಿಯಿಂ ಸ್ತೋತ್ರಮಾಡುವ ದೇವತೆಗಳ ಭಕ್ತಿಗೆವಶ.

೧೨ ವಾರಾನ್ವಯವರಿಗೆ = ಸೋಮವಾರ = ಸೋಮ ಚಂದ್ರಕುಲದಿ ಪುಟ್ಟಿದ ಪಾಂಡುವರಿಗೆ

೧೩ ವಾರರಾಜ್ಯನಸಿತ್ತು = ಮಂಗಳವಾರ = ಮಂಗಳಪ್ರವಾದದ ಹರಿಸ್ಮರಣೆಪೂರ್ವ ರಾಜ್ಯವಾಳುವ ಮಂಗಳಪ್ರದ ಮುಕ್ತಿಸಾಮ್ರಾಜ್ಯವನಿತ್ತ ಶ್ರೀ ಕೃಷ್ಣ.

೧೪ ವಾರನೇ=ಬುಧುವಾರ=ಜ್ಞಾನಿಯೇ ಸರ್ವಜ್ಞನೇ

೧೫ ವಾರಮತಿ ಕಳಿಯೋ=ಗುರುವಾರ = ಗುರುಮತಿ = ಅಹಂಮತಿ. ಕಳೆಯೋ

೧೬ ವಾರಕುಲದೀಪ=ಶುಕ್ರವಾರ=ಭೃಗುಕುಲದೀಪನಾದ ಶ್ರೀ ವೇದವ್ಯಾಸನಾದ ಕೃಷ್ಣ ಅಹಂಕಾರ ಬಿಡಿಸೆಂದು ಪ್ರಾರ್ಥನೆ

ಮುನಿಗಳಿರ್ಗ್ಗೆ ಕೇಳಿ ನಂತನ ವ್ರತದ ಮಹಿಮೆಯಿಂ ।
ದಿನಿತು ಸೌಭಾಗ್ಯದಿಂ ನಿಷ್ಕಂಟಕದಿ ರಾಜ್ಯ ।
ವನು ಭೋಗಿಸುತ ಪರಮ ಪದವಿಯಂ ಸಾರ್ದರಾ ಪಾಂಡು
ಸುತರೇ ವೇಳ್ವೆನು ॥

ಘನವ್ರತ ಮಹಾತ್ಮೆಯಿಂತೆಂದರಿದು ಭಕ್ತಿಯಲಿ ।
ಜನರನಂತನ ಭಜಿಸಲಖಿಳ ಪಾಪವನುಳಿದು ।
ವನಜಾಕ್ಷಗತಿ ಪ್ರಿಯರಾಗುತ ಚತುರ್ವಿದ ಸುಪುರುಷಾರ್ಥ
ಮಂಪಡೆವರು ॥೪೩॥

ಶೌನಕರು ಸೂತಾಚಾರ್ಯರ್ಗಂ ಪೂಜಿಸಿ ತಮ್ಮಾಶ್ರಮಕೆ ಪೊರಟರು

ಭವಿಷ್ಯೋತ್ರ ವರಪುರಾಣೋಕ್ತ ನಂತನ ಕಥೆಯ ।
ವಿವರಿಸಿದೆ ಸಂಪೂರ್ಣವಾಗಿ ನೀವೆಲ್ಲರು ।
ತ್ಸವದಿಂದಲೀ ವ್ರತವ ಕೈಕೊಂಡು ಸುಖಿವುದೆನಲಖಿಳ ಶೌನಕ
ಋಷಿಗಳು ॥

ಕವಿಶಿರೋಮಣಿಯಾದ ಸೂತ ಮುನಿಗೊಂದಿಸುತ ।
ವಿವಿಧೋಪಚಾರ ಪೂಜಗಳಿಂದ ಸತ್ಕರಿಸಿ ।
ತವಕದಿಂದಾತನಂ ಬೀಳ್ಕೊಂಡು ಬಂದು ತಮ್ಮಾಶ್ರಮಗಳಂ
ಸಾರ್ದರು ॥೪೪॥

ಕವಿಯ ಮನದುಬ್ಬಳಿಕೆ ಶ್ರೀ ಪವಿತ್ರ ಅನುಭವ

ಈ ತೆರದೊಳಮಳನಂತನ ಸುಚಾರಿತ್ರವಂ ।
ಸೂತಮುನಿ ಶೌನಕರಿ ಗೊರೆದುದಂ ಸಕಲಜನ ।
ವ್ರಾತದೋಳ್ ಸತ್ಪ್ರಾಧಿಮೆರೆಯಲಿ ಕನ್ನಡದ ಭಾಷಾ ಪ್ರಬಂಧದಿಂದ ॥
ಭೂತಳದೊಳತಿಖ್ಯಾತಿ ಯಾಗಿರುವ ತೆರದಿ ಸಂ ।
ಪ್ರೀತಿಯಿಂ ಶ್ರೀ ಮನೋಹರ ವಿರಲ ರಚಿಸಿದಂ ।
ದಾತ ತಿರ್ಮಲ ರಾಯ ನಣುಗನಾರಾಯಣನ ಮುಖದಿಂದ
ಕೃತಿಯಾಗಲು ॥ ೪೫ ॥

ಶ್ರೀಮದಾಚಾರ್ಯ ಗುರುವರ್ಯರ ಮತಾಂಬೋಧಿ ।
ಭೂಮಿಯೊಳಗಭಿವೃದ್ಧಿ ಯಾಗಿರ್ಪ ಪರಿಯಂತ ।

ಸೋಮಾರ್ಕರುಳ್ಳನಕ ಈ ಚಮತ್ಕೃತಿಯಾದ ಸತ್ಕಥಾ ಸಾರವನ್ನು |
ಈ ಮಹೀಯೊಳ್ ಸ್ಥಿರವಾಗಿ ರಾಜಿಸುವಂತೆ |
**ಪ್ರೇಮದಿಂ ಕವಿಮತಿಗೆ ಗೋಚರಿಸಿ ವರವಿತ್ತು** |
ಶ್ರೀಮನೋಹರ ವಿಠಲನೇ ಕೃತಿಯ ನೊರದನೆಂದರಿದು
ಕೇಳ್ವದು ಸುಜನರು || ೪೬

**ಕವಿಯು ಸದ್ಗುಣಗಳ ಸ್ವೀಕರಿಸಲು ಸಜ್ಜನರಿಗೆ ಪ್ರಾರ್ಥನೆ**

ಗುಣವಿದ್ದರಲ್ಲಿ ದೋಷಗಳುಂಟು, ತಥ್ಯಸ |
ದ್ಗುಣವನೇ ಸ್ವೀಕರಿಸುವರು ಸಜ್ಜನರ್ ಹಂಸ |
ಗಣ ಜಲ ಪಯಗಳೆರಡು ಮಿಶ್ರವಾಗಿರೆ ನೀರನುಳಿದು
ಕ್ಷೀರವಸೇವಿಸಿ |
ಕುಣಿದಾಡುವಂತೆ ಬುಧರೀಸು ಪ್ರಬಂಧದೊ |
ದ್ಗುಣ ಪ್ರಾಸು ವಡಿನೇಮ ಲಕ್ಷಣ ದೋಳೂಣೆಯಿರ |
ಲಣಕವಾಡದೆ ಪೂರ್ಣ ಮಾಡಿ ಕೃಪೆಯಂ ಮೆರದು ಸುಗುಣರಂಗೀ
ಕರಿಪುದು || ೪೭ |

ಭಾರತೀತಿಹಾಸ ರಾಮಾಯಣಸು ಭಾಗವತ |
ಪೌರಾಣ ಶರಧಿಗಳ ಮಥಿಸಿ ಕವಿಜನರು ತ |
ತ್ಸಾರಾಮೃತದ ಸವಿಯ ಕೊಳ ಕೊಳಲು ಮೇಲುಳಿದ
ರಸವಲ್ಪವಿರಲು ಹರಿಯಾ |
ಕಾರುಣ್ಯದಿಂದ ಸಂಪಾದಿಸಿಳೆಯೊಳ್ ರಸಿಕ |
ಸಾರ ಹೃದಯರ್ಗೆರೆಯೆ ಕೈಕೊಳರೆ ಕರುಣದಿಂ |
ಶ್ರೀ ರುಗ್ಮಿಣೀಶನಾ ವಿದುರ ನೆರಿವಾಲಿ (ವಾಲಿ) ತ್ತರೊಲಿದು
ಸ್ವೀಕರಿಸಿದಂತೆ || ೪೮ |

**ರಮಾಪತಿಯ ಗುಣ ವರ್ಣಿಸದ ಕಾವ್ಯ ವ್ಯರ್ಥವೆನೆ**

ಪತಿಭಕ್ತಿಯಿಲ್ಲದಂಗನೆ ಸರ್ವ ವಿಷಯ ವ |
ರ್ಜಿತನಲ್ಲದಿಹ ಮೌನಿ ನಾಶಿಕಿಲ್ಲದ ಮುಖಂ |
ಸುತರಿಲ್ಲದರ ಬಾಳ್ವೆ (ಳ್ವೆ) ನತಿ ಇಲ್ಲದನ ಭೋಗ ಜ್ಯೋತಿಯಿಲ್ಲದ
ಮೌಕ್ತಿಕಾ |

ಘೃತವಿಲ್ಲದೂಟ ಸಜ್ಜನರಿಲ್ಲದಾ ಸ್ಥಾನ ।
ಮತಿಯಿಲ್ಲದನ ಸಂಗ **ಶ್ರೀ ರಮಾಪತಿಯ ಗುಣ ।**
**ಸ್ತುತಿಗಳಿಲ್ಲದ ಕಾವ್ಯರಚನೆ ವ್ಯರ್ಥಂ** ಮಿತ್ರನಿಲ್ಲದಾ ಕಾಶ
ದಂತೆ ॥ ೪೯ ॥

ನವರಸಾಲಂಕಾರಯುಕ್ತವಾದ ಈ ಮಹಾ ಕಾವ್ಯ ಪ್ರೌಢಿಮೆ ಹಿರಿಮೆ
ಳ ಪದ್ಯದಲ್ಲಿ

ಅದರಿಂದಲೀ ಕಥಾ ಸಾರದೋಳಾವಲ್ಲಿ ।
ಮದನ ಜನಕನ ಮಹಿಮೆ ತದ್ದಾಸ ಜನಚರ್ಯ ।
ಸದಮಲ ಸುಧರ್ಮ ನೀತಿಗಳಿಂದ ಸಂಪೂರ್ಣವಾಗಿರ್ಪುದೀ
ಕೃತಿಯೊಳು ॥

ಪದದ ಪ್ರೌಢತ್ವಮಂ ನವರಸಾಲಂಕಾರ ।
ಬೆದಕಲಾಗದು ಬಲ್ಲ ಜಾಣರೀ ಸುಚರಿತ್ರೆ ।
ಮದ ಮತ್ಸರಂ ಬಿಟ್ಟು ಭಕ್ತಿಯಿಂ ಕೇಳ್ಪಡತಿ ಪುಣ್ಯ ದೊರೆವದು
ಜನರಿಗೆ ॥ ೫೦ ॥

ಹರಿಯ ಬಸಿರೊಳ್ಗಖಿಳ ಲೋಕಗಳಡಗುವ್ಪೋಲ್ ।
ಶರಧಿಯೋಳ್ಗಂಗಾದಿ ನದಿಗಳಡಗುವವ್ಪೋಲ್ ।
ತರಣಿ ಪ್ರಭೆಯೊಳು ಸಕಲ ತೇಜಂಗಳಡಗುವ್ಪೋಲ್ ಭಾರತದ
ಸತ್ಕಥೆಯೊಳು ॥

ವರಪುರಾಣಗಳೆಲ್ಲಡಗುವಂತೇ ಪುಣ್ಯತರ ।
ಪರಮ ಪಾವನವಾದನಂತನ ಮಹಾತ್ಮೆಯೋಳ್ ।
ನರರು ರಚಿಸಿದ ಕಾವ್ಯ ರಚನೆಂಗಳಡಗುವದು ಚಿತ್ರವೇನೀ
ಧರೆಯೊಳು ॥ ೫೧ ॥

ಋತುಗಳೊಳ್ ಸುವಸಂತ ಮಾಸದೊಳು ಮಾರ್ಗಶಿರ ।
ವ್ರತದೊಳೇಕಾದಶಿಯು ಮತದೊಳಗೆ ಶ್ರೀ ಮಧ್ವ ।
ಮತಕ್ಷೇತ್ರಗಳೋಳ್ ಕಾಸಿ ಬಿಲ್ಲಾಳಿನೋಳ್ಮದನ ವಿದ್ಯಂಗಳೋಳ್
ಕವಿತ್ವಾ ॥

ಅತಿಶಯ ಸ್ಥಾನದೋಳ್ ವೈಕುಂಠ ಸನ್ಮಂತ್ರ ।

ಪ್ರತತಿಯೊಳ್ ಗಾಯಿತ್ರಿ ಸರ್ವೇಂದ್ರಿಯೊಳ್ ನಯನ ।
ಕ್ಷಿತಿಯೊಳಗ ಸತ್ಕಥಾ ಜಾಲದೊಳಗುತ್ತುಮವನಂತನ ಕಥಾ
ಪ್ರಸಂಗ ॥ ೫೨ ॥

ದೇವರೊಳಗಗ್ಗಳಿಯ ನಾವನೀ ಜಗದೊಳಗೆ ।
ದೇವಕೀ ತನಯನಲ್ಲದೆ ಗುರುಗಳೊಳಗಧಿಕ ।
ನಾವನೀ ಶ್ರೀ ಪೂರ್ಣ ಪ್ರಜ್ಞರಲ್ಲದೆ ಕಾಂತೆಯಲ್ಲಿರವಿಗಿಂದ ಮಿಗಿಲು ॥
ಆವನೀ ಚಂದ್ರಾದಿ ನಕ್ಷತ್ರ ನಿಕರದೊಳ್ ।
ಪಾವನತ್ವದಲಿ ಜಾಹ್ನವಿಗೆ ಸರಿಯಾವುದೀ ।
ಭೂವಲಯ ದೊಳಗಾವ ಕಥೆಗಳೀಡೆಲ್ಲಮುಳನಂತನ
ಸುಚಾರಿತ್ರಕೆ ॥ ೫೩ ॥

ಅನಂತ ಕಥೆಯ ಅಪಾರ ಮಹಿಮೆ

ಪಂಚಮ ಶ್ರುತಿ ಭಾರತದ ಕಥೆಯನನು ಸರಿಸಿ ।
ವಂಚನಿಲ್ಲದೆ ಭವಿಷ್ಯೋತ್ತರ ಪುರಾಣೋಕ್ತ ।
ಮಿಂಚಾದನಂತನ ಚರಿತ್ರೆಯ್ಂ ಪೇಳ್ದಿನಾ ಜ್ಞಾನಿಗಳ್ಮೆಚ್ಚುವಂತೆ ॥
ಚಂಚಲದ ಮನವಮಾಡದಖಿಳಜನ ಕೇಳಲಾ ।
ಸಂಚಿತಾಗನು ದೋಷದಿಂ ಮುಕ್ತರಾಗುತ ವಿ ।
ರಂಚಿ ಪಿತ ಶ್ರೀಮನೋಹರ ವಿಠಲನಾಚರಣಕಮಲ
ದೊಲು ಮಿಯಪಡೆವರು ॥ ೫೪ ॥

ಶ್ರೀಮನೋಹರ ವಿಠಲನಂತ ರೂಪನ ಮಹಿಮೆ ।
ಭೂಮೀಶ ಪಾಂಡುವರ ಕೌಂಡುಣ್ಯನಾಖ್ಯಾನ ।
ನೇಮದಿಂ ಕೇಳ್ವರ್ಗೆ ಸೌಭಾಗ್ಯ ಮಾರೋಗ್ಯಮಾಯು
ಷ್ಯಮಭಿವೃದ್ಧಿಯು ॥
ಆ ಮಹಾ ಕೀರ್ತಿ ಸತಿ ಸಂತತಿ ಸುಶಾಂತಿ ಧೃತಿ ।
ರಾಮಣೀಯಕ ಜ್ಞಾನ ಶತ್ರುಜಯ ಸ್ವರ್ಗಸುಖ ।
ಕಾಮಿಸಿದ ಬಯಕೆ ವಿದ್ಯಾಪ್ರತತಿ ಹರಿಭಕ್ತಿ ಧೃಡವಾಗಿ
ಕೈಸಾರ್ವವು ॥ ೫೫ ॥

ಮಾನವರಾಚರಿಸೆ ಮಹಾಫಲ ವೀವುದು

ಮಾನವ ಬಿಡದಾವ ಕಾಲದೊಳೀ ಕಥೆಯ ।

ಜ್ಞಾನಪೂರ್ವಕದಿಂದ ಪಠಿಸಿ ತನು ಮಾಂಜ್ಯನಕೆ ।
ಸಾನುರಾಗವನಿತ್ತು ಶುದ್ಧಿ ಮಾಳ್ಪುದು ದೂರಗೈಸುವದಘೌಘಗಳನು ॥
ಭೂನಾಥ ಭಯ ಚೋರ ಕಲಿದೈತ್ಯ ಶಸ್ತ್ರಭಯ ।
ಕಾನನದ ಮೃಗನಕ್ರ ವಾಘ್ರ ಭೂತಾಗ್ನಿ ಜಲ ।
ಮಾನೆ ರಿಪುಭಯ ಮ (ಹೋರುಗ) ಹಾರೋಗಗರಳ ಜ್ವರನರಕ ಭಾದೆ
ಭಯಯಿಲ್ಲವೆಂದು ॥ ೫೬ ॥

ತೀರ್ಥಸ್ನಾನ ಯಜ್ಞ ಯಾಗಾದಿಕಿಂತ ಹೆಚ್ಚಿನ ಫಲ.

ಕೃತುಹೋಮ ಜಪತಪ ಸ್ವಾಧ್ಯಾಯ ಸಚ್ಛಾಸ್ತ್ರ ।
ಶ್ರುತಿ ಪುರಾಣ ಶ್ರವಣ ಪುಣ್ಯಯೋಗ ಧ್ಯಾನ ।
ವ್ರತದಾನ ಧರ್ಮೋಪಕಾರ ತೀರ್ಥಸ್ನಾನ ಕ್ಷೇತ್ರವಾಸದ ಫಲಗಳು ॥
ಅತಿಶಯ ತಟಾಕವನ ವಾಪಿಕೂಪ ಪ್ರಪಾ ।
ಮತುಳ ದೇವಾಲಯ ಪ್ರತಿಷ್ಠೆ ಹರಿಪೂಜೆಯ ಸು ।
ಕೃತವಹುದ ನಂತನ ಚರಿತ್ರೆ ಯೊಳಗೊಂದು ಪದಭಕ್ತಿಯಿಂ
ಕೇಳ್ದವರ್ಗೆ ॥ ೫೭ ॥

ಇದು ಸಕಲದುರಿತನಾಶ ಪುಣ್ಯರಾಶಿ

ಇದು ದುರಿತ ವಿಪಿನ ದಾವಾನಳಂ ಧಿಟ ಬಗೆವ ।
ಡಿದು ದುರಿತ ಮೇಘ ಪ್ರಭಂಜನಂ ಭಾವಿಸುವ ।
ಡಿದು ಖೂಳ ಜನನಂಧಕಾರ ಸಂಹರ ಕಾರಣಾ ಚಂಡಕರನುದಯವು ॥
ಇದುಕೇಳ್ವ ಮನುಜರಿಗೆ ಕರ್ಣಾಮೃತದ ಸಾರ ।
ವಿದು ಪುಣ್ಯ ವಿಮಳ ಪೀಯೂಷ ಪಾರಾವಾರ ।
ವಿದು ಸುಜನ ಹೃತ್ಕುಮುದ ಕೋರಕಕೆ ಚಂದ್ರನಂತನ ಸತ್ಕಥಾ
ಪ್ರಸಂಗ ॥ ೫೮ ॥
ಇದು ಮಹಾ ಶೋಕಾಬ್ಧಿಯಂ ಶೋಷಣಂ ಮಾಳ್ಪ ।
ದಿದು ಘೋರ ಸಂಸಾರ ವ್ಯಾಧಿ ಭೇಷಜ ಸತ್ಯ ।
ವಿದು ಮುಕ್ತಿ ಪಥಕೆ ಸೋಪಾನವಾದಿವಿ ಲೋಕ ಮಾರ್ಗಕಿದೆ
ನಿಚ್ಚಣಿಕೆಯೂ ॥

ಈ ಕಾವ್ಯವು ಪಂಡಿತರಿಗೆ ಶ್ರವಣಾಭರಣ

ಇದು ತತ್ವ ನಿಳಯ ಮಾಶ್ರೈಸು ವಡೆಯೋಗಿ ಗಳಿ ।

ಗಿದು ಪಂಡಿತರ ದಿವ್ಯ ಶ್ರವಣಗಳಿಗಾ ಭರಣ ।
ವಿದು ಬೇಡಿದಿಷ್ಟಾರ್ಥಗಳ ನೀವಸುರ ಭೋಜ ನಂತನ ಚರಿತ್ರೆ
ಜಗಕೆ ॥ ೫೯ ॥

**ನಿತ್ಯ ಆರಗಳಿಗೆಯಾದರೂ ಕಾವ್ಯಪರಿಸಿರಿ.**

ಆರುವತ್ತು ಘಳಿಗ ಯೋಳೊಂದು ದಿವಸದೊಳು ನ ।
ಶ್ವರ ಸುಖಕೆ ವ್ಯೆಗೊಡದೆ ದುಃಖತರ ಸಂಸಾರ ।
ಶರಧಿಯೋಳ್ಮುಳುಗಿರದೆ ಪರಮ ಪಾವನಪಾದ ನಂತನ ಚರಿತ್ರೆಗಳನು ॥
ಆರಘಳಿಗೆ ಮಾತ್ರದಲಿ ಭಕ್ತಿ ಪೂರ್ವಕದಿಂದ ।
ನರರು ಕಿವಿಗೊಟ್ಟಾಲಿಸಿದರೆ ತಾಪತ್ರಯದ ।
ಜ್ವರದಿಂದ ಮುಕ್ತರಾಗುತ ಮಹಾಶಾಂತಿಯಂ ತಾಳ್ದು ಸುಗತಿಯು
ಪಡೆವರು ॥ ೬೦ ॥

**ಈ ಕಾವ್ಯವಂಬರದೋದಿ ಕೇಳ್ವರಿಗೆ ಮಹಾ ಫಲವೀವುದು**

ಈ ಕಥೆಯು ಬರದೋದಿ ಪೇಳ್ದರ್ಗೆ ಕೇಳ್ವರ್ಗೆ ।
ಬೇಕಾದ ಸೌಭಾಗ್ಯಗೂಡುವವು ಪೋಡುವವು ।
ಶೋಕ ಭಯ ಕಲಿತಾಪ ಬಾಧೆಗಳ ವ್ಯಾಧೆಗಳಸಿಲ್ಲದಾಕ್ಷಣ ಧರೆಯೊಳು॥
ರಾಕೇಂದು ಸೂರ್ಯೋಪರಾಗದಲಿ ತ್ಯಾಗದಲಿ ।
ಭೂ ಕನಕ ಮಣಿ ಧೇನು ದಾನಗಳ ಸ್ನಾನಗಳ ।
ನೇಕ ಮಾಡಿದ ಪುಣ್ಯ ಸೇರುವದು ತೋರುವದು ಹರಿಪುರದ
ಸನ್ಮಾರ್ಗಕೆ(ವು) ॥ ೬೧ ॥

**ಕಾವ್ಯಾಂಗನೆಗೆ ಬುಧರು ಮನಸೋಲ್ದಿರುವರೆ**

ಅತುಳಾನ್ವಯದೊಳುದಿಸುತೆತಿ ಗಣಗಳೊಡನಾಡು ।
ತತಿಶಯ ಸ್ವರೂಪ ಸದ್ಗುಣ ಲಕ್ಷಣವಾಂತು ।
ಸತತ ತೊಳಗುವ ಸುವರ್ನಾಂ ಬರವ ಶ್ರೀಂಗಾರವಾದಲಂಕಾರದಿಂದ ॥
ಚತುರ ಪದಗತಿಯು ಸಾರಸ ಧ್ವನಿಯು ವಚನದಿಂ ।
ದತಿ ರಮ್ಯವಾಗಿ ಕಂಗೊಳಿಪ ಕಾವ್ಯಂಗನಿಯು ।
ರತಿಗೊಳಿಸಿ ಮನಸೋಲ್ದು ಮೋಹಿಸದೆ ಮಾಣ್ದಪರೆ ಭಾವುಕರು
ಸಂಭ್ರಮದಲಿ ॥ ೬೨ ॥

**ಕಾವ್ಯಕಲ್ಪದ್ರುಮಕೆ ಶಾಖೆ ಫಲಗಳೇನು?**

ಹರಿಯ ಕರುಣಾಮೃತವ ನೆರದೆರದು ಬೆಳಸಿರ್ದ ।
ಧರೆಯೊಳೀ ಕಾವ್ಯವೆಂಬೊಂದು ಕಲ್ಪದ್ರುಮಕೆ ।
ಮೆರವ ವಿಟಪಂಗಳೀ ನವಸಂಧಿ ಯೇಳನೂರೆಂಭತ್ತು ಷಟ್ಪದಿಗಳೀ ॥
ವರಮಧುರ ತನಿವಣ್ಗಳಾಗಲವು ಮರುದೀಶ ।
ಗುರು ಮಧ್ವ ಮೌನಿಗರ್ಪಿತವಾದ ಬಳಿಕಿನ್ನು ।
ಹರುಷದಿಂ ಸಜ್ಜನರು ತತ್ಫಲದ ರಸ ಸುರಿದು ಕೊಂಡಾಡರೇ
ನವಿಯನು ॥ ೭೩ ॥

**ಕಾವ್ಯ ಮಣಿಮಾಲಾ ಪೋಣಿಸಿ ಹರಿಗೆ ಅರ್ಪಿಸಿದರೆನೆ**

ನವಸಂಧಿಯೆಂಬ ದೃಢಸೂತ್ರದಿಂದೀ ಕೃತಿಯ ।
ವಿವಿಧ ವರ್ಣದೊಳೆಸವ ಶ್ಲೋಕಗಳೆಂಬಾ ಮಣಿಯ ।
ನಿವಹಮಂ ಪೋಣಿಸುತ ಜ್ಞಾನ ಭಕ್ತಿಗಳೆಂಬ ಕರವೆರಡನುಂ ಪೊಂದಿಸಿ ।
ನವರತ್ನಮಾಲಿಗಳ ಕುಶಲತ್ವದಿಂ ರಚಿಸಿ ।
ಭುವನಪತಿ ಶ್ರೀ ಮನೋಹರ ವಿಠಲನಾ ರಾಜಿ ।
ಸುವನಂಘ್ರಿಗಿಡಲು ಶರಣನ ಸೇವೆ ಕೈಕೊಂಡು ಪೊರದಂ ಪ್ರಸನ್ನತೆ
ಯೊಳು ॥ ೭೪ ॥

**ಜಯಪ್ರದ ಮಂಗಳ ಸ್ತೋತ್ರ**

ಜಯ ಜಯತು ಸುರಗೀತ ವಿಖ್ಯಾತ ವರದಾತ ।
ಜಯ ಜಯತು ನಿಶ್ಚಿಂತ ಬಲವಂತ ಗುಣವಂತ ।
ಜಯ ಜಯತು ಶ್ರೀರಮಣ ಶರಣಜನ ಪ್ರತಿಹರಣ ಘನಕರುಣ
ನಾರೇಯಣ ॥
ಜಯ ಜಯತು ಜಗಧೀಶ ಖಳನಾಶ ಬುಧಪೋಷ ।
ಜಯ ಜಯತು ಕವಿಗೇಯ ಶುಭಕಾಯ ಯದುರಾಯ ।
ಜಯ ಜಯತು ನಿಷ್ಕುಟಿಲ ಶ್ರೀಮನೋಹರ ವಿಠಲ ಪಾಹಿನಿಟಿಲಾಕ್ಷ
ಪಾಲಾ ॥ ೭೫ ॥

ಮಂಗಳಂ ಝುಷಕೂರ್ಮ ಕಿಟಿನಾರಸಿಂಹಂಗೆ ।
ಮಂಗಳಂ ವಾಮನಂ ಪರಶುಧರ ರಾಮಂಗೆ ।

ಮಂಗಳಂ ಶ್ರೀ ಕೃಷ್ಣ ಬುದ್ಧಾವತಾರಂಗೆ ಮಂಗಳಂ ಕಲಿನಾಶಗೆ ||
ಮಂಗಳಂ ವಿಷ್ಣು ಮಧುರಿಪು ಕಮಲ ನೈನಂಗೆ |
ಮಂಗಳಂ ಭಕ್ತರಂ ಪೊರೆವ ಗರುಡಧ್ವಜಗೆ |
ಮಂಗಳಂ ಶ್ರೀ ಮನೋಹರ ವಿರಲನಂತರೂಪನಿಗೆ ಸದ್ಗುಣ
ಸಾಂದ್ರಗೆ || ೬೬ ||

ಇತಿ ಶ್ರೀ ಭವಿಷ್ಯೋತ್ತರ ಪುರಾಣೋಕ್ತ ಶ್ರೀಮದನಂತನ ಕಥಾಪ್ರಸಂಗೆ
ಕನ್ನಡ ನವರಸಾಲಂಕಾರಯುಕ್ತ ಮಹಾಕಾವ್ಯೇ ಪೀಠಿಕಾ ಸಂಧಿಸಹ

**ಹತ್ತನೇ ಸಂಧಿ ಸಮಾಪ್ತ ಮಂಗಳಂಮಾಹ.**

|| ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣ ಮಸ್ತು ||

---

## — ವಿನಂತಿ —

ನನ್ನ ದೇಹಾಲಸ್ಯ ಅವಕಾಶವಿಲ್ಲದ್ದಕ್ಕೆ ಹಿಂದೆ ಬಿನ್ನೈಸಿದಂತೆ ವಾವಿ ಶ್ಲೋಕಗಳ ಅರ್ಥ ಯಾರೂ ಬರೆದು ಕಳ್ಸಲಿಲ್ಲ ಶ್ರಮಪಟ್ಟು ಆರನೇ ಸಂಧಿಯಿಂದ ವಾವಿಪದ್ಯ, ಶ್ಲೇಷಾಲಂಕರ ಇತರ ಕೆಲವು ಕಠಿಣ ಪದ್ಯಗಳ ಅರ್ಥಗಳನ್ನು ಆಯಾ ಪದ್ಯದ ಅಡಿಯೇ ಕೊಟ್ಟಿದೆ. ಆದರೆ,

೫ ನೇ ಸಂಧಿ ಪದ್ಯ೧ ೬ನೇ ನಂಧಿ ಪದ್ಯ(೩)ಮಾತ್ರ ಶ್ರೀ ಹನುಮತುರಾವ ಹೆಡ್‌ಮಾಸ್ತರ ಶ್ರೀ ವರದೇಂದ್ರ ಅರ್ಚಕ ಲಿಂಗಸೂಗೂರ ಬರೆದು ಕಳಿಸಿದ್ದಾರೆ. ಇವೆರಡು ಪದ್ಯಗಳ ಅರ್ಥ ಹಿಂದೆ ಕೊಟ್ಟಿಲ್ಲ ಅವರು ಬರೆದುದರಲ್ಲಿ ಶ್ರೀ ವೇ||ದಾಸಾಚಾರ್ಯ ತಂಗೋಡ ಕೀರ್ತನಕಾರ ಗದಗ ಇವರಿಂದ ಸಂಶೋಧಿಸಿ. ಸರಿಪಡಿಸಿ ಇಲ್ಲಿ ಅರ್ಥಕೊಡಲಾಗಿದೆ

೧ ಕನಕೋದರೋದ್ಭವನ=ಬ್ರಹ್ಮನಮಗ=ಮರಿಚಿಯಮಗ. ಕಶ್ಯಪ ಕಶ್ಯಪನ ಮಗ ಇಂದ್ರನ

೨ ಮೊಮ್ಮಗನ=ಇಂದ್ರನ

೩ ಮೊಮ್ಮಗನ=ಇಂದ್ರಪುತ್ರ ಅರ್ಜುನನ ಮಗ ಅಭಿಮನ್ಯುನ

೪ ತನುಜಂಗೆ=ಮಗನಾದ ಪರಿಕ್ಷಿತರಾಜಗೆ

೫ ಕಥೆಪೇಳ್ದವನ=ಶ್ರೀ ಮದ್ಭಾಗವತ ಕೃಷ್ಣ ಕಥೆಪೇಳ್ದ ಶುಕಾಚಾರ್ಯರ
೬ ಪಿತನ=ಶುಕ್ರಾಚಾರ್ಯರ ತಂದೆ ವೇದವ್ಯಾಸರ
೭ ತತ್ಪಿತನ ತಂದೆ ಪಾರಾಶರ ಋಷಿಗಳ
೮ ವನಿತೆ=ಸತ್ಯವತಿ (ಯೋಜನಗಂಧಿಯು)
೯ ಅರಸನ=ಶಂತನು ಚಕ್ರವರ್ತಿ
೧೦ ಮಗನ=ಭೀಷ್ಮರನ್ನು
೧೧ ಪಡೆದವಳ=ಗಂಗಾದೇವಿಯು
೧೨ ಪಡೆದವಳ=ಲಕ್ಷ್ಮೀದೇವಿಯು ಗಂಗೆ ವಿಷ್ಣು ಪಾದೋದ್ಭವಳು ಆದರೂ ಲಕ್ಷ್ಮೀ ದ್ವಾರವೇ ಎಲ್ಲ ಸೃಷ್ಟಿ
೧೩ ನಿಜವನಯೇ=ಕಮಲಾಲಯೆ ಕಮಲ
೧೪ ಸಖನ=ಸೂರ್ಯ=೧೫ ಸುತನ=ಸುಗ್ರೀವನ
೧೬ ಜನನಿಯ ಗರ್ಭಸಂಜಾತ-ವಾಲಿಯ ೧೭ ಜಾತನ್ನ=ಅಂಗದನ
೧೮ ವಿನಯನುಡಿ ಜರಿದವನ=ಅಂಗದತಿಷ್ಠಾಯಿಕೇಳದ ರಾವಣನ
೧೯ ಸಹಭವನ=ಒಡಹುಟ್ಟಿದ ಕುಂಭಕರ್ಣನ ೨೦ ಸಹಭವನ = ವಿಭೀಷಣನ ೨೧ ಘನಕರುಣದಿಂ ಪೊರೆದದೇವನಂ=ವಿಭೀಷಣನನ್ನು ಪೊರೆದ ಶ್ರೀರಾಮ ಚಂದ್ರದೇವ ೨೨ಕಾವನಂ = ಸಕಲಜಗತ್ತು ಪಾಲನ ಮಾಡುವವನು ಇಂಥ ಶ್ರೀ ರಾಮಚಂದ್ರ ದೇವರನ್ನು ಸ್ಮರಿಸಿ ಮುಂಗಥೆ ಪೇಳ್ವೆನು=ಸ್ಮರಣೆಮಾಡುತ್ತ ಮುಂದಿನ ಕಥೆಯನ್ನು ಪೇಳ್ವೆನೆಂದು ೫ ನೇ ಸಂಧಿ ಆದಿಯಲ್ಲಿ ಮಂಗಳಾಚರಣೆ ಮಾಡಿರುವರು

## ಶ್ರೀ ಅನಂತನ ಕಥಾ (೬) ಪದ್ಯ ೩

೧ ಭೇರಿ ನಾಮದ ೩ಳನ ೨ ಕೊಂದವನ ಕೊಂದವನ ।
೩ ನಾರಿಯಂ ೪ ಪಡೆದವಳ ೫ ತನುಭವನ ೬ ತನುಭವನ ।
೭ ವಾರಣವ ೮ ತರಿದವನ ೯ ಸಂಭವನ ೧೦ ಸಂಭವನ
೧೧ ಮಾತುಳನ ೧೨ ಮಾತುಳನನು ॥
೧೩ ಆರಜನಿಯೋಳ್ ಸೀಳ್ದವನ ೧೪ ಸತಿಯ ಪತಿವ್ರತೆಯ ।
೧೫ ಚಾರುಚರಣಾಬ್ಜಮಂ ಭಕ್ತಿಯಿಂ ಮುಕ್ತಿಯಿಂ ।
ದಾರಾಧಿಸುತ ಸತತಸದ್ಗತಿಯಸನ್ಮತಿಯನಿಚ್ಛೈಸುವೆನುಮನದೊಳು॥೩॥

೧ ಭೇರಿನಾದದ ಖನನ = ದುಂದುಭಿ, ರಕ್ಷಸನ
೨ ಕೊಂದವನ, ಕೊಂದವನ = ವಾಲಿ, ರಾಮನ,
೩ ನಾರಿಯಂ = ಸೀತಾದೇವಿಯನ್ನು
೪ ಪಡೆದವಳ = ಭೂದೇವಿಯ
೫ ತನುಭವನ = ನರಕಾಸುರನ
೬ ತನುಭವನ = ಭಗದತ್ತನ
೭ ವಾರಣಂ = ಸುಪ್ರತೀಕವೆಂಬ ಆನೆಯನ್ನು
೮ ತರಿದವನ = ಅರ್ಜುನನ
೯ ಸಂಭವನ = ಅಭಿಮನ್ಯುನ
೧೦ ಸಂಭವನ = ಪರಿಕ್ಷಿತನ
೧೧ ಮಾತುಳನ = ಉತ್ತರನ
೧೨ ಮಾತುಳನ = ಕೀಚಕನನ್ನು ರಾತ್ರಿ ಕಾಲದಲ್ಲಿ ಸಂಹರಿಸಿದ
೧೩ ಸೀಳ್ದವನ = ಶ್ರೀ ಭೀಮಸೇನ ದೇವರ
೧೪ ಸತಿಯ ಪತಿವೃತಯ = ದ್ರೌಪದೀದೇವಿಯರು ಅರ್ಥಾತ ಭಾರತೀದೇವಿಯರ

೧೫ ಚಾರುಚರಣಾಬ್ಜಮಂ ಭಕ್ತಿಯಿಂ = ಮನೋಹರವಾದ ಪಾದ ಕಮಲಗಳನ್ನು ಪೂಜಿಸುವ ಶ್ರೀ ಭಾರತೀದೇವಿಯರು ಭಕ್ತ್ಯಾಭಿಮಾನಿಗಳಾದ ಕಾರಣ ಅವರ ಅನುಗ್ರಹದಿಂದಲೇ

೧೬ ಮುಕ್ತಿಯಿಂ - ಸುಜ್ಞಾನ ಭಕ್ತಿಯಿಂದಲೇ ಮುಕ್ತಿ ಕಾರಣ ಇಂಥ ಸದ್ಗತಿದಾಯಕಳಾದ ಭಾರತೀದೇವಿಯರನ್ನು ಆರಾಧನೆ ಮಾಡುತ್ತ ಈ ಕಾವ್ಯ ರಚಿಸಲು ಸನ್ಮತಿ ಪ್ರದಾಯಕರೆಂದು ಮನವಿ ನಿಶ್ಚೈಸುವೆ


ಮುಗಿದುದು.
